ಶ್ರೀವಿದ್ಯಾಮಾನ್ಯ

# ಗೀತಾಪ್ರಸೂನಮಾಲಾ

(ಶ್ರೀಶ್ರೀವಿದ್ಯಾಮಾನ್ಯತೀರ್ಥಶ್ರೀಪಾದರು ಮಾನವಿ ಕ್ಷೇತ್ರದಲ್ಲಿ
ಚಾತುರ್ಮಾಸ್ಯ ಕೈಗೊಂಡಾಗ ನಡೆಸಿದ ಭಗವದ್ಗೀತಾ ಉಪನ್ಯಾಸದ ಸಂಗ್ರಹ)

ಪ್ರಕಾಶಕರು

ಶ್ರೀಭಾಗವತಾಶ್ರಮ ಪ್ರತಿಷ್ಠಾನ
ಶ್ರೀಭಂಡಾರಕೇರಿ ಮಠ
ಬೆಂಗಳೂರು

**ಶ್ರೀವಿದ್ಯಾಮಾನ್ಯಗೀತಾಪ್ರಸೂನಮಾಲಾ :** ಶ್ರೀ ಶ್ರೀವಿದ್ಯಾಮಾನ್ಯತೀರ್ಥ ಶ್ರೀಪಾದರು ಮಾನವಿ ಕ್ಷೇತ್ರದಲ್ಲಿ ಹೇವಿಲಂಬಿ ಸಂವತ್ಸರದಲ್ಲಿ (ಸನ್ ೧೯೫೭) ಚಾತುರ್ಮಾಸ್ಯ ಕೈಗೊಂಡಾಗ ನಡೆಸಿದ ಭಗವದ್ಗೀತಾ ಉಪನ್ಯಾಸಗಳನ್ನು ಶ್ರೀ ಶಿರವಾರ ರಾಮಚಂದ್ರರಾಯರು ಸಂಗ್ರಹಿಸಿದ್ದು.

**ಸಮರ್ಪಣೆ:** ಶ್ರೀವೇದವ್ಯಾಸ ಜಯಂತೀ, ೭೦ ನೇ ಮಾಧ್ವರಾದ್ಧಾಂತ ಸಂವರ್ಧಕಾ ಸಭಾ ಹಾಗೂ ಶ್ರೀವಿದ್ಯಾಮಾನ್ಯತೀರ್ಥರ ೧೨ನೇ ಆರಾಧನೆಯ ಶುಭಸಂದರ್ಭದಲ್ಲಿ (೩.೫.೨೦೧೨) ಮಾನ್ವಿ ಸಂಜೀವರಾಯರ ಕ್ಷೇತ್ರದಲ್ಲಿ ಶ್ರೀಭಂಡಾರಕೇರಿ ಮಠಾಧೀಶರಾದ ಶ್ರೀವಿದ್ಯೇಶತೀರ್ಥ ಶ್ರೀಪಾದರಿಂದ ಬಿಡುಗಡೆಯಾದ ಗ್ರಂಥವು.

**ಮೊದಲ ಮುದ್ರಣ:** ೧೯೮೪ (ಶ್ರೀ ರಾಘವೇಂದ್ರಸ್ವಾಮಿ ವೃಂದಾವನ ಸಮಿತಿ ಬಾಗಲಿಂಗಪಲ್ಲಿ, ಹೈದರಾಬಾದ್)

**ದ್ವಿತೀಯ ಪರಿಷ್ಕೃತ ಮುದ್ರಣ:** ೨೦೧೨



**ಪ್ರಕಾಶನ:** ಶ್ರೀಭಾಗವತಾಶ್ರಮ ಪ್ರತಿಷ್ಠಾನ, ಶ್ರೀಭಂಡಾರಕೇರಿ ಮಠ, ಬೆಂಗಳೂರು

**ಪ್ರತಿಗಳು:** ೧೦೦೦

ಮುಖಪುಟ ವಿನ್ಯಾಸ: ಶ್ರೀ ಕೆ. ಎಮ್. ಶೇಷಗಿರಿ

ಮುದ್ರಣ: ಬೃಂದಾವನ್ ಪ್ರಿಂಟರ್ಸ್, ಬೆಂಗಳೂರು

# ಶ್ರೀ ಶ್ರೀಪಾದಂಗಳವರು ಮುದ್ರಣಕ್ಕೆ ಅಪ್ಪಣೆ ಕೊಟ್ಟದ್ದು

ಶ್ರೀ ಗೀತೆಯ ಅರ್ಥಾನುವಾದವನ್ನು ನಾವು ಉಪನ್ಯಾಸದಲ್ಲಿ ಹೇಳಿದಂತೆಯೇ ಶಿರಿವಾರ ರಾಮಚಂದ್ರರಾಯರು ಬರೆದಿಟ್ಟಿದ್ದಾರೆ. ಇದು ಮುದ್ರಣವಾದರೆ ಅನೇಕರಿಗೆ ಉಪಕಾರವಾಗುವುದು.

ಶ್ರೀ ಶ್ರೀ ವಿದ್ಯಾಮಾನ್ಯತೀರ್ಥ ಶ್ರೀಗಳವರು
ಶ್ರೀ ಉಡುಪಿ ಭಂಡಾರಕೇರಿ ಮಠ ಮತ್ತು ಫಲಿಮಾರು ಮಠ

# ಮೊದಲ ಆವೃತ್ತಿಗೆ ಅನುಗ್ರಹ ವಚನ

ಭಗವಂತನ ಕಡೆಗೆ ಸಾಗಲು ಆವಶ್ಯಕವಾದ ಎಲ್ಲಾ ಸಾಧನಗಳನ್ನು ನಿರೂಪಿಸಿದ ಮಹಾಕೃತಿಯೇ ಭಗವದ್ಗೀತೆ. ಸಂಸಾರದಿಂದ ಬಿಡುಗಡೆ ಪಡೆಯಲು ಜ್ಞಾನವೊಂದೇ ಸಾಕು. ಭಕ್ತಿ, ಪ್ರಸಾದ, ಸತ್ಕರ್ಮ ಇವುಗಳ ಆವಶ್ಯಕತೆ ಇಲ್ಲವೆಂದು ಕೆಲವರ ವಾದ. ಸಂಸಾರವೆಂಬುದು ಬರೀ ಭ್ರಮೆ. ಕಾಲ್ಪನಿಕವಾದ ವಸ್ತುವಿನ ನಿವೃತ್ತಿಗೆ ಜ್ಞಾನದ ಹೊರತು ಮತ್ತೇನೂ ಬೇಕಾಗಿಲ್ಲ. ಹಗ್ಗದಲ್ಲಿ ಕಲ್ಪಿಸಿದ ಹಾವಿನ ಭ್ರಮೆಯು ಹಗ್ಗದ ಸರಿಯಾದ ತಿಳುವಳಿಕೆಯಿಂದ ನಾಶ-ವಾಗುವಂತೆ, ಎಚ್ಚರಿಕೆಯಾದ ಕೂಡಲೇ ಸ್ವಪ್ನವು ಕರಗಿ ಹೋಗುವಂತೆ ಆತ್ಮ-ಜ್ಞಾನದಿಂದ ಸಂಸಾರವು ಮಾಯವಾಗುತ್ತದೆ. ಇದಕ್ಕೆ ದೇವರ ಭಕ್ತಿಯಾಗಲೀ, ಅವನ ಅನುಗ್ರಹವಾಗಲೀ, ಅವನನ್ನು ಮೆಚ್ಚಿಸುವ ಸತ್ಕರ್ಮ ಆಚರಣೆಯಾಗಲೀ ಯಾಕೆ ಬೇಕು? ಎಂಬುದು ಅವರ ಸಮರ್ಥನೆ. ಆತ್ಯಂತಿಕ ಸಿದ್ಧಿಗೆ ಕರ್ಮವೊಂದೇ ಸಾಕೆಂದು ಸಮರ್ಥಿಸುವ ಇನ್ನೊಂದು ವಾದವೂ ಇದೆ. ಈಶ್ವರನನ್ನು ಅಲ್ಲ-ಗಳೆಯುವ ಈ ಮೀಮಾಂಸಕರು ಶುಷ್ಕ ಕರ್ಮಾಚರಣೆಯೊಂದೇ ನಮಗೆ ಆತ್ಯಂತಿಕ ಸುಖವನ್ನು ನೀಡುವುದೆಂದು ಪ್ರತಿಪಾದಿಸಿದ್ದಾರೆ. ಭಕ್ತಿ-ಜ್ಞಾನಗಳಿಗೆ ಇಲ್ಲಿ ಸ್ಥಾನವೇ ಇಲ್ಲ. ಪ್ರಸಾದವಂತೂ ದೂರತೋ ಅಪಾಸ್ತ. ಅವ್ಯಕ್ತನಾದ ಭಗವಂತನು ಸಾಕ್ಷಾ-ತ್ಕಾರಕ್ಕೆ ಸರ್ವಥಾ ಗೋಚರನಾಗಲಾರ. ಅವನ ಧ್ಯಾನವನ್ನು ಮಾತ್ರ ನಾವು ಮಾಡಬಲ್ಲೆವು. ಆದುದರಿಂದ ಮೋಕ್ಷಕ್ಕೆ ಸಾಕ್ಷಾತ್ಕಾರದ ಆವಶ್ಯಕತೆ ಇಲ್ಲ. ಭಕ್ತಿಯ ಒಂದು ಪ್ರಕಾರವಾದ ಶರಣಾಗತಿಯೊಂದೇ ಮೋಕ್ಷಕ್ಕೆ ಸಾಕು. ಬೇರೆ ಯಾವ ಸಾಧನೆಗಳೂ ಬೇಡವೆಂದು ಇನ್ನೊಂದು ವಾದವಿದೆ.

ಇಂತಹ ಹಲವಾರು ವಿಭಿನ್ನ ಮಾರ್ಗಗಳಿಂದ ವಿಭ್ರಾಂತನಾಗಬೇಡ. "**ವ್ಯವ-ಸಾಯಾತ್ಮಿಕಾ ಬುದ್ಧಿರೇಕೇಹ ಕುರುನಂದನ** = ಪ್ರಮಾಣಗಳಿಂದ ನಿಶ್ಚಿತವಾದ ಮಾರ್ಗ ಒಂದೇ ಆಗಿದೆ." ಎಲ್ಲ ಮಾರ್ಗಗಳೂ ಸರಿಯೆಂದು ಭಾವಿಸಿ ಸಿಕ್ಕಿದ ದಾರಿಯಲ್ಲಿ ನಡೆದು ಎಲ್ಲಿಯೋ ಪ್ರಪಾತದಲ್ಲಿ ಬೀಳುವುದು ಬೇಡ ಎಂದು ಗೀತೆ ಎಚ್ಚರಿಸಿದೆ.

ಸತ್ಕರ್ಮ, ಭಕ್ತಿ, ಜ್ಞಾನ, ಅನುಗ್ರಹ ಈ ನಾಲ್ಕೂ ಮುಕ್ತಿಗೆ ಅವಶ್ಯಕವಾಗಿ ಅಪೇಕ್ಷಿತವಾಗಿವೆ: "**ಮತ್ಪ್ರಸಾದಾತ್ ಪರಾಂ ಶಾಂತಿಂ ಅಚಿರೇಣಾಧಿಗಚ್ಛತಿ** = ಭಗವಂತನ ಅನುಗ್ರಹದಿಂದಲೇ ಪರಮ ಶಾಂತಿಯು ದೊರೆಯುತ್ತದೆ." "**ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂವಿಧೋऽರ್ಜುನ । ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ ॥** = ಭಗವಂತನ ಜ್ಞಾನ, ಸಾಕ್ಷಾತ್ಕಾರ, ಮತ್ತು ಮುಕ್ತಿಯು ಅವನ ಅನನ್ಯ ಭಕ್ತಿಯಿಂದಲೇ ಸಾಧ್ಯ." "**ಪ್ರಿಯೋ ಹಿ ಜ್ಞಾನಿನೋऽತ್ಯರ್ಥಂ ಅಹಂ ಸ ಚ ಮಮ ಪ್ರಿಯಃ** =. ಜ್ಞಾನಿಗೆ ದೇವರು ಪರಮ ಪ್ರಿಯನಾದರೆ, ಜ್ಞಾನಿಯಾದ ಭಕ್ತನು ದೇವರಿಗೆ ಅತ್ಯಂತ ಪ್ರೀತಿಪಾತ್ರನು." "**ಸರ್ವಕರ್ಮಾಣ್ಯಪಿ ಸದಾ ಕುರ್ವಾಣೋ ಮದ್ವ್ಯಪಾ-ಶ್ರಯಃ। ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಮ್ ॥** = ಎಲ್ಲ ಕರ್ತವ್ಯಗಳನ್ನೂ ಭಕ್ತಿಯಿಂದ ಮಾಡುತ್ತಾ, ಪರಮಾತ್ಮನ ಅನುಗ್ರಹದಿಂದ ಶಾಶ್ವತ ಸ್ಥಾನವನ್ನು ಪಡೆಯುವನು."

ಹೀಗೆ ನಾಲ್ಕು ಸಾಧನಗಳೂ ಅವಶ್ಯಕ. ಯಾವುದೇ ಒಂದು ಸಾಧನವು ಅನಗತ್ಯ-ವೆಂದು ತೊರೆಯುವುದು ಸರಿಯಲ್ಲವೆಂದು ಗೀತೆಯು ತೋರಿಸಿಕೊಟ್ಟಿದೆ. ಈ ಜಗತ್ತು ಭ್ರಮೆ, ಅಸತ್ಯವೆಂದು ಹೇಳುವುದು ಆಸುರೀ ವೃತ್ತಿಯೆಂದು ಗೀತೆಯು ಬಲವಾಗಿ ಖಂಡಿಸಿ, ಸಾಕ್ಷಾತ್ಕಾರದ ನಂತರ ಈ ಜಗತ್ತು ಮಾಯವಾಗುವುದಿಲ್ಲ; ಆಗಲೂ ಕರ್ತವ್ಯವನ್ನು ಆಚರಿಸಬೇಕೆಂದು ಬೋಧಿಸಿದೆ.

ಈ ರೀತಿಯಾಗಿ ಮುಕ್ತಿಯ ಎಲ್ಲ ಸಾಧನೆಗಳ ಸುಂದರ ಸಮನ್ವಯವನ್ನು ತೋರಿದ ಭಗವದ್ಗೀತೆಯು ಮುಕ್ತಿಯ ರಾಜಮಾರ್ಗವಾಗಿದೆ. ಸರಿಯಾದ ಅರ್ಥ ವಿವರಣೆ ಇಲ್ಲದೆ ನಾನಾ ವ್ಯಾಖ್ಯಾನಗಳಿಂದ ಉಂಟಾದ ಸಂಶಯ ವಿಪರ್ಯಾಸ-ಗಳಿಂದ ಈ ರಾಜಪಥದಲ್ಲಿ ಕತ್ತಲೆ ತುಂಬಿದಾಗ, ಜಗದ್ಗುರು ಶ್ರೀಮಧ್ವಾ-ಚಾರ್ಯರು ರಚಿಸಿದ ಗೀತಾಭಾಷ್ಯ, ಗೀತಾತಾತ್ಪರ್ಯ – ಇವೆರಡು ವ್ಯಾಖ್ಯಾನಗಳು ಚಂದ್ರ-ಸೂರ್ಯರಂತೆ ದಿವ್ಯ ಪ್ರಕಾಶವನ್ನು ಬೀರಿ ಈ ರಾಜಮಾರ್ಗವನ್ನು ಬೆಳಗಿಸಿವೆ. ಶ್ರೀಮಧ್ವಾಚಾರ್ಯರ ವ್ಯಾಖ್ಯಾನದಿಂದಲೇ ಗೀತೆಯ ನಿಜ ದರ್ಶನವು ಆಗಲು ಸಾಧ್ಯ.

ಶ್ರೀಮಧ್ವಾಚಾರ್ಯರ ವ್ಯಾಖ್ಯಾನದ ಹಿನ್ನೆಲೆಯಲ್ಲಿ ನಮ್ಮ ಗುರುವರ್ಯರಾದ ಶ್ರೀ ಫಲಿಮಾರು ಭಂಡಾರಕೇರಿ ಮಠಾಧೀಶರಾದ ಶ್ರೀವಿದ್ಯಾಮಾನ್ಯತೀರ್ಥ ಶ್ರೀಪಾದಂಗಳವರು ಮಾಡಿದ ಗೀತೋಪನ್ಯಾಸಗಳನ್ನು ಪರಮಭಕ್ತರೂ, ಉತ್ತಮ ಜಿಜ್ಞಾಸುಗಳೂ ಆದ ಶಿರವಾರ ರಾಮರಾಯರು ವಿಶೇಷ ಉತ್ಸಾಹ, ಪ್ರಯತ್ನದಿಂದ ಸಂಗ್ರಹಿಸಿದ್ದಾರೆ. ಜ್ಞಾನಪ್ರಸಾರ ಕಾರ್ಯದಲ್ಲಿ ಯಾವಾಗಲೂ ಮುಂಚೂಣಿಯಲ್ಲಿದ್ದು, ಎಲ್ಲಾ ರಾಘವೇಂದ್ರ ವೃಂದಾವನಗಳಿಗೆ ಮಾದರಿಯಾಗಿರುವ ಹೈದರಾಬಾದಿನ ಲಿಂಗಂಪಲ್ಲಿ ವೃಂದಾವನದಿಂದ ಇದು ಪ್ರಕಾಶಿತವಾಗುತ್ತಿರುವುದು ನಮಗೆ ಸಂತಸವನ್ನು ತಂದಿದೆ.

ಶ್ರೀ ವಿದ್ಯಾಮಾನ್ಯತೀರ್ಥರ ಮಹಿಮೆ, ಪಾಂಡಿತ್ಯ, ಸಾಧನೆಗಳ ಬಗ್ಗೆ ನಾನೇನು ಬರೆಯಲಿ? ಶಾಸ್ತ್ರಪ್ರವಚನ, ಪಂಡಿತರ ರಕ್ಷಣೆ, ಜ್ಞಾನಪ್ರಸಾರ, ಆಚಾರ್ಯರ ಸಿದ್ಧಾಂತದ ಸಮರ್ಥನೆ ಮುಂತಾದ ಕಾರ್ಯಗಳಲ್ಲಿ ಇತಿಹಾಸವನ್ನು ನಿರ್ಮಿಸಿದ ಶಕಪುರುಷರಿವರು. ಬಾಲ್ಯದಿಂದಲೂ ಇವರ ಜೊತೆಗಿದ್ದು, ಇವರ ಪ್ರವಚನದ ಮಾಧುರ್ಯ, ಅಂತರಂಗದ ವಾತ್ಸಲ್ಯ ಇವೆರಡನ್ನೂ ಆಸ್ವಾದಿಸುವ, ಅನುಭವಿಸುವ ಸುಯೋಗ ನನ್ನದಾಗಿದೆ. ಅಗಾಧ ಪಾಂಡಿತ್ಯದ ಜೊತೆಗೆ ಇವರದು ನಿಷ್ಕಲ್ಮಶ ಮನಸ್ಸು. ಇಂತಹ ಮಹಾಪುರುಷರ ಉಪನ್ಯಾಸವೆಂದರೆ ಅಮೂಲ್ಯ ತಾತ್ವಿಕ ವಿಷಯಗಳ ಸಂಗ್ರಹ ಮತ್ತು ಸುಂದರ ನಿರೂಪಣೆಯೇ ಆಗಿರುತ್ತದೆ. ಇಂತಹ ಅಮೂಲ್ಯ ಉಪನ್ಯಾಸಗಳ ಸಂಗ್ರಹ ಮತ್ತು ಪ್ರಕಾಶನ ಕಾರ್ಯಗಳು ಒಂದು ದೊಡ್ಡ ಭಾಗ್ಯವೆಂಬುದರಲ್ಲಿ ಸಂದೇಹವಿಲ್ಲ.

ಈ ಸಂದರ್ಭದಲ್ಲಿ ಶ್ರೀ ಶಿರವಾರ ರಾಮರಾಯರನ್ನು, ಹೈದರಾಬಾದಿನ ಲಿಂಗಪಳ್ಳಿ ಶ್ರೀ ರಾಘವೇಂದ್ರ ವೃಂದಾವನದ ಆಡಳಿತ ಸಮಿತಿಯನ್ನೂ ನಾವು ವಿಶೇಷವಾಗಿ ಅಭಿನಂದಿಸುತ್ತಾ ಎಲ್ಲಾ ಜಿಜ್ಞಾಸುಗಳೂ, ಭಕ್ತರೂ ಈ ಶ್ರೇಷ್ಠ ಕೃತಿಯ ಲಾಭವನ್ನು ಪಡೆಯಲಿ ಎಂದು ಆಶಿಸುತ್ತೇವೆ.

ಶ್ರೀವಿಶ್ವೇಶತೀರ್ಥ ಸ್ವಾಮೀಜಿ,
ಉಡುಪಿ ಶ್ರೀ ಪೇಜಾವರ ಮಠ
೧೮-೦೬-೮೪

# ದ್ವಿತೀಯ ಆವೃತ್ತಿಗೆ ಅನುಗ್ರಹ ವಚನ

ಶ್ರೀಮದ್ಭಗವದ್ಗೀತೆಯು ಅಧ್ಯಾತ್ಮಗ್ರಂಥಗಳ ಗೌರೀಶಂಕರಶಿಖರಸ್ಥಾನವನ್ನು ಅಲಂಕರಿಸಿದೆ - **"ಭಾರತಂ ಸರ್ವಶಾಸ್ತ್ರೇಷು ಭಾರತೇ ಗೀತಿಕಾ ವರಾ"** ನಮ್ಮ ಜೀವನವೇ ಯಜ್ಞ - ಭಗವತ್ಪೂಜೆಯ ರೂಪದಲ್ಲಿ ರೂಪಿತವಾಗಬೇಕೆಂಬ ಸಂದೇಶವನ್ನು ಅದು ನೀಡುತ್ತದೆ. ನಿಷ್ಕರ್ಮಕಾಮರೋಗದಿಂದ ಪೀಡಿತವಾದ ಈಗಿನ ಸಮಾಜದ ಪ್ರತಿಯೊಂದು ರಂಗವು ಆರೋಗ್ಯಪೂರ್ಣವೆನಿಸಬೇಕಾದರೆ ಭಗವದ್ಗೀತೆಯ ನಿಷ್ಕಾಮಕರ್ಮ-ಯೋಗದ ಅಮೃತಸಂದೇಶ ಅತ್ಯಂತ ಪ್ರಸ್ತುತವಾಗಿದೆ.

ಈ ಗ್ರಂಥಕ್ಕೆ ಅನೇಕ ಮತಾಚಾರ್ಯರು ತಮ್ಮ ತಮ್ಮ ದೃಷ್ಟಿಕೋನದಲ್ಲಿ ವಿವರಣೆಯನ್ನು ನೀಡಿದ್ದಾರೆ. ಹೀಗಾಗಿ ಅವರು ತಮ್ಮ ಬುದ್ಧಿಯ ಅರ್ಥವನ್ನು ಗೀತೆಗೆ ಹಚ್ಚುವ ಪ್ರಯತ್ನ ಮಾಡಿದ್ದಾರೆ ವಿನಾ ಗೀತೆಯ ನೈಜಾರ್ಥವನ್ನು ಜನತೆಯ ಬುದ್ಧಿಗೆ ತಲುಪಿಸುವ ಪ್ರಯತ್ನವನ್ನು ಮಾಡಲಿಲ್ಲ. ಆದರೆ ಮುಖ್ಯಪ್ರಾಣಾ-ವತಾರಭೂತರಾದ ಹಾಗೂ ಮಹಾಭಾರತದ ಉಪನಾಯಕ ಸ್ಥಾನವನ್ನು ಅಲಂಕರಿಸಿದ ಭೀಮಸ್ವರೂಪರಾದ ಶ್ರೀ ಆನಂದತೀರ್ಥರು ಗೀತೆಯ ನೈಜಾರ್ಥ-ತಾತ್ಪರ್ಯಗಳನ್ನು ಜನತೆಯ ಬುದ್ಧಿಗೆ ಗೀತಾಭಾಷ್ಯ ಮತ್ತು ಗೀತಾತಾತ್ಪರ್ಯ ಎಂಬ ಎರಡು ಕೃತಿರತ್ನಗಳಿಂದ ತಲುಪಿಸಲು ಯಶಸ್ವಿಯಾದರು.

ಈ ಎರಡು ಗ್ರಂಥಗಳ ಆಧಾರದಲ್ಲಿ ನಮ್ಮ ಗುರುಗಳಾದ ಪ್ರಾತಃಸ್ಮರಣೀಯರಾದ ಶ್ರೀ ವಿದ್ಯಾಮಾನ್ಯತೀರ್ಥಶ್ರೀಪಾದರು ಹೇವಿಲಂಬಿ ಸಂವತ್ಸರದಲ್ಲಿ ಮಾನ್ವಿಯಲ್ಲಿ ಚಾತುರ್ಮಾಸ್ಯವ್ರತದೀಕ್ಷಿತರಾದ ಸಂದರ್ಭದಲ್ಲಿ ಒಂದು ಮಾಸಾವಧಿಯಲ್ಲಿ ಭಗ-ವದ್ಗೀತೆಯ ಬಗ್ಗೆ ಉಪನ್ಯಾಸಗಳನ್ನು ನೀಡಿದರು. ಅದರ ಸಂಗ್ರಹವನ್ನು ಶ್ರೀಗಳವರ ಪರಮಭಕ್ತರಾದ ಶಿರವಾರ ಶ್ರೀ ರಾಮಚಂದ್ರ-ರಾಯರು ಮಾಡಿದರು. ಅದರ ಚೊಚ್ಚಲ ಪ್ರಕಾಶನ ಕಾರ್ಯವನ್ನು ಶ್ರೀ ರಾಘವೇಂದ್ರ ವೃಂದಾವನ ಸಮಿತಿ, ಬಾಗಲಿಂಗಂಪಲ್ಲಿ, ಹೈದರಾಬಾದ್, ಈ ಸಂಸ್ಥೆಯು ೧೯೮೮ ರಲ್ಲಿ ಮಾಡಿತು.

ಇದೀಗ ನಾವು ಶ್ರೀ ಭಾಗವತಾಶ್ರಮ ಪ್ರಕಾಶನ ಸಂಸ್ಥೆಯಿಂದ ದ್ವಿತೀಯ ಮುದ್ರಣವನ್ನು ಮಾಡುತ್ತಿದ್ದೇವೆ. ಈ ಗ್ರಂಥವನ್ನು ಭಾಷಾ ಸ್ಪಷ್ಟತೆ, ಅನ್ವಯದ ಸ್ಫುಟತೆ, ಹಾಗೂ ಮುದ್ರಣದೋಷದ ರಾಹಿತ್ಯದಿಂದ ಪರಿಷ್ಕರಿಸುವ ಕಾರ್ಯವನ್ನು ನಮ್ಮ ಪ್ರಿಯ ಶಿಷ್ಯನಾದ ಶ್ರೀ ಶ್ರೀನಿಧಿ ವಾಸಿಷ್ಠ ಮಾಡಿದ್ದಾನೆ. ಇವನೊಂದಿಗೆ ನಮ್ಮ ಇನ್ನೊಬ್ಬ ಶಿಷ್ಯರಾದ ಶ್ರೀ ಶ್ರೀನಿವಾಸ ವೇದಗರ್ಭರವರು ಸೇರಿ ಮುದ್ರಣ-ಕಾರ್ಯವು ಯಶಸ್ವಿಯಾಗುವಂತೆ ಸಹಕರಿಸಿದ್ದಾರೆ. ಇವರಿಗೆ ಪುಸ್ತಕ ಒದಗಿಸುವ ಮೂಲಕ ಶ್ರೀ ಸಿ. ಹೆಚ್. ಶ್ರೀನಿವಾಸಮೂರ್ತಿಯವರು ಸಹಕರಿಸಿದ್ದಾರೆ. ಕರಡು ತಿದ್ದುವ ಕಾರ್ಯದಲ್ಲಿ ಶ್ರೀ ವೇದಗರ್ಭ ಜಿ. ಶೇಷಗಿರಿರಾಯರು ಪಾಲ್ಗೊಂಡಿದ್ದಾರೆ. ಮುಖಪುಟವನ್ನು ಅಂದವಾಗಿ ನಮ್ಮ ಶ್ರೀ ಕೆ. ಎಂ. ಶೇಷಗಿರಿಯವರು ವಿನ್ಯಾಸ-ಗೊಳಿಸಿದ್ದಾರೆ. ಇವರೆಲ್ಲರಿಗೂ ಶ್ರೀ ಭಗವಾನ್ ಮಧ್ವಾಂತರ್ಗತ ಶ್ರೀವೇದವ್ಯಾಸಾ-ಭಿನ್ನ ಶ್ರೀಕೃಷ್ಣನು ಅನುಗ್ರಹಿಸಲಿ. ಈ ಪ್ರಕಾಶನಕ್ಕೆ ಅನುಮತಿಯ ಸೌಜನ್ಯ ತೋರಿದ ಬಾಗಲಿಂಗಂಪಲ್ಲಿ ರಾಘವೇಂದ್ರ ಸ್ವಾಮಿ ವೃಂದಾವನ ಸಮಿತಿಯವರನ್ನು ನಾವು ಈ ಸಂದರ್ಭದಲ್ಲಿ ವಿಶೇಷವಾಗಿ ಅಭಿನಂದಿಸುತ್ತೇವೆ.

ಶ್ರೀ ವೇದವ್ಯಾಸರ ಜಯಂತಿ ಹಾಗೂ ಶ್ರೀ ಗುರುಗಳ ಹನ್ನೆರಡನೆಯ ಆರಾಧನಾ ಮಹೋತ್ಸವದ ಸಂದರ್ಭದಲ್ಲಿ ಮಾನ್ವಿ ಸಂಜೀವರಾಯರ ಕ್ಷೇತ್ರದಲ್ಲಿ ಬಿಡುಗಡೆಗೊಂಡು ಭಗವಂತನಿಗೆ ಅರ್ಪಿತವಾಗಲಿರುವುದು ಈ ಕೃತಿಯ ಇನ್ನೊಂದು ವಿಶೇಷ. ಜಿಜ್ಞಾಸುಗಳು ಇದರ ಉಪಯೋಗವನ್ನು ಪಡೆದು ಕೃತಾರ್ಥರಾಗಬೇಕೆಂದು ಹಾರೈಸುತ್ತೇವೆ.

ಇತಿ ಶ್ರೀಮನ್ನಾರಾಯಣಸ್ಮರಣೆಗಳು

೨೦-೪-೨೦೧೨

ಶ್ರೀವಿದ್ಯೇಶತೀರ್ಥ ಶ್ರೀಪಾದರು
ಶ್ರೀಭಂಡಾರಕೇರಿ ಮಠ

# ಮೊದಲ ಮುದ್ರಣದ ಪ್ರಕಾಶಕರ ನುಡಿ

ಶ್ರೀಶ್ರೀವಿದ್ಯಾಮಾನ್ಯತೀರ್ಥ ಶ್ರೀಪಾದಂಗಳವರು ಫಲಿಮಾರು ಹಾಗೂ ಭಂಡಾರಕೇರಿ ಮಠ, ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರು ಪೇಜಾವರ ಮಠ ಮತ್ತು ಶ್ರೀ ಶ್ರೀ ಚಿತ್ರಾಪುರ ಮಠಾಧೀಶರಿಂದ (ಅಕ್ಷಯ ತೃತೀಯಾ) ೨೨-೦೫-೧೯೬೨ ಶುಭದಿವಸದಲ್ಲಿ ಶ್ರೀ ರಾಘವೇಂದ್ರ ಸ್ವಾಮಿಗಳ ವೃಂದಾವನ, ಹೈದ್ರಾಬಾದ್ ಬಾಗಲಿಂಗಂಪಲ್ಲಿಯಲ್ಲಿ ಪ್ರತಿಷ್ಠಾಪನೆ ಮಾಡಲ್ಪಟ್ಟಿತು. ಅಂದಿನಿಂದ ಅವಿಚ್ಛಿನ್ನವಾಗಿ ಶ್ರೀ ಶ್ರೀಪಾದಂಗಳವರ ಪೂರ್ಣಾಶೀರ್ವಾದದಿಂದ ಭಕ್ತಾದಿಗಳ ಧಾರ್ಮಿಕ ಕಾರ್ಯಗಳಿಗೆ ಅನುಕೂಲ ಮಾಡುವದರ ಜೊತೆಗೆ, ಪಾಠ-ಪ್ರವಚನಾದಿಗಳು ನಡೆಯುತ್ತಲಿವೆ. ಈ ಗ್ರಂಥ ಹೊರಬರುವುದಕ್ಕೆ ಮುಖ್ಯ ಕಾರಣರು: ಶ್ರೀ ರಾಮಚಂದ್ರರಾವ್ ಶಿರವಾರ ಹಾಗೂ ದಿ. ಶ್ರೀ ಸುಳಾದಿ ಕುಪ್ಪೇರಾಯರು.

ರಾಯಚೂರು ಜಿಲ್ಲೆಯ ಮಾನ್ವಿ ಸುಕ್ಷೇತ್ರ ಶ್ರೀಜಗನ್ನಾಥದಾಸಾರ್ಯರ ಸನ್ನಿಧಿಯಲ್ಲಿ, ಚಾತುರ್ಮಾಸ್ಯ ಸಂಕಲ್ಪದ ಅವಧಿಯಲ್ಲಿ, ಶ್ರೀ ಭಂಡಾರಕೇರಿ ಶ್ರೀಗಳವರು ಅನುಗ್ರಹ ಮಾಡಿದ ಉಪನ್ಯಾಸಗಳ ಸಾರವನ್ನು ಪ್ರತಿದಿನ ಬರೆದು, ಶ್ರೀ ಶ್ರೀಗಳವರಿಂದ ಮಾರ್ಗದರ್ಶನ ಪಡೆದು ಸಂಗ್ರಹ ಮಾಡಿ, ಪ್ರಕಾಶನಕ್ಕೆ ಒಂದು ಸಾವಿರ ರೂ. ಗಳನ್ನು ಕೊಟ್ಟು, ಗ್ರಂಥ ಪ್ರಕಾಶನ ರೂಪ ಸೇವೆ ಮಾಡಲು ಅವಕಾಶ ಕಲ್ಪಿಸಿಕೊಟ್ಟ ಶ್ರೀ ರಾಮಚಂದ್ರರಾವ್ ಶಿರವಾರ ಹಾಗೂ ಉಪನ್ಯಾಸಗಳನ್ನು ಸಂಗ್ರಹಿಸಿಲು ಶ್ರಮ ವಹಿಸಿದ ದಿ. ಸುಳಾದಿ ಕುಪ್ಪೇರಾಯರಿಗೂ ಅನಂತ ವಂದನೆಗಳನ್ನರ್ಪಿಸುತ್ತೇನೆ.

ಸದ್ವಂಶಸಂಜಾತರಾಗಿ ತಮ್ಮ ಸ್ವಂತ ಪವಮಾನ ಮುದ್ರಣಾಲಯ, ಧಾರವಾಡದಲ್ಲಿ ಬಹಳ ಆಸ್ಥೆಯಿಂದ ಮುದ್ರಣ ಮಾಡಿಕೊಟ್ಟ ಶ್ರೀ ಆನಂದತೀರ್ಥಾಚಾರ್ ಪಂಚಮುಖಿ ಹಾಗೂ ಪ್ರೂಫ್ ನೋಡುವಲ್ಲಿ ಸಹಕರಿಸಿದ ಶ್ರೀ ಜಯತೀರ್ಥಾಚಾರ್ಯ ಮಳಗಿ, ಎಮ್. ಎ., ಧಾರವಾಡ ಇವರಿಗೂ ತುಂಬ ಕೃತಜ್ಞ.

ಸಂಸ್ಥೆಯ ಸರ್ವತೋಮುಖ ಶ್ರೇಯೋಭಿವೃದ್ಧಿಗೆ ಕಾರಣರಾಗಿ ಆಶೀರ್ವಚನಗಳನ್ನು ಅನುಗ್ರಹ ಮಾಡಿದ ಶ್ರೀ ಶ್ರೀವಿದ್ಯಾಮಾನ್ಯತೀರ್ಥ ಶ್ರೀಪಾದಂಗಳವರು, ಫಲಿಮಾರು ಹಾಗೂ ಭಂಡಾರಕೇರಿ ಮಠ, ಮತ್ತು ಶ್ರೀ ಶ್ರೀ ವಿಶ್ವೇಶ ತೀರ್ಥ ಶ್ರೀ ಪಾದಂಗಳವರು, ಪೇಜಾವರ ಮಠ, ಉಡುಪಿ ಇವರಿಗೆ ಜನ್ಮ ಜನ್ಮಕ್ಕೂ ಋಣಿಯಾಗಿ ಅಭಿನಂದಿಸುವೆ.

ಕೆ. ಸುಬ್ಬರಾವ್ ಅಡಿಗ
ಅಧ್ಯಕ್ಷರು,
ಶ್ರೀ ರಾಘವೇಂದ್ರ ಸ್ವಾಮಿ ವೃಂದಾವನ ಸಮಿತಿ
೩-೪-೧೮೩, ಬಾಗಲಿಂಗಂಪಲ್ಲಿ,
ಹೈದ್ರಾಬಾದ್-೫೦೦೦೨೭

ಶಕೆ ೧೯೦೬ ರಕಾಕ್ಷಿ ನಾಮ
ಸಂ॥ ಶ್ರಾವಣ ಬ॥ ದ್ವಿತೀಯಾ
೧೩-೮-೧೯೮೪

# ಮೊದಲ ಆವೃತ್ತಿಯ ಕೃತಜ್ಞತಾ ಸಮರ್ಪಣೆ

ಮಾನವಿ ಕ್ಷೇತ್ರದಲ್ಲಿ ಚಾತುರ್ಮಾಸ್ಯ ವಾಸ್ತವ್ಯವನ್ನು ಕೈಗೊಂಡಾಗ ಶ್ರೀಮತ್ಪೂಜ್ಯ ೧೧೦ಲ ಶ್ರೀ ಶ್ರೀ ಭಂಡಾರಕೇರಿ ಮಠ ವಿದ್ಯಾಮಾನ್ಯತೀರ್ಥ ಮಹಾ ಶ್ರೀಪಾದಂಗಳವರು ದಿನಾಲು ಸಾಯಂಕಾಲ ಶ್ರೀಮದ್ಭಗವದ್ಗೀತೆಯ ಮೇಲೆ ಉಪನ್ಯಾಸವೀಯುತ್ತಿದ್ದರು. ಅನೇಕ ದೃಷ್ಟಾಂತಗಳಿಂದ ಶ್ರೋತೃಗಳ ಮನವನ್ನು ಆಕರ್ಷಿಸುತ್ತಿರುವ ದಿನದಿನದ ಉಪನ್ಯಾಸವನ್ನು ಆದಷ್ಟು ಅವರ ನುಡಿಯಲ್ಲಿಯೇ ಸಂಗ್ರಹಿಸಿಡಬೇಕೆಂದು ನನಗೆ ಮತ್ತು ಸುಳಾದಿ ಶ್ರೀ ಕುಪ್ಪೇರಾಯರಿಗೆ ದೈವ ಪ್ರೇರಣೆಯಾಯಿತು. ಅದರಂತೆ ಶ್ರೀಪಾದಂಗಳವರ ಅನುಮತಿಯಿಂದ ಬರೆಯ- ಲಾರಂಭಿಸಿದೆನು. ಮತ್ತು ಅದರಲ್ಲಿನ ನನ್ನ ಮತಿಯಿಂದ ಆದ ದೋಷಗಳನ್ನು ತಿಳಿಸಿ ತಿದ್ದಿಕೊಳ್ಳುವ ಉದ್ದೇಶದಿಂದ ಶ್ರೀ ಶ್ರೀಪಾದಂಗಳವರ ಸಮಕ್ಷಮದಲ್ಲಿ ನನ್ನ ಬರಹವನ್ನು ಓದಬೇಕೆಂಬುವುದು ನನ್ನ ಬಲವಾದ ಹಂಬಲವಿತ್ತು. ಆದರೆ ಶ್ರೀಗಳವರ ಹಲವಾರು ಮಹಾಕಾರ್ಯಗಳ ಭರದಲ್ಲಿ ಅದು ಸಾಧ್ಯವಾಗಲಿಲ್ಲ. ಆದರೂ ನಾನು ಇಚ್ಛಿಸಿದಂತೆ ಕ್ರಮದಿಂದ ಎಲ್ಲ ದಿವಸದ ಉಪನ್ಯಾಸಗಳನ್ನು ಸಂಗ್ರಹಿಸಿ ಬರೆದು ಇಟ್ಟೆನು. ಅನಂತರ ಬಹು ದಿವಸಗಳ ನಂತರ ನನ್ನ ಹಲವಾರು ಮಿತ್ರರು ನಾನು ಸಂಗ್ರಹಿಸಿದ ಉಪನ್ಯಾಸಗಳನ್ನು ಓದಿ ಹರ್ಷಿತರಾಗಿ ಇದನ್ನು ಎಲ್ಲರಿಗೂ ದೊರೆಯುವಂತೆ ಮುದ್ರಿಸಿ ಏಕೆ ಪ್ರಕಟಿಸಬಾರದು ಎಂದು ಬಲವಾಗಿ ಸೂಚಿಸಿದರು.

ಅವರ ಸೂಚನೆಯು ನನಗೆ ಈ ಸಂಗ್ರಹವನ್ನು ಮೂಲ ಉಪನ್ಯಾಸಕರಾದ ಶ್ರೀಶ್ರೀಪಾದಂಗಳವರ ಸನ್ನಿಧಿಯಲ್ಲಿ ತೋರಿಸಬೇಕೆಂಬುದಾಗಿ ಪ್ರಚೋದಕ- ವಾಯಿತು. ಅದರಂತೆ ಶ್ರೀಪಾದಂಗಳವರು ಒಮ್ಮೆ ಮಾನವಿ ಕ್ಷೇತ್ರಕ್ಕೆ ದಯ- ಮಾಡಿಸಿದಾಗ ಶ್ರೀಪಾದಂಗಳವರ ದರುಶನವಾಯಿತು. ಅವರ ಸನ್ನಿಧಿಯಲ್ಲಿ ಅಪ್ಪಣೆ ಪಡೆದು, ಈ ಸಂಗ್ರಹದ ಕೆಲವು ಮುಖ್ಯಾಂಶಗಳನ್ನು ಓದಿ ತೋರಿಸಿದೆನು, ತಮ್ಮ ಉಪನ್ಯಾಸದ ಯಥಾರ್ಥ ಸಂಗ್ರಹವನ್ನು ಶ್ರೀ ಶ್ರೀಪಾದಂಗಳವರು ವೀಕ್ಷಿಸಿ ಬಹಳ

ಸಂತಸಪಟ್ಟು ಜಿಜ್ಞಾಸುಗಳ ಅಧ್ಯಯನ ಸೌಕರ್ಯಕ್ಕಾಗಿ ಮುದ್ರಿಸಲು ಅನುಮತಿಯನ್ನು ಅನುಗ್ರಹಿಸಿ ಬರೆದುಕೊಟ್ಟರು.

ಈ ಎರಡು ಪ್ರಕಾರದಿಂದ ಕೇವಲ ನನ್ನ ಬುದ್ಧಿಯಲ್ಲಿ ಉದಿಸಿದ ಈ ಸಂಕಲನವು ಈಗ ಗ್ರಂಥ ರೂಪವಾಗಿ ಹೊರಬರುತ್ತಿರುವದು ನಮ್ಮೆಲ್ಲರ ಸುಕೃತದ ಪರಿಪಾಕವೆ. ಶ್ರೀ ಪುರಂದರದಾಸರ ಉಕ್ತಿಯಂತೆ, **"ಹರಿಸ್ಮರಣೆ ಮಾಡುವವರು ನರರಲ್ಲವೊ । ಶರೀರ ಅವರದು । ಎಲ್ಲರಂತಲ್ಲವರದು ॥ ವರಜಂಘ ಪದ, ಗಂಗೆ ತುಂಗೆ ಎಂದೆನಿಸುವರು । ಸರುವಾಂಗ ಅನಂತಾಸನ ಶ್ವೇತ ದ್ವೀಪ । ಬರಿಯ ಮಾತಲ್ಲವಿದು ಶೃತಿ ಪುರಾಣಗಳುಕ್ತಿ । ಪುರಂದರವಿಠಲ ಅವರೊಶ-ದೊಳಿಹನು ॥"** ಮಹಾನುಭಾವರ ಗುಣಗಳು ಸುಜನರ ಉದ್ಧಾರದ ಕರುಣಾಫಲದ ಚಿಂತಾಮಣಿಗಳೆಂಬುದಾಗಿ ನಾನು ಮನಗಂಡಿದ್ದೇನೆ. ಇಂಥ ಮಹಾನುಭಾವರನುಗ್ರಹಕ್ಕೆ, **"ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ"** ಎಂಬ ಉಪನಿಷದ್ವಚನದಂತೆ, ಅವರ ಅಡಿದಾವರೆಗಳಲ್ಲಿ ನನ್ನ ಅನಂತ ಪ್ರಣಾಮಪೂರ್ವಕ ಕೃತಜ್ಞತೆಗಳನ್ನು ಸಮರ್ಪಿಸಿ ಕೃತಾರ್ಥನಾಗುತ್ತ ಈ ಕಾರ್ಯದಲ್ಲಿ ಯೋಗ್ಯ ವಿಚಾರ, ಸಲಹೆ, ತನು-ಮನ-ಧನ ಸಹಾಯ ಸಲ್ಲಿಸಿದವರಿಗೆ ನನ್ನ ವೈಯಕ್ತಿಕ ಹಾರ್ದಿಕ ಧನ್ಯವಾದಗಳನರುಹಿ, ಈ ಸಂಗ್ರಹವನ್ನು ಸದುಪಯೋಗಪಡಿಸಿಕೊಂಡಲ್ಲಿ ನಾನು ಕೃತಾರ್ಥನೇ ಸರಿ ಎಂದು ಭಾವಿಸುತ್ತೇನೆ.

ಇತಿ ಶ್ರೀ ಶ್ರೀಪಾದಂಗಳವರ ಚರಣ ಸೇವಕ

ರಾಮಚಂದ್ರರಾವ್ ಶಿರವಾರ

|| ಶ್ರೀವೇದವ್ಯಾಸಾಯ ನಮಃ ||

## ಶ್ರೀವಿದ್ಯಾಮಾನ್ಯ

# ಗೀತಾಪ್ರಸೂನಮಾಲಾ

ಶ್ರೀಶ್ರೀಭಂಡಾರಕೇರಿಮಠದ ಶ್ರೀ ವಿದ್ಯಾಮಾನ್ಯತೀರ್ಥಶ್ರೀಪಾದಂಗಳವರು ಮೂವತ್ತೆರಡನೆಯ ಚಾತುರ್ಮಾಸ್ಯ ಸಂಕಲ್ಪವನ್ನು ಮಾನವಿ ಕ್ಷೇತ್ರದಲ್ಲಿ ಕೈಗೊಂಡಾಗ ನಡೆಸಿದ ಗೀತಾಪ್ರವಚನಾರಂಭವು.

ಇದೇ ಹೇಮಿಲಂಬಿನಾಮ ಸಂವತ್ಸರ ಶಕೆ ೧೮೭೯ ಶ್ರಾವಣ ಶುದ್ಧ ದ್ವಿತೀಯಾ ಆರಂಭವು

**ಜಯತ್ಯಜೋಽಖಂಡಗುಣೋರುಮಂಡಲಃ**
**ಸದೋದಿತೋ ಜ್ಞಾನಮರೀಚಿಮಾಲೀ।**
**ಸ್ವಭಕ್ತಹಾರ್ದೋಽಚ್ಛತಮೋಽನಿಹಂತಾ**
**ವ್ಯಾಸಾವತಾರೋ ಹರಿರಾತ್ಮಭಾಸ್ಕರಃ॥**
**ಕರೋತು ಮಮ ಕಲ್ಯಾಣಂ ಹರಿರ್ಹಯಮುಖಾಭಿಧಃ।**
**ಗುರುಶ್ಚ ಮಧ್ವನಾಮಾ ಮೇ ವರದೋಽಸ್ತು ನಿರಂತರಮ್॥**

ಭಗವದ್ಗೀತೆಯು ವೇದಾನಧಿಕಾರಿಗಳಾದ ಸ್ತ್ರೀಯರಿಗೆ, ಶೂದ್ರಾದಿಗಳಿಗೆ ಬ್ರಹ್ಮಜ್ಞಾನವನ್ನುಂಟುಮಾಡಿ ಮೋಕ್ಷವಾಗುವುದಕ್ಕೋಸ್ಕರ ಹೊರಟಿದೆ. ವೇದಾಧಿ-ಕಾರಿಗಳಿಗೆ ಅತಿ ಗಹನವಾದ ವೇದದ ಅರ್ಥವನ್ನು ತಿಳಿಯಲಿಕ್ಕೆ ಸಾಧನವಾಗಿ ಅವರಿಗೂ ಮೋಕ್ಷಸಾಧನವಾಗಿದೆ. ಆದುದರಿಂದ ಸರ್ವರಿಗೂ ಅತ್ಯುಪಯುಕ್ತ-ವಾದುದು ಗೀತಾಶಾಸ್ತ್ರ.

ಈ ಗೀತೆಯು ಹದಿನೆಂಟು ಪರ್ವಗಳುಳ್ಳ ಮಹಾಭಾರತದ ಭೀಷ್ಮಪರ್ವದಲ್ಲಿ ಶ್ರೀಕೃಷ್ಣಾರ್ಜುನಸಂವಾದರೂಪವಾಗಿದ್ದು ವೇದವ್ಯಾಸರಿಂದ ಗ್ರಥಿಸಲ್ಪಟ್ಟಿದೆ. ಮಹಾಭಾರತವು ಸಕಲವೇದಗಳ ಅರ್ಥವನ್ನು ಪ್ರತಿಪಾದಿಸಿ ವೇದಕ್ಕಿಂತಲೂ ಅಧಿಕವಾಗಿ ಪರಮಾತ್ಮನ ಗುಣಗಳನ್ನು ಪ್ರತಿಪಾದನ ಮಾಡಿದ್ದರಿಂದ ವೇದಕ್ಕಿಂತ ಅರ್ಥತಃ ಅಧಿಕವಾಗಿದೆ. ಅಂತಹ ಮಹಾಭಾರತವೆಂಬ ಪಾರಿಜಾತವೃಕ್ಷದ ಮಧುರೂಪವಾದದ್ದು ಹದಿನೆಂಟು ಅಧ್ಯಾಯಗಳಿಂದ ಕೂಡಿದ ಗೀತೆ.

ಮಹಾಭಾರತದ ಯುದ್ಧಾರಂಭದಲ್ಲಿ ವೇದವ್ಯಾಸದೇವರು ಧೃತರಾಷ್ಟ್ರನ ಸಮೀಪಕ್ಕೆ ಬಂದು "ನಿನಗೆ ಯುದ್ಧವನ್ನು ನೋಡಬೇಕೆಂದು ಇಚ್ಛೆಯಿದೆಯೋ?" ಎಂದು ಕೇಳಿದರು. "ನಾನು ಸಾಕ್ಷಾತ್ತಾಗಿ ನೋಡಲಾರೆ; ಯಾರಾದರೂ ಹೇಳತಕ್ಕವರು ಬೇಕು" ಎಂದು ಪ್ರಾರ್ಥಿಸಿದಾಗ ಸಂಜಯನಿಗೆ ದಿವ್ಯಚಕ್ಷುಸ್ಸನ್ನು ಕೊಟ್ಟು ಅವನ ಮುಖದಿಂದ ಯುದ್ಧದ ಎಲ್ಲ ವಿಚಾರವನ್ನು ತಿಳಿಯುವಂತೆ ಮಾಡಿದರು.

ಸಂಜಯನು ಭೀಷ್ಮಪಾತ ಆಗುವತನಕ ಕುರುಕ್ಷೇತ್ರದಲ್ಲಿ ಆಗುವ ಯುದ್ಧವನ್ನು ಸ್ವತಃ ನೋಡಿ, ಧೃತರಾಷ್ಟ್ರನ ಸಮೀಪಕ್ಕೆ ಬಂದು ಭೀಷ್ಮಪಾತದ ಸುದ್ದಿಯನ್ನು ಹೇಳಿದಾಗ, ಧೃತರಾಷ್ಟ್ರನು ಎಲ್ಲ ಯುದ್ಧದ ವೃತ್ತಾಂತವನ್ನು ಆರಂಭದಿಂದ ತಿಳಿಸೆಂದು ಸಂಜಯನನ್ನು ಕೇಳುತ್ತಾನೆ. ಅದಕ್ಕೆ ಸಂಜಯನು ಆರಂಭದಿಂದ ಯುದ್ಧದ ವೃತ್ತಾಂತವನ್ನು ಹೇಳುತ್ತಾ, ಯುದ್ಧಾರಂಭದಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ಉಪದೇಶ ಮಾಡಿದ ಗೀತೆಯನ್ನು ಧೃತರಾಷ್ಟ್ರನಿಗೆ ಹೇಳಿದನು. ಈ ಆರಂಭದ ಅಧ್ಯಾಯದಲ್ಲಿ ಕೃಷ್ಣನು ಅರ್ಜುನನಿಗೆ ಗೀತೋಪದೇಶ ಮಾಡಲು ಪ್ರಸಕ್ತಿಯನ್ನು ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ. ದ್ವಿತೀಯ ಅಧ್ಯಾಯದಲ್ಲಿ ಕೆಲವು ಶ್ಲೋಕಗಳ ನಂತರ ಶ್ರೀಕೃಷ್ಣನು ಅರ್ಜುನನಿಗೆ ಉಪದೇಶ ಮಾಡಿದ ವಿಚಾರವನ್ನು ತಿಳಿಸುತ್ತಾನೆ. ಪ್ರಥಮ ಷಟ್ಕದಲ್ಲಿ ಬ್ರಹ್ಮಜ್ಞಾನ ಸಾಧನ ವಿಚಾರ, ದ್ವಿತೀಯ ಷಟ್ಕದಲ್ಲಿ ಪರಮಾತ್ಮನ ಮಾಹಾತ್ಮ್ಯ ವರ್ಣನೆ, ತೃತೀಯ

ಷಟ್ಕದಲ್ಲಿ ಈ ಎರಡು ಷಟ್ಕಗಳ ವಿಸ್ತಾರ ವಿಷಯವನ್ನು ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ.

ಆರಂಭದಲ್ಲಿ ಧೃತರಾಷ್ಟ್ರನು ಸಂಜಯನನ್ನು ಕುರಿತು ಈ ಅಭಿಪ್ರಾಯದಿಂದ ಪ್ರಶ್ನೆ ಮಾಡಿದನು: ಏನೆಂದರೆ, ಕುರುಕ್ಷೇತ್ರವು ಧರ್ಮಕ್ಷೇತ್ರವಾಗಿದೆ. ಅಲ್ಲಿಗೆ ಹೋದವರಿಗೆ ಧರ್ಮಬುದ್ಧಿಯೇ ಉಂಟಾಗುವುದು. ಅಂತಹ ಕ್ಷೇತ್ರದಲ್ಲಿ ಅಧರ್ಮ ಯುದ್ಧವು ನಡೆಯುವ ಪ್ರಸಂಗವಿಲ್ಲ. ಧರ್ಮಯುದ್ಧದಲ್ಲಿ ಭೀಷ್ಮನನ್ನು ಜಯಿಸಲಿಕ್ಕೆ ಸಾಧ್ಯವಿಲ್ಲ. ಆದುದರಿಂದ ನನ್ನ ಮಕ್ಕಳು ಮತ್ತು ಪಾಂಡವರು ಕುರುಕ್ಷೇತ್ರದಲ್ಲಿ ಮಿಲಿತರಾಗಿ ಯುದ್ಧ ಮಾಡುವಾಗ ಭೀಷ್ಮಪಾತವು ಹೇಗೆ ಆಯಿತು. ಅಲ್ಲಿ ನಡೆದ ಯುದ್ಧವು ಧರ್ಮಯುದ್ಧವೋ? ಅಧರ್ಮಯುದ್ಧವೋ? ಆ ಯುದ್ಧವನ್ನು ವಿಸ್ತರಿಸಿ ಆರಂಭದಿಂದ ಹೇಳೆಂಬ ಅಭಿಪ್ರಾಯದಿಂದ ಕೇಳಿದನು.

ಅದಕ್ಕೆ ಸಂಜಯನು ಹೇಳುತ್ತಾನೆ: ಆರಂಭದಲ್ಲಿ ನಿನ್ನ ಮಗನ (ದುರ್ಯೋಧನನ) ಅಭಿಪ್ರಾಯವು ಹೀಗಿತ್ತು. ಪಂಚಪಾಂಡವರು ಮಾತ್ರ ಯುದ್ಧಕ್ಕೆ ಬರಬಹುದು. ಅವರಿಗೆ ಸಹಾಯಕರು ಯಾರೂ ಇಲ್ಲ. ಅವರಿಗೆ ಸೈನ್ಯವಿಲ್ಲ. ಅವರನ್ನು ಜಯಿಸುವುದು ಬಹು ಸುಲಭವಾಗಿದೆ ಎಂದು ತಿಳಿದು ದುರ್ಯೋಧನನು ಯುದ್ಧಕ್ಕಾಗಿ ಕುರುಕ್ಷೇತ್ರಕ್ಕೆ ಬಂದು ಅಲ್ಲಿ ಪಾಂಡವರ ಸೈನ್ಯವು ಗುಂಪುಗುಂಪಾಗಿ ಏಳು ಅಕ್ಷೋಹಿಣಿ ಸಂಖ್ಯೆಯಿಂದ ಬಂದು ಸೇರಿದ್ದನ್ನು ನೋಡಿ ಭೀತನಾದನು. ತಮ್ಮ ಆಚಾರ್ಯರಾದ ದ್ರೋಣರ ಸಮೀಪ ಹೋಗಿ ಈ ಮಾತನ್ನು ಹೇಳುತ್ತಾನೆ:

“ಎಲೋ ಆಚಾರ್ಯರೇ! ಪಾಂಡವರ ಮಹತ್ತಾದ ಸೈನ್ಯವನ್ನು ನೋಡಿರಿ. ಆ ಸೇನೆಗೆ ಧೃಷ್ಟದ್ಯುಮ್ನನು ನಾಯಕನಾಗಿದ್ದಾನೆ. ಆ ಧೃಷ್ಟದ್ಯುಮ್ನನು ಬಹಳ ಬುದ್ಧಿಶಾಲಿಯಾಗಿದ್ದಾನೆ. ನಿಮ್ಮ ಶಿಷ್ಯನಾಗಿ ಧನುರ್ವಿದ್ಯಾಪಾರಂಗತನಾಗಿದ್ದಾನೆ. ಅವನು ನಿಮ್ಮನ್ನು ಸಂಹರಿಸಲಿಕ್ಕಾಗಿಯೇ ಯಜ್ಞದಲ್ಲಿ ದ್ರುಪದನಿಂದ ಯಾಜೋಪಯಾಜದ ಮಂತ್ರದ ಬಲದಿಂದ ಹುಟ್ಟಿದವನಾಗಿದ್ದಾನೆ. ಅವನು ನಿಮ್ಮಲ್ಲಿ ಧನುರ್ವಿದ್ಯೆಯನ್ನು ಅಭ್ಯಾಸ ಮಾಡಿ ನಿಮ್ಮನ್ನೇ ಸಂಹರಿಸಲಿಕ್ಕಾಗಿ ಬಂದಿರುತ್ತಾನೆ. ಇಷ್ಟೇ ಅಲ್ಲದೆ, ಈ ಪಾಂಡವರ ಸೈನ್ಯದಲ್ಲಿ ಸಾತ್ಯಕಿ ಮೊದಲಾದ

ಅನೇಕ ಮಹಾರಥರುಗಳು ಯುದ್ಧಕ್ಕಾಗಿ ಬಂದು ಸೇರಿದ್ದಾರೆ. ಮಹಾರಥರೆಂದರೆ ಒಬ್ಬನೇ ಹತ್ತು ಸಹಸ್ರ ಜನರೊಂದಿಗೆ ಯುದ್ಧ ಮಾಡಲು ಸಮರ್ಥನಾಗಿ ಶಸ್ತ್ರಶಾಸ್ತ್ರಗಳಲ್ಲಿ ಪ್ರವೀಣನಾಗಿ ಇರತಕ್ಕವನೆಂದು ಅರ್ಥವು. ಇಂತಹ ಭಯಂಕರವಾದ ಪಾಂಡವರ ಸೈನ್ಯವು ನಮ್ಮನ್ನು ಜಯಿಸಲಿಕ್ಕೆ ಸಮರ್ಥವಾಗಿದೆ. ಮಹಾ ಬಲಿಷ್ಠನಾದ ಭೀಮಸೇನನು ಆ ಸೈನ್ಯವನ್ನು ರಕ್ಷಿಸುತ್ತಿದ್ದಾನೆ. ನಮ್ಮ ಸಹಾಯಕ್ಕೆ ನೀವು, ಭೀಷ್ಮರು, ಕರ್ಣನು, ಅಶ್ವತ್ಥಾಮನು, ಇವರೇ ಮೊದಲಾದ ಮಹಾನುಭಾವರು ಇರುವುದೇನೋ ನಿಜ. ಆದರೆ ನೀವು ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿದವರು. ಯುದ್ಧಕ್ಕೆ ಮುಖ್ಯ ಬೇಕಾದ ಶೌರ್ಯಾದಿ ಗುಣಗಳು ನಿಮ್ಮಲ್ಲಿರ-ಲಾರವು. ನೀವು ಬ್ರಾಹ್ಮಣರಾದುದರಿಂದ ದಯಾಳುಗಳು ಮತ್ತು ಪಾಂಡವರ ಪಕ್ಷಪಾತಿಗಳು. ನಿಮ್ಮ ಮಗನಾದ ಅಶ್ವತ್ಥಾಮನು ಮತ್ತು ಕೃಪಾಚಾರ್ಯರು ನಿಮ್ಮ ಮಾರ್ಗವನ್ನೇ ಅನುಸರಿಸತಕ್ಕವರು. ಭೀಷ್ಮರು ವೃದ್ಧರು. ಇಷ್ಟೇ ಅಲ್ಲದೆ ಪಾಂಡವರನ್ನು ನಾನು ಸಂಹರಿಸುವುದಿಲ್ಲವೆಂದು ಪ್ರತಿಜ್ಞೆ ಮಾಡಿಯಾಗಿದೆ. ಕರ್ಣನು ಮಹಾಧನುರ್ವಿದ್ಯಾಪಾರಂಗತನಾದರೂ ಪರಶುರಾಮದೇವರ ಶಾಪದಿಂದ ಸ್ಪರ್ಧೆಯಿಂದ ಯುದ್ಧಮಾಡಿದಾಗ ಪರಾಜಿತನಾಗತಕ್ಕವನು. ಇನ್ನೂ ಅನೇಕರು ನಮಗೆ ಸಹಾಯಕರಾಗಿ ಬಂದಿದ್ದರೂ ಅವರು ಒಬ್ಬೊಬ್ಬರಾಗಿ ಯುದ್ಧ ಮಾಡಲು ಅಸಮರ್ಥರು. ಬಹು ಆಯುಧಗಳನ್ನು ಧರಿಸಿದ್ದುದರಿಂದಲೇ ಸ್ವಾಭಾವಿಕವಾದ ಬಾಹುಬಲವು ಅವರಲ್ಲಿ ಇಲ್ಲವೆಂದು ತಿಳಿಯುತ್ತದೆ. ಅವರು ನನಗೋಸ್ಕರ ಪ್ರಾಣವನ್ನು ಬಿಡಲಿಕ್ಕೇನೇ ಬಂದಿರುತ್ತಾರೆ. ಆದುದರಿಂದ ನಮ್ಮ ಸೈನ್ಯವು ಅಪೂರ್ಣವಾಗಿದೆ. ಈ ಕಾರಣದಿಂದ ಬಹಳ ಜಾಗ್ರತೆಯಿಂದ ಭೀಷ್ಮರನ್ನು ನೀವೆಲ್ಲರೂ ರಕ್ಷಿಸಬೇಕು" ಇತ್ಯಾದಿ ಮಾತನ್ನು ಹೇಳುತ್ತಾ, ದುರ್ಯೋಧನನು ವಿಷಾದವನ್ನು ಹೊಂದುತ್ತಿರುವಾಗ ಭೀಷ್ಮರು ದುರ್ಯೋಧನನಿಗೆ ಹರ್ಷವಾಗು-ವುದಕ್ಕೋಸ್ಕರ ಸಿಂಹನಾದವನ್ನು ಮಾಡಿ ಶಂಖವನ್ನು ಊದಿದರು. ಆವಾಗ ದುರ್ಯೋಧನನ ಸೈನ್ಯದಲ್ಲಿರತಕ್ಕವರು ಅನೇಕರು ಶಂಖ, ಭೇರಿ, ಪಣ, ಆನಕ, ಗೋಮುಖ ಮೊದಲಾದ ವಾದ್ಯಗಳಿಂದ ದೊಡ್ಡ ದಿಗಂತವ್ಯಾಪಿಯಾದ ಶಬ್ದವನ್ನು ಮಾಡಿದರು.

ಅನಂತರದಲ್ಲಿ ಶ್ವೇತಕುದುರೆಗಳಿಂದ ಉತ್ತಮವಾದ ರಥದಲ್ಲಿ ಇರತಕ್ಕ ಶ್ರೀಕೃಷ್ಣಾರ್ಜುನರು ತಮ್ಮ ತಮ್ಮ ಪಾಂಚಜನ್ಯ, ದೇವದತ್ತ ಎಂಬ ಶಂಖವನ್ನು ಊದಿದರು. ಈ ದೇಹದಲ್ಲಿರತಕ್ಕ ಪರಮಾತ್ಮ ಮತ್ತು ಜೀವರೇ ಆ ಕೃಷ್ಣಾರ್ಜುನರು. ಈ ದೇಹವು ಸ್ಯಂದು ಪ್ರಸ್ರವಣೇ ಎಂಬ ಧಾತುವಿನಿಂದ ಮೋಕ್ಷಾದಿ ಪುರುಷಾರ್ಥ ಕೊಡುವ ಕಾರಣ ಸ್ಯಂದನ ಎಂದು ಹೇಳಲ್ಪಡುತ್ತದೆ. ಈ ಶರೀರವು ರಥವೆಂದು ಉಪನಿಷತ್ತಿನಲ್ಲಿ ಹೇಳಿದ್ದಾರೆ. ವಿಷಯಗಳನ್ನು ಕುರಿತು ಓಡುವ ಇಂದ್ರಿಯಗಳೇ ಶರೀರವೆಂಬ ರಥದ ಕುದುರೆಗಳು. ಸದಸದ್ವಿವೇಕ-ಬುದ್ಧಿಯು ಸಾರಥಿಯು. ಮನಸ್ಸು ಕಡಿವಾಣ. ಶಬ್ದಾದಿ ವಿಷಯಗಳು ಇಂದ್ರಿಯ-ಗಳೆಂಬ ಕುದುರೆಯು ಹೋಗತಕ್ಕ ಮಾರ್ಗವು. ಆ ಶರೀರವೆಂಬ ರಥದಲ್ಲಿ ಮುಖ್ಯಸ್ವಾಮಿಯಾಗಿ ಪರಮಾತ್ಮನು, ಅಮುಖ್ಯಸ್ವಾಮಿಯಾಗಿ ಜೀವನು ವಾಸ ಮಾಡುತ್ತಾರೆ. ಅದೇ ಪರಮಾತ್ಮ ಸ್ವರೂಪನು ಕೃಷ್ಣನು. ಅದೇ ಜೀವಸ್ವರೂಪನು ಅರ್ಜುನನು. ಅವರಿಬ್ಬರು ಗುರುಶಿಷ್ಯಭಾವದಿಂದ ಯುದ್ಧಾ-ರಂಭದಲ್ಲಿ ಮಿಳಿತರಾಗಿ ಶಂಖದಂತೆ ಆಕಾರವುಳ್ಳ ಪ್ರಣವದ ಅರ್ಥವನ್ನು ಗೀತೋಪದೇಶ ರೂಪವಾಗಿ ನಡೆಸುತ್ತಾರೆಂಬ ಗೂಢಾರ್ಥವು ಇಲ್ಲಿ ಅಡಕವಾಗಿದೆ.

ಅನಂತರದಲ್ಲಿ ಭೀಮಸೇನನು ಯುಧಿಷ್ಠಿರನು ನಕುಲ-ಸಹದೇವ ಮೊದಲಾದವರು ತಮ್ಮ ತಮ್ಮ ಶಂಖಗಳನ್ನು ಊದಿದರು. ಈ ಧ್ವನಿಯು ದುರ್ಯೋಧನನ ಸೈನ್ಯದ ಹೃದಯ ಭೇದನ ಮಾಡಿತು.

ಈ ಸಮಯದಲ್ಲಿ ಅರ್ಜುನನು ಕೃಷ್ಣನನ್ನು ಪ್ರಾರ್ಥಿಸುತ್ತಾನೆ. "ಶ್ರೀಕೃಷ್ಣನೇ! ಈ ಯುದ್ಧಕ್ಕೆ ಯಾರು ಯಾರು ಬಂದಿದ್ದಾರೆ? ಯಾರು ಯಾರೊಂದಿಗೆ ನಾನು ಯುದ್ಧ ಮಾಡಬೇಕೆಂಬುದನ್ನು ನೋಡಬೇಕಾಗಿದೆ. ಎರಡೂ ಸೈನ್ಯದ ಮಧ್ಯದಲ್ಲಿ ಈ ರಥವನ್ನು ಸ್ಥಾಪಿಸು" ಎಂದು ಪ್ರಾರ್ಥನೆ ಮಾಡಿದಾಗ, ಶ್ರೀಕೃಷ್ಣನು ರಥವನ್ನು ಅದೇ ರೀತಿಯಾಗಿ ಸ್ಥಾಪಿಸಿದನು. "ನೋಡು ಎಲ್ಲರನ್ನೂ" ಎಂದು ಹೇಳಿದನು. ಅರ್ಜುನನು ಆಚಾರ್ಯರಾಗಿರತಕ್ಕವರನ್ನೂ ಮತ್ತು ಅನೇಕ ಮುಖ್ಯ ಬಂಧುಗಳು ಯುದ್ಧಕ್ಕೆ ಬಂದುದನ್ನು ನೋಡಿದನು. ಅರ್ಜುನನಿಗೆ ವಿಲಕ್ಷಣವಾದ ಒಂದು ಕೃಪೆಯು ಉಂಟಾಯಿತು; ದುಃಖವಾಯಿತು. ಬಂಧುಗಳ

ಸಂಹಾರದಿಂದ ನನಗೆ ಪಾಪ ಉಂಟಾಗುತ್ತದೆ ಎಂದು ತಿಳಿದು ವಿಷಾದದಿಂದ ಕೂಡಿದವನಾಗಿ, ಕೃಷ್ಣನನ್ನು ಕುರಿತು ಈ ರೀತಿ ಹೇಳುತ್ತಿದ್ದಾನೆ:

"ಎಲೋ ಶ್ರೀಕೃಷ್ಣನೇ! ನನಗೆ ಬಹಳ ಮನೋದೌರ್ಬಲ್ಯ ಉಂಟಾಗಿದೆ. ನನ್ನ ಮೈ ನಡುಗುತ್ತಿದೆ. ಹಾಗೇ ಸುಡುವಂತಿದೆ. ನನ್ನ ಕೈಯಿಂದ ಗಾಂಡೀವವು ಬೀಳುವಂತಿದೆ. ನನಗೆ ನಿಲ್ಲುವಷ್ಟು ಸಾಮರ್ಥ್ಯವಿಲ್ಲದಂತಾಗಿದೆ. ಪರಾಜಯಸೂಚಕ ಅಪಶಕುನಗಳು ಕಾಣುತ್ತವೆ. ನಾನು ಯುದ್ಧ ಮಾಡಲಾರೆ. ಯುದ್ಧದಿಂದ ಏನು ಪ್ರಯೋಜನ? ಒಂದು ವೇಳೆ ಜಯ ಸಿಕ್ಕಿದರೂ ಮುಂದೇನು? ಯಾವ ಬಂಧುಗಳಿಗೋಸ್ಕರವಾಗಿ ಈ ರಾಜ್ಯವನ್ನು ಅಪೇಕ್ಷಿಸುತ್ತೇವೋ, ಆ ಬಂಧುಗಳು ನಾಶವಾದ ಮೇಲೆ ಜಯದಿಂದ ರಾಜ್ಯ ಸಿಕ್ಕರೇನು ಪ್ರಯೋಜನ? ಒಂದು ವೇಳೆ ತ್ರೈಲೋಕ್ಯ ಅಧಿಪತ್ಯವು ಸಿಗುವ ಹಾಗಿದ್ದರೂ, ಅದಕ್ಕೆ ಸಾಧನವಾದ ಬಂಧುಹನನರೂಪ ಯುದ್ಧವನ್ನು ನಾನು ಮಾಡಲಾರೆ. ಹೀಗಿರುವಾಗ ಈ ಅಲ್ಪ-ಭೂಮಿಗೋಸ್ಕರವಾಗಿ ಎಂದಿಗೂ ಯುದ್ಧ ಮಾಡುವಂತಿಲ್ಲ. ಬಂಧುಗಳು ಇಲ್ಲದ ರಾಜ್ಯಲಾಭದಿಂದ ಏನೂ ಐಹಿಕ ಸುಖವಿಲ್ಲ, ಪಾರತ್ರಿಕ ಸುಖವನ್ನು ಯೋಚಿಸಿದರೆ ಅದೂ ಇಲ್ಲ. ಪೂಜ್ಯರಾದ ಭೀಷ್ಮದ್ರೋಣಾದಿಗಳನ್ನು ಸಂಹರಿಸಿ, ಆತತಾಯಿ-ಗಳೆಂಬ ಅಪವಾದವನ್ನು ಹೊಂದಿ ಪಾಪಕ್ಕೆ ಗುರಿಯಾಗಬೇಕಾಗುತ್ತದೆ. ಆ ಪಾಪದಿಂದ ಪರತ್ರ ದುಃಖವನ್ನೇ ಅನುಭವಿಸಬೇಕಾಗುತ್ತದೆ. ಸುಖವನ್ನು ಅನು-ಭವಿಸುವ ಆಸೆಯೇ ಇಲ್ಲ.

ಯುದ್ಧದಿಂದ ನಮ್ಮ ಕುಲವೇ ನಾಶವಾಗುತ್ತದೆ. ಕುಲಕ್ಷಯದಿಂದ ಕುಲಧರ್ಮಗಳು ನಷ್ಟವಾಗುತ್ತವೆ. ಅದರಿಂದ ಅಧರ್ಮವು ಬಂದು ಸೇರಿಕೊಳ್ಳುತ್ತದೆ. ಇದರಿಂದ ಸ್ತ್ರೀಯರು ದುಷ್ಟರಾಗುತ್ತಾರೆ. ಹಾಗೇ ವರ್ಣಸಂಕರವೂ ಆಗುವುದು. ಇದರಿಂದ ಪಿತೃಗಳಿಗೆ ಪಿಂಡೋದಕಗಳು ಮುಟ್ಟದೆ, ನಾವು ಪಾಪಕ್ಕೆ ಗುರಿಯಾಗುತ್ತೇವೆ. ನಾವು ನರಕವನ್ನೇ ಅನುಭವಿಸಬೇಕಾಗುವುದು. ಆದ್ದರಿಂದ ನಾನು ಶಸ್ತ್ರವನ್ನು ಪರಿತ್ಯಾಗ ಮಾಡುತ್ತೇನೆ. ನನ್ನನ್ನು ದುರ್ಯೋ-ಧನಾದಿಗಳು ಬಂದು ಸಂಹರಿಸಿದರೂ ಅಡ್ಡಿಯಿಲ್ಲ. ನನಗೆ ಅದರಿಂದ ಕ್ಷೇಮವೇ. ಇಹದಲ್ಲಿ ಬಂಧುಗಳ ಹತ್ಯೆಯ ಪಾಪವು ಇಲ್ಲದಂತಾಯಿತು. ರಣಭೂಮಿಯಲ್ಲಿ

ಮೃತನಾದುದರಿಂದ ಪರತ್ರ ಸ್ವರ್ಗಸುಖವು ಸಿಗಬಹುದು" ಎಂದು ಹೇಳಿ ಅರ್ಜುನನು ಆಯುಧವನ್ನು ಕೆಳಗಿಟ್ಟು ರಥಮಧ್ಯದಲ್ಲಿ ಕುಳಿತು ಬಹಳ ದುಃಖಸಾಗರದಲ್ಲಿ ಮಗ್ನನಾದನು.

**ಇಲ್ಲಿಗೆ ಒಂದನೇ ಅಧ್ಯಾಯವು ಮುಗಿದುದು.**

# ಎರಡನೇ ಅಧ್ಯಾಯ

ಆಗ ಶ್ರೀಕೃಷ್ಣ ಪರಮಾತ್ಮನು "ಎಲೋ ಅರ್ಜುನನೇ! ನಿನ್ನ ಪೂರ್ವಿಕರಾದ ಮಹಾತ್ಮರು ಯಾರೂ ಮಾಡದೇ ಇದ್ದ, ಮತ್ತು ಅಪಕೀರ್ತಿಕರವಾದ ನಿನ್ನ ಮನೋದೌರ್ಬಲ್ಯವನ್ನು ಬಿಟ್ಟುಬಿಡು. ಯುದ್ಧವನ್ನು ಮಾಡು" ಎಂದು ಹೇಳಿದರೂ, ಅರ್ಜುನನ ಮನಸ್ಸಿಗೆ ಸಮಾಧಾನವಾಗದೇ, ಕರ್ತವ್ಯಮೌಢ್ಯವನ್ನು ಹೊಂದಿದವನಾಗಿ ಕೃಷ್ಣಪರಮಾತ್ಮನಲ್ಲಿ ಶಿಷ್ಯ ಭಾವದಿಂದ ಮೊರೆ ಹೊಂದಿದನು. ನಾನು ಏನು ಮಾಡಬೇಕೆಂಬುದನ್ನು ನನಗೆ ಚೆನ್ನಾಗಿ ಬೋಧಿಸಿ ನನ್ನನ್ನು ಉದ್ಧಾರ ಮಾಡಬೇಕೆಂದನು. ಆಗ ಶ್ರೀಕೃಷ್ಣ ಪರಮಾತ್ಮನು ಉಪದೇಶ ಕೊಡಲು ಆರಂಭ ಮಾಡುತ್ತಾನೆ.

ಈ ಉಪದೇಶದ ವಿಷಯದಲ್ಲಿ ಕೆಲವರು ಆಕ್ಷೇಪವನ್ನು ಮಾಡುತ್ತಾರೆ. ಏನೆಂದರೆ, ಶ್ರೀಕೃಷ್ಣನು ಅರ್ಜುನನಿಗೆ ಯುದ್ಧವನ್ನು ಮಾಡು ಎಂಬ ವಿಷಯವನ್ನೇ ಹೇಳಲಿಕ್ಕೆ ಪ್ರಸಕ್ತಿಯಿದೆ ಹೊರತು ಜೀವ ಪರಮಾತ್ಮ ಮೊದಲಾದ ವೇದಾಂತ ಶಾಸ್ತ್ರಕ್ಕೆ ಸಂಬಂಧಪಟ್ಟ ವಿಚಾರಗಳಿಗೆ ಗೀತೆಯಲ್ಲಿ ಪ್ರಸಕ್ತಿಯಿಲ್ಲ. ಆದುದರಿಂದ ಅದಕ್ಕೆ ಸಂಬಂಧಪಟ್ಟ ಶ್ಲೋಕಗಳು ಗೀತೆಯಲ್ಲಿ ಪ್ರಕ್ಷಿಪ್ತಭಾಗ ಎಂದು ಕೆಲವರು ಆಕ್ಷೇಪಿಸುವುದಕ್ಕೆ ಶ್ರೀಮಧ್ವಾಚಾರ್ಯರು ತಮ್ಮ ಗೀತಾತಾತ್ಪರ್ಯವೆಂಬ ಗ್ರಂಥದಲ್ಲಿ ಉತ್ತಮವಾದ ಸಮಾಧಾನವನ್ನು ಹೇಳಿದ್ದಾರೆ:

ಅದೇನೆಂದರೆ, ಶ್ರೀಕೃಷ್ಣನು ಅರ್ಜುನನನ್ನು ಯುದ್ಧ ಮಾಡೆಂದು ಉಪದೇಶ ಮಾಡಿದ ಪ್ರಕಾರವು ಈ ರೀತಿಯಾಗಿದೆ: 'ಎಲ್ಲರೂ ಭಗವದ–ಧೀನರಾದುದರಿಂದ, ಅವನೇ ಸ್ವತಂತ್ರನಾದ್ದರಿಂದ ತನ್ನ ವರ್ಣಾಶ್ರಮಕ್ಕೆ ಉಚಿತವಾದ ಕರ್ಮಗಳನ್ನು ಭಗವದಾರಾಧನಾ ಬುದ್ಧಿಯಿಂದ ಭಕ್ತಿಪೂರ್ವಕವಾಗಿ ಮಾಡುವುದೇ ಶ್ರೇಯಸ್ಕರವು. ಅವನು ಭಕ್ತಿಯಿಂದ ಆರಾಧಿತನಾಗಿಯೇ ಮೋಕ್ಷ ಕೊಡತಕ್ಕವನಾದ್ದರಿಂದ ಆ ಭಗವಂತನಿಗೆ ಪ್ರೀತಿಕರವಾದ ಪೂಜೆಯನ್ನು ಎಲ್ಲರೂ ಮಾಡಬೇಕು. ಅವನಿಗೆ ವರ್ಣಾಶ್ರಮೋಚಿತ ಕರ್ಮಾನುಷ್ಠಾನವೇ ಅತ್ಯಂತ

ಪ್ರೀತಿಕರವಾದ ಪೂಜೆಯು. ಆದುದರಿಂದ ಕ್ಷತ್ರಿಯನಾದ ನಿನಗೆ (ಅರ್ಜುನನಿಗೆ) ಧರ್ಮನಾಶ ಮಾಡುವ ಭಗವದ್ದ್ವೇಷಿಗಳನ್ನು ಮತ್ತು ಅವರ ಸಂಬಂಧಿಕರನ್ನು ಭಗವತ್ಪ್ರೀತ್ಯರ್ಥವಾಗಿ ಯುದ್ಧದಲ್ಲಿ ಸಂಹರಿಸುವುದೇ ಧರ್ಮವು. ಆದುದರಿಂದ ಇಂತಹ ಧರ್ಮವನ್ನು ನೀನು ಅವಶ್ಯವಾಗಿ ಮಾಡಲೇಬೇಕು' ಎಂದು. ಈ ರೀತಿಯಾದ ಉಪದೇಶದ ಸಮಯದಲ್ಲಿ ಭಗವದ್ವಿಚಾರಗಳು, ಭಗವಂತನಿಗೂ ಜೀವಗೂ ಇರತಕ್ಕ ಸಂಬಂಧಗಳು ಪ್ರಸಕ್ತವಾದ್ದರಿಂದ ಆ ವಿಚಾರವನ್ನೂ ಈ ಗೀತೆಯಲ್ಲಿ ಹೇಳುವುದು ಅಸಂಗತವಲ್ಲವೆಂದು ಸಮರ್ಪಕವಾದ ಸಮಾಧಾನವನ್ನು ಶ್ರೀಮಧ್ವಾಚಾರ್ಯರು ಬರೆದಿರುತ್ತಾರೆ.

ಇನ್ನೂ ಕೆಲವರ ಆಕ್ಷೇಪವೇನೆಂದರೆ, ಶ್ರೀಕೃಷ್ಣನು ಯುದ್ಧದ ಸಮಯವನ್ನು ಬಿಟ್ಟು ಬೇರೆ ಯಾವುದಾದರೊಂದು ಸಮಯದಲ್ಲಿ ಅರ್ಜುನನಿಗೆ ಗೀತೋಪದೇಶ ಕೊಡಬಹುದಾಗಿತ್ತು. ಈಗ ಈ ಯುದ್ಧದ ಗಡಿಬಿಡಿಯಲ್ಲಿ ಉಪದೇಶ ಕೊಟ್ಟಿದ್ದು ಯಾಕೆ?. ಅದಕ್ಕೆ ಈ ರೀತಿ ಸಮಾಧಾನ: "ನಾಪೃಷ್ಟಃ ಕಸ್ಯಚಿದ್ ಬ್ರೂಯಾತ್" ಎಂಬಂತೆ ತತ್ತ್ವವಿಚಾರವನ್ನು ಶಿಷ್ಯಭಾವದಿಂದ ಪ್ರಶ್ನೆಮಾಡದೇ ಹೇಳಬಾರದು. ಅರ್ಜುನನು ಕರ್ತವ್ಯ ಮೌಢ್ಯವನ್ನು ಹೊಂದಿ ಶಿಷ್ಯಭಾವವನ್ನು ಹೊಂದುವ ಪ್ರಸಂಗವು ಬೇರೆ ಸಮಯದಲ್ಲಿ ಇದ್ದಿಲ್ಲ. ಅವನಿಗೆ ಇಂತಹ ಕಷ್ಟ ಪರಿಸ್ಥಿತಿಯು ಬೇರೆ ಸಮಯದಲ್ಲಿ ಬರಲಿಲ್ಲ. ಈಗ ಆ ಪರಿಸ್ಥಿತಿಯಿಂದ ಕೃಷ್ಣನನ್ನು ತತ್ತ್ವೋಪದೇಶಕ್ಕಾಗಿ ಮೊರೆ ಹೊಂದಿದಾಗ ಈ ಯುದ್ಧಾರಂಭದಲ್ಲಿಯೇ ಗೀತೋಪದೇಶಕ್ಕೆ ಪ್ರಸಂಗ ಉಂಟಾಯಿತು.

ಈ ವಿಷಯದಲ್ಲಿ ಕೆಲವರು ಇನ್ನೊಂದು ಆಕ್ಷೇಪವನ್ನು ಮಾಡುತ್ತಾರೆ. ಇಷ್ಟು ಅಲ್ಪ ಸಮಯದಲ್ಲಿ ಇಷ್ಟು ದೊಡ್ಡ ಗೀತಾಶಾಸ್ತ್ರವನ್ನು ಉಪದೇಶಿಸಲು ಸಾಧ್ಯವೇ? ಎಂದು. ಅದಕ್ಕೆ ಹೀಗೆ ಸಮಾಧಾನ. ಏನೆಂದರೆ, ಉಪದೇಶಕನಾದ ಶ್ರೀಕೃಷ್ಣನು ಅಘಟಿತಘಟನಾಶಕ್ತಿಯುಳ್ಳವನು. ಶಿಷ್ಯನಾದ ಅರ್ಜುನನು ಬಹು ಬುದ್ಧಿಶಾಲಿಯು. ಎಷ್ಟೋ ಕಠಿಣವಾದ, ಗಂಭೀರವಾದ ವಿಷಯಗಳನ್ನು ಸೂಕ್ಷ್ಮರೀತಿಯಿಂದ ಹೇಳಿದರೆ ತಿಳಿದುಕೊಳ್ಳಲು ಸಮರ್ಥನು. ಇಂತಹ ಗುರುಶಿಷ್ಯರ ಸಮಾವೇಶದಲ್ಲಿ ಇದು ಏನೂ ಆಶ್ಚರ್ಯವಲ್ಲ. ನಮ್ಮಂತಹ

ಅಲ್ಪಬುದ್ಧಿಗಳಿಗೆ ಆಶ್ಚರ್ಯವೆಂದು ಕಾಣಬಹುದು. ಅಘಟಿತಘಟನಾಶಕ್ತಿಯುಳ್ಳ ಈಶ್ವರನ ಭಕ್ತಾಗ್ರೇಸರುಗಳೇ ಅತಿ ವಿಚಿತ್ರ ಕಾರ್ಯವನ್ನು ಮಾಡುತ್ತಾರೆ. ಅಂಗುಷ್ಠ ಪರಿಮಿತವಾದ ಅಗಸ್ತ್ಯ ಋಷಿಯು ಸಮುದ್ರವನ್ನೇ ಪಾನ ಮಾಡಿದ. ಹನುಮಂತನು ಸ್ವಲ್ಪ ಕಾಲದಲ್ಲಿ ಶತ ಯೋಜನ ವಿಸ್ತೀರ್ಣವಾದ ಸಮುದ್ರವನ್ನು ದಾಟಿದ. ಹೀಗಿರುವಾಗ, ಆ ಈಶ್ವರ ಸ್ವರೂಪನಾದ ಕೃಷ್ಣನ ಶಕ್ತಿಯು ವರ್ಣನಾತೀತವಾಗಿದೆ. ಆದುದರಿಂದ ಅಲ್ಪಸಮಯದಲ್ಲಿ ಇಷ್ಟು ದೊಡ್ಡ ಗೀತಾಶಾಸ್ತ್ರವನ್ನು ಉಪದೇಶ ಮಾಡಿದನೆಂಬುದು ಯುಕ್ತವೇ ಆಗಿದೆ.

ಇನ್ನು ಅರ್ಜುನನು ನಮ್ಮಂತೆ ಅಜ್ಞಾನಿಯೆಂದು ಕೆಲವರ ತಿಳುವಳಿಕೆ ಇರುತ್ತದೆ. ಆದರೆ, ಅರ್ಜುನನು ದೇವೇಂದ್ರನ ಅವತಾರಿಯಾಗಿದ್ದಾನೆ. ದೇವತೆಗಳು ಬ್ರಹ್ಮಾಪರೋಕ್ಷಿಗಳು. ಹೀಗಿರುವಾಗ ದೇವೇಂದ್ರಸ್ವರೂಪನಾದ ಅರ್ಜುನನು ಎಷ್ಟು ಬ್ರಹ್ಮಾಪರೋಕ್ಷಜ್ಞಾನಿಯೆಂದು ಹೇಳಲಿಕ್ಕೆ ಸಾಧ್ಯವಿಲ್ಲ. ಅಂತಹ ಜ್ಞಾನಿಯಾದ ಅರ್ಜುನನಿಗೆ ಶ್ರೀಕೃಷ್ಣನು ತನ್ನ ಅಘಟಿತಘಟನಾಶಕ್ತಿಯಿಂದ ಅಜ್ಞಾನವನ್ನು ತತ್ಕಾಲದಲ್ಲಿ, ಸೈಂಧವನ ಸಂಹಾರ ಮಾಡುವ ದಿವಸ ಹಗಲನ್ನು ರಾತ್ರಿ ಮಾಡಿದಂತೆ, ಸೃಷ್ಟಿ ಮಾಡಿದನೆಂದು ಹೇಳಬೇಕು. ಅವನ ನಿಮಿತ್ತದಿಂದ ಲೋಕಕ್ಕೆ ಗೀತೋಪದೇಶವು ಆಗಬೇಕಾದ್ದರಿಂದ ಅವನಿಗೆ ಅಜ್ಞಾನವನ್ನು ಉಂಟುಮಾಡಿ ಅವನು ಪ್ರಶ್ನೆ ಮಾಡುವಂತೆ ಶ್ರೀಕೃಷ್ಣನು ಮಾಡಿದನು. ಈ ವಿಷಯವು ಗೀತೆಯ ಉಪಸಂಹಾರದಲ್ಲಿ ಇರುವ "ನಷ್ಟೋ ಮೋಹಃ ಸ್ಮೃತಿರ್ಲಬ್ಧಾ" "ನನ್ನ ಮೋಹವು ಹೋಯಿತು; ನನಗೆ ಹಿಂದಿನ ಸ್ಮರಣೆಯು ಬರುತ್ತಿದೆ" ಎಂಬ ಅರ್ಜುನನ ವಾಕ್ಯದಿಂದ ತಿಳಿಯುತ್ತದೆ. ಅಲ್ಲಿ ಅರ್ಜುನನಿಗೆ ಹಿಂದೆ ಜ್ಞಾನವಿತ್ತು. ಮಧ್ಯಕಾಲದಲ್ಲಿ ಬಂದ ಮೋಹವು ಉಪದೇಶದಿಂದ ನಾಶವಾಗಿ, ಈಗ ಪುನಃ ಹಿಂದೆ ತಿಳಿದ ತತ್ತ್ವವು ಸ್ಮರಿಸಲ್ಪಡುತ್ತದೆ ಎಂದು ಹೇಳಲಾಗಿದೆ. ಹಿಂದೆ ಈ ವಿಷಯವು ಅವನಿಗೆ ತಿಳಿಯದೆ ಇದ್ದಿದ್ದರೆ, "ಈಗ ಸ್ಮರಣೆಗೆ ಬರುತ್ತದೆ" ಎಂದು ಅವನು ಹೇಳುವುದು ಕೂಡುವುದಿಲ್ಲ. ಹಿಂದೆ ತಿಳಿಯದೆ ಇದ್ದಿದ್ದನ್ನು ಸ್ಮರಿಸಲಿಕ್ಕೆ ಬರುವುದಿಲ್ಲ. (ಮೊದಲನೆಯ ದಿನದ ಉಪನ್ಯಾಸವು ಮುಗಿಯಿತು)

ಶ್ರೀಕೃಷ್ಣನಿಗೆ ಅರ್ಜುನನು ಅತ್ಯಂತ ಪ್ರಿಯನಾಗಿದ್ದಾನೆ. ಜ್ಞಾನಿಗಳ ಮೇಲೆ ಶ್ರೀಕೃಷ್ಣನಿಗೆ ಸ್ವಾಭಾವಿಕ ಪ್ರೀತಿಯು. ಅರ್ಜುನನು ಈಗ ತಾತ್ಕಾಲಿಕ ಅಜ್ಞಾನ ಉಳ್ಳವನಾದರೂ ಸ್ವಾಭಾವಿಕವಾಗಿ ದೇವೇಂದ್ರ ಅವತಾರಿ. ಆದ್ದರಿಂದ ದೊಡ್ಡ ಬ್ರಹ್ಮಜ್ಞಾನಿಯಾಗಿದ್ದಾನೆ. ಇಂತಹ ಅರ್ಜುನನಲ್ಲಿ ವಿಶೇಷವಾದ ಪ್ರೀತಿಯು ಇದ್ದುದರಿಂದ ತಾಯಿಯು ಮಕ್ಕಳಲ್ಲಿ ಪ್ರೀತಿಪೂರ್ವಕ ಉಪದೇಶ ಮಾಡುವಂತೆ ಅರ್ಜುನನಿಗೆ ಉಪದೇಶ ಮಾಡಲು ಆರಂಭಿಸುತ್ತಾನೆ:

"ಎಲೋ ಅರ್ಜುನ! ನೀನು ಯಾರ ವಿಷಯದಲ್ಲಿ ದುಃಖವನ್ನು ಮಾಡುತ್ತೀಯೋ, ಅವರು ಶೋಕಕ್ಕೆ ಅರ್ಹರಲ್ಲ. ಅಂದರೆ ಅವರ ವಿಷಯದಲ್ಲಿ ದುಃಖ ಮಾಡುವುದು ಉಚಿತವಲ್ಲ. ತಿಳಿದವರು ಜೀವಂತರಾಗಿದ್ದವರನ್ನು ಕುರಿತು ಶೋಕಮಾಡದೆ ಇರುವಂತೆ, ಸಾಯಲಿಕ್ಕೆ ಸಿದ್ಧರಾದವರ ವಿಷಯದಲ್ಲಿಯೂ ಕೂಡ ಶೋಕ ಮಾಡುವುದಿಲ್ಲ. ನಿನ್ನ ಮಾತು ಕೂಡ ಪ್ರಾಜ್ಞ ಸಮ್ಮತವಾದುದಲ್ಲ. ನಿನ್ನ ಬುದ್ಧಿಯಿಂದಲೇ ನೀನು ಕಲ್ಪಿಸಿ ಮಾತಾಡುತ್ತಿದ್ದೀ. ನೀನು ಯಾರ ವಿಷಯದಲ್ಲಿ ದುಃಖ ಮಾಡುತ್ತೀಯೋ ಆ ಬಂಧುಗಳ ಆತ್ಮ, ದೇಹ ಈ ಎರಡರ ಪೈಕಿ ಆತ್ಮಕ್ಕೆ ಎಂದೂ ಕೂಡ ನಾಶ ಮತ್ತು ಸೃಷ್ಟಿಯು ಇಲ್ಲ. ನೀನು, ನಾನು, ಇತರರು, ಇವರೆಲ್ಲರ ಆತ್ಮರು ನಿತ್ಯರೇ ಆಗಿದ್ದಾರೆ. ಆದುದರಿಂದ ಬಂಧುಗಳ ಆತ್ಮನಾಶನಿಮಿತ್ತಕವಾಗಿ ದುಃಖಮಾಡಲು ಪ್ರಸಕ್ತಿಯೇ ಇಲ್ಲ.

ಇನ್ನು, ಬಂಧುಗಳ ದೇಹಕ್ಕೆ ನಾಶವು ಆಗುವುದೆಂದು ನೀನು ದುಃಖ ಮಾಡುವುದಾದರೆ, ಅದಕ್ಕೆ ಸಮಾಧಾನವನ್ನು ನಾನು ಹೇಳುತ್ತೇನೆ: ಈ ಜೀವನ ದೇಹದಲ್ಲಿ ಬಾಲ್ಯಾವಸ್ಥೆ ಹೋಗಿ ಯೌವನಾವಸ್ಥೆಯು ಬರುವುದು. ಅದೂ ಹೋಗಿ ವಾರ್ಧಕ್ಯವು ಉಂಟಾಗುವುದು. ಬಾಲ್ಯದ ದೇಹ ಹೋಗಿ ಯೌವನಾವಸ್ಥೆಯು ಬರುವಾಗ, ಹಾಗೆಯೇ ಯೌವನಾವಸ್ಥೆಯ ದೇಹ ಹೋಗಿ ವಾರ್ಧಕ್ಯ ದೇಹ ಬರುವಾಗ, ಮನುಷ್ಯನು ದುಃಖಿಸುವುದಿಲ್ಲ. ಒಂದು ದೇಹ ಹೋದರೆ ಇನ್ನೊಂದು ದೇಹ ಬರುತ್ತದೆಂಬ ಸಮಾಧಾನವು ಇರುತ್ತದೆ. ಅದೇ ರೀತಿಯಾಗಿ ಬಂಧುಗಳ

ದೇಹವು ಯುದ್ಧದಲ್ಲಿ ನಷ್ಟವಾದರೆ, ಇನ್ನೊಂದು ದೇಹವು ಬರುವ ಕಾರಣ ಮತ್ತು ಈ ದೇಹಕ್ಕೆ ನಾಶವು ಸರ್ವಥಾ ಒಂದು ದಿವಸ ಇದ್ದ ಕಾರಣ ಧೀರನಾದ ಪುರುಷನು ಮೋಹವನ್ನು ಹೊಂದುವಂತಿಲ್ಲ."

ಇನ್ನೊಂದು ದೃಷ್ಟಾಂತವನ್ನೂ ಈ ವಿಷಯದಲ್ಲಿ ತಿಳಿಸಬಹುದು: ನಾವು ರೂಪಾಯಿಗಳನ್ನು ಕೊಟ್ಟು ಅದಕ್ಕೆ ಪ್ರತಿನಿಧಿಯಾದ ಒಡವೆಯನ್ನು ಕ್ರಯಕ್ಕೆ ಪಡೆದಾಗ ನಮ್ಮ ಕೈಯಲ್ಲಿದ್ದ ಹಣವು ಹೋಯಿತೆಂದು ನಾವು ದುಃಖವನ್ನು ಹೊಂದುವುದಿಲ್ಲ. ಆ ಹಣಕ್ಕೆ ಬೇರೆ ಪ್ರತಿನಿಧಿಯಾದ ವಸ್ತು ಸಿಕ್ಕಿತೆಂದು ಸಮಾಧಾನ ಮಾಡಿಕೊಳ್ಳುತ್ತೇವೆ. ಅದರಂತೆ ಪ್ರಕೃತದಲ್ಲಿ ಧೀರನಾದ ಪುರುಷನು, ವಿಚಾರ ಮಾಡಿ ಮೋಹವನ್ನು ಹೊಂದುವುದಿಲ್ಲ. ಈ ಜೀರ್ಣವಾದ ದೇಹವು ಹೋಗಿ ಇನ್ನೊಂದು ನೂತನವಾದ ದೇಹವು ಬರುವುದರಿಂದ ಸ್ವಲ್ಪ ಹಣ ಕೊಟ್ಟದ್ದಕ್ಕೆ ಒಳ್ಳೆ ಝರತಾರಿ ವಸ್ತ್ರವು ಸಿಕ್ಕಿದರೆ ಸಂತೋಷವಾಗುವಂತೆ ಮರಣದ ವಿಷಯದಲ್ಲಿಯೂ ಧೀರನು ಸಂತೋಷ ಹೊಂದಬಹುದು.

ಆದರೆ, ಈ ದೇಹ ಹೋದ ಮೇಲೆ ಕರ್ಮಾಧೀನವಾಗಿ ಇನ್ನೊಂದು ಜನ್ಮವು ಅತಿ ನೀಚವಾದ ನರಿ, ನಾಯಿ ಮುಂತಾದ ಯೋನಿಯಲ್ಲಿ ಆಗುವ ಸಂಭವವೂ ಇದೆ. ಆದರೆ, ಆ ಯೋನಿಯಲ್ಲಿ ಹುಟ್ಟಿದಾಗ ನನಗೆ ಹಿಂದಿನ ಜನ್ಮವು ಶ್ರೇಷ್ಠವಾಗಿತ್ತೆಂದು ಸ್ಮರಣೆ ಇಲ್ಲದ ಕಾರಣ ಆ ಜೀವನಿಗೆ ದುಃಖವು ಬರಲಾರದು. ಸಣ್ಣ ಬಾಲಕನಿಗೆ ಕಂಠದ ಅನರ್ಘ್ಯವಾದ ಮಾಲಿಕೆಯನ್ನು ತೆಗೆದುಕೊಂಡು, ತಿನ್ನುವ ಮಿಠಾಯಿಯನ್ನು ಕೊಟ್ಟಾಗ, ಆ ಕಂಠದ ಮಾಲಿಕೆಯ ಮಹತ್ತ್ವವು ತಿಳಿಯದ ಕಾರಣ ಆ ಮಗುವು ಹೇಗೆ ದುಃಖಿಸುವುದಿಲ್ಲವೋ, ಹಾಗೆ ನೀಚಯೋನಿಯನ್ನು ಹೊಂದಿರತಕ್ಕ ಜೀವನು ಹಿಂದಿನ ಶ್ರೇಷ್ಠವಾದ ತನ್ನ ಜನ್ಮವನ್ನು ತಿಳಿಯದಿದ್ದ ಕಾರಣ ದುಃಖ ಪಡುವಂತಿಲ್ಲ.

ಆದರೆ, ಆ ಜೀವನು ಹಿಂದಿನ ಶ್ರೇಷ್ಠವಾದ ಜನ್ಮದಲ್ಲಿ ತಾನು ಮುಂದೆ ಯಾವ ಜನ್ಮವನ್ನು ಹೊಂದುತ್ತೇನೋ, ನಾನು ಬಹಳ ಪಾಪ ಕರ್ಮ ಮಾಡಿದ್ದೇನೆ ಅಂತ ವಿಚಾರ ಮಾಡಿ ಮರಣದಲ್ಲಿ ಭಯ ಉಳ್ಳವನು ಆಗಬಹುದು. ಆದರೆ, ಪ್ರಕೃತದಲ್ಲಿ ಮಾತ್ರ ನೀನು ಯಾರ ವಿಷಯದಲ್ಲಿ ದುಃಖ ಮಾಡುತ್ತೀಯೋ, ಆ

ಭೀಷ್ಮಾದಿಗಳು ಪರಮ ಧರ್ಮಮೂರ್ತಿಗಳು, ಮಹಾ ಬ್ರಹ್ಮಜ್ಞಾನಿಗಳು, ಮಹಾ ತೇಜಸ್ವಿಗಳು. ಅವರು ಈ ದೇಹವನ್ನು ಬಿಟ್ಟರೆ, ಇದಕ್ಕಿಂತಲೂ ಶ್ರೇಷ್ಠವಾದ ದೇವತಾಶರೀರವನ್ನೇ ಹೊಂದತಕ್ಕವರಾದ ಕಾರಣ ಅವರು 'ಈ ದೇಹವನ್ನು ಯಾವಾಗ ಬಿಡುತ್ತೇವೆ?' ಎಂದೇ ಯೋಚಿಸುತ್ತಿದ್ದ ಕಾರಣ ಅವರಿಗೆ ಮರಣದಲ್ಲಿ ದುಃಖವಿಲ್ಲ. ಅವರ ವಿಷಯದಲ್ಲಿ ನೀನು ದುಃಖ ಮಾಡಲು ಕಾರಣವಿಲ್ಲ.

ಇನ್ನು ದೇಹ ಮತ್ತು ಆತ್ಮ ಈ ಎರಡು ವಸ್ತುಗಳು ಬೇರೆ ಬೇರೆಯಾಗಿಲ್ಲ. ವೀಳ್ಯದೆಲೆ, ಅಡಿಕೆ ಮತ್ತು ಸುಣ್ಣ ಇವುಗಳನ್ನು ಒಟ್ಟಿಗೆ ಸೇರಿಸಿ ತಿನ್ನುವಾಗ ಅವುಗಳಲ್ಲಿ ಮೊದಲು ಇಲ್ಲದ ಕೆಂಪು ಬಣ್ಣ ಹೊಸದಾಗಿ ಬರುವಂತೆ, ಚತುರ್ಭೂತಗಳಲ್ಲಿ ಮೊದಲು ಇಲ್ಲದ ಒಂದು ಜ್ಞಾನಶಕ್ತಿಯು ಚತುರ್ಭೂತಗಳ ಮೇಲನದಿಂದ ದೇಹವೆಂಬ ವಿಕಾರವನ್ನು ಹೊಂದುವಾಗ ಬರುವುದೆಂಬ ಚಾರ್ವಾಕರ ವಾದವೇನೋ ಇದೆ. ಅದನ್ನು ನಂಬಿ ದೇಹ ಮತ್ತು ಆತ್ಮ ಎರಡೂ ಒಂದೇ ಎಂದು ತಿಳಿದು ಬಂಧುಗಳ ನಾಶದ ನಂತರ ಅವರಿಗೆ ಇನ್ನೊಂದು ದೇಹವು ಬರುವ ಸಂಭವ ಇಲ್ಲದ ಕಾರಣ ದುಃಖ ಮಾಡುವುದು ಯುಕ್ತವಲ್ಲ. ಧೀರನಾಗಿರತಕ್ಕವನಿಗೆ ಇಂತಹ ಮೋಹವು ಬರುವುದಿಲ್ಲ.

ಯಾಕೆಂದರೆ, ಪ್ರತಿಯೊಬ್ಬರ ಅನುಭವವು "ಮಮ ದೇಹಃ" "ಇದು ನನ್ನ ದೇಹವು" ಎಂದೇ ಇರುತ್ತದೆ. ಈ ಅನುಭವದಲ್ಲಿ ನಾನು ಎಂಬ ಆತ್ಮನ ದೆಸೆಯಿಂದ ದೇಹವು ಬೇರೆಯಾಗಿ ಕಾಣುತ್ತದೆ. "ನನ್ನ ಮನೆ" ಎಂಬ ಅನುಭವ-ದಲ್ಲಿ ಮನೆಯು ಬೇರೆ, ನಾನು ಬೇರೆ ಎಂದು ತೋರುವಂತೆ, ಸ್ಪಷ್ಟವಾಗಿ ದೇಹಾತ್ಮಭೇದವು ಅನುಭವಸಿದ್ಧವಾದ ಕಾರಣ ದೇಹಾತ್ಮಭೇದವನ್ನು ಎಲ್ಲರಿಗೂ ತಿಳಿದುಕೊಳ್ಳಲು ಅವಕಾಶವಿದೆ.

ಇನ್ನು ಬಾಲ್ಯ, ಯೌವನ, ವಾರ್ಧಕ್ಯವುಳ್ಳ ಮೂರು ಶರೀರಗಳಲ್ಲಿ ನಾನೊಬ್ಬನೇ ಇದ್ದೇನೆಂದು ಅನುಭವವಿದೆ. ಶರೀರವು ಬೇರೆ ಬೇರೆಯಾದರೂ ಆತ್ಮವು ಒಬ್ಬನೇ ಆದ್ದರಿಂದ ದೇಹಾತ್ಮ ಭೇದವನ್ನು ಒಪ್ಪಬೇಕಾಗುವುದು. ಬಾಲ್ಯ, ಯೌವನ, ವಾರ್ಧಕ್ಯದ ಶರೀರ ಒಂದೇ ಅಲ್ಲ. ಪರಮಾಣುಗಳು

ಭಿನ್ನಭಿನ್ನವಾದುದರಿಂದ ಆಯಾ ಶರೀರಗಳು, ಬೇರೆ ಬೇರೆಯಾಗಿಯೇ ಆಗಬೇಕು. ಅವುಗಳಲ್ಲಿ ಆತ್ಮನು ಮಾತ್ರ ಒಬ್ಬನೇ ಇರುತ್ತಾನೆಂದು ಅನುಭವವಿದೆ.

ಅಲ್ಲದೇ ಹುಟ್ಟಿದ ಮಗು ಅಥವಾ ದನದ ಕರುವು ಸ್ತನ್ಯಪಾನವನ್ನು ತಾನಾಗಿಯೇ ಮಾಡುವುದು ಅನುಭವಸಿದ್ಧವಾಗಿದೆ. ಅದಕ್ಕೆ ಸ್ತನ್ಯಪಾನದಿಂದ ತನ್ನ ಹಸಿವೆ ತೃಷೆಗಳು ಹೋಗುತ್ತವೆಂದು ತಿಳಿಯದೇ, ಸ್ತನ್ಯಪಾನದಲ್ಲಿ ಆಸಕ್ತಿ ಕೂಡುವುದಿಲ್ಲ. ಆ ತಿಳುವಳಿಕೆಯು ಬರಬೇಕಾದರೆ ಈ ಜನುಮದಲ್ಲಿ ಹೊಸದಾಗಿ ಹುಟ್ಟಿದ ಮಗುವಿಗೆ ಅಂತಹ ಅನುಭವವಿಲ್ಲ. ಅದಕ್ಕೋಸ್ಕರ ಹಿಂದಿನ ಜನ್ಮವನ್ನು ಒಪ್ಪಿ ಆ ಜನುಮದ ಅನುಭವದಿಂದ ಸ್ಮರಣೆಯು ಉಂಟಾಗಿ ಈ ಜನುಮದಲ್ಲಿ ಪ್ರವೃತ್ತಿ ಮಾಡುತ್ತದೆಂದು ಹೇಳಬೇಕು. ಹಾಗಾದರೆ ಒಂದು ಆತ್ಮನಿಗೆ ಹಿಂದೆ ಒಂದು ಜನುಮ. ಅದೇ ಆತ್ಮನಿಗೆ ಈಗ ಪುನಃ ಜನ್ಮ. ಈ ರೀತಿ ಒಪ್ಪಬೇಕಾದುದರಿಂದ ಒಬ್ಬ ಆತ್ಮನಿಗೆ ಅನೇಕ ದೇಹಗಳು ಉಂಟೆಂದು ಸಿದ್ಧವಾದ ಪ್ರಯುಕ್ತ, ದೇಹ ಬೇರೆ, ಆತ್ಮ ಬೇರೆ ಎಂದು ಸಿದ್ಧವಾಯಿತು.

ಒಂದು ತಂದೆಯ ಮಕ್ಕಳ ಮಧ್ಯದಲ್ಲಿ ಒಬ್ಬನಿಗೆ ಒಂದು ವಿದ್ಯೆಯಲ್ಲಿ ಆಸಕ್ತಿಯು ಅದರಲ್ಲಿ ನಿಪುಣತೆಯೂ, ಮತ್ತೊಂದು ವಿದ್ಯೆಯು ಎಷ್ಟು ಅಭ್ಯಾಸ ಮಾಡಿದರೂ ಅದು ಸ್ವಲ್ಪವೂ ತಿಳಿಯದೇ ಇರುವಿಕೆ, ಹಾಗೇ ಇನೊಬ್ಬ ಹುಡುಗನಿಗೆ ಇನ್ನೊಂದು ವಿದ್ಯೆಯಲ್ಲಿ ಆಸಕ್ತಿ, ಅದರಲ್ಲಿ ಪ್ರತಿಭೆ, ನಿಪುಣತೆ ಇದ್ದರೆ, ಇನ್ನು ಇತರ ವಿದ್ಯೆಗಳು ಅವನಿಗೆ ಎಷ್ಟು ಪ್ರಯತ್ನ ಮಾಡಿದರೂ ಬಾರದೆ ಇರುವುದು ಕಾಣುತ್ತದೆ. ಇದನ್ನು ಪರಿಶೀಲಿಸಿದರೆ ಇದು ಆನುವಂಶಿಕ ಗುಣವೆಂದು ಹೇಳಲು ಸಾಧ್ಯವಿಲ್ಲ. ತಂದೆ ತಾಯಿಯರ ವಂಶದಲ್ಲಿ ಈ ಮಕ್ಕಳಿಗೆ ಇರುವ ವಿದ್ಯೆಯು ಇಲ್ಲದೇನೆ ಇರಬಹುದು. ಅದು ಆನುವಂಶಿಕವಾಗಿ ಬರುವುದಾದರೆ ಎಲ್ಲ ಮಕ್ಕಳಿಗೆ ಸಮಾನವಾದ ವಿದ್ಯೆ ಬರಬೇಕಾಗುವುದು. ಇದು ಹಾಗೆ ಕಂಡಿಲ್ಲ. ಆದುದರಿಂದ ಜನ್ಮಾಂತರದಲ್ಲಿ ಯಾವ ವಿದ್ಯೆಯಲ್ಲಿ ಯಾವ ಜೀವನು ಅಭ್ಯಾಸ ಮಾಡಿದ್ದಾನೋ ಆ ವಿದ್ಯೆಯು ಹಿಂದಿನ ಸಂಸ್ಕಾರದಿಂದ ಅವನಿಗೆ ಅನಾಯಾಸವಾಗಿ ಬರುತ್ತದೆಂದು ಹೇಳಬೇಕಾಗುತ್ತದೆ. ಇದರಿಂದ ಪುನರ್ಜನ್ಮವು ಸಿದ್ಧವಾಗುತ್ತದೆ. ದೇಹಾತ್ಮ-ಭೇದವನ್ನು ಇದರಿಂದ ನಿಶ್ಚಯಿಸಬಹುದು.

ಧೀರನಾದವನು ಈ ಅನುಭವವನ್ನು ತಿಳಿದುಕೊಂಡ ಕಾರಣ ಅವನು ಮೋಹವನ್ನು ಹೊಂದುವುದಿಲ್ಲ. ಇಷ್ಟೇ ಅಲ್ಲದೇ ಅಪೌರುಷೇಯುವಾದ ಅನಾದಿ ನಿತ್ಯವಾದ ನಿರ್ದುಷ್ಟವಾದ ವೇದವು ದೇಹಾತ್ಮ ಭೇದವನ್ನು, ಆತ್ಮ ಅಜರಾಮರ–ವೆಂಬುವುದನ್ನು ಸಾರುತ್ತಿದೆ. ಆದಕಾರಣ ಈ ವಿಷಯದಲ್ಲಿ ಮೋಹವನ್ನು ಮಾಡುವುದು ಸರ್ವಥಾ ಅಯುಕ್ತವು.

ಇಷ್ಟು ಶ್ರೀಕೃಷ್ಣ ಪರಮಾತ್ಮನು ಉಪದೇಶ ಮಾಡಿದ ಮೇಲೆ, ಅರ್ಜುನನು ಪುನಃ ಪ್ರಶ್ನೆ ಮಾಡುತ್ತಾನೆ: "ಎಲೋ ಶ್ರೀಕೃಷ್ಣನೇ! ನೀನು ಉಪದೇಶ ಮಾಡಿದ ಪ್ರಕಾರ ನನ್ನ ಬಂಧುಗಳು ಸತ್ತುಹೋದರೂ ಅವರಿಗೆ ಇನ್ನೊಂದು ಉತ್ತಮ ದೇಹವು ಹೊಂದುವ ಪ್ರಯುಕ್ತ ದುಃಖವನ್ನು ಹೊಂದಲಿಕ್ಕೆ ಕಾರಣವಿಲ್ಲದಿದ್ದರೂ ನನಗೆ ಆ ಬಂಧುಗಳ ದರ್ಶನಾದಿಗಳು ಇಲ್ಲದಂತಾಗಿ ನಾನಾ ದುಃಖಗಳನ್ನು ಅನುಭವಿಸಬೇಕಾಗುತ್ತದೆ. ಇದಕ್ಕೆ ಸಮಾಧಾನವೇನು?"

ಶ್ರೀಕೃಷ್ಣನು ಉಪದೇಶ ಮಾಡುತ್ತಾನೆ: "ಎಲೋ ಅರ್ಜುನನೇ! ಸುಖದುಃಖಗಳಿಗೆ ವಿಷಯ ಸಂಬಂಧಗಳು ಕೇವಲವಾಗಿ ಕಾರಣವಾಗಲಾರವು. ಆ ವಿಷಯಗಳಲ್ಲಿ ಸ್ನೇಹವನ್ನು, ಇದು ನನ್ನ ವಸ್ತು ಎಂಬ ಪ್ರೇಮವನ್ನು ನಾವು ಬೆಳೆಸಿಕೊಂಡರೆ ಮಾತ್ರ ಅದರ ಪ್ರಾಪ್ತಿಯಿಂದ ಸುಖವು ಅದರ ವಿಯೋಗದಿಂದ ದುಃಖವು ಉಂಟಾಗುತ್ತದೆ. ಈ ತರಹದ ಅಭಿಮಾನವು ಇಲ್ಲದೆ ಇದ್ದ ನಿದ್ರಾವಸ್ಥೆಯಲ್ಲಿ, ಆ ನಿದ್ರಿತ ಪುರುಷನನ್ನು ವಸ್ತ್ರ ಚಂದನ ಮೂಲ್ಯಾದಿಗಳಿಂದ ಅಲಂಕರಿಸಿ ಪೂಜೆ ಮಾಡಿದರೂ ಅವನಿಗೆ ಆಗ ಸುಖವಿಲ್ಲ. ಆಗ ನನ್ನ ದೇಹವೆಂಬ ಅಭಿಮಾನವು ಅವನಿಗಿಲ್ಲ. ಆದುದರಿಂದ ನನ್ನ ದೇಹಕ್ಕೆ ಪೂಜೆ ಮಾಡಿದರೆಂದು ಸಂತೋಷಪಡುವುದಿಲ್ಲ. ಒಬ್ಬ ಪುರುಷನು ಒಂದು ಕನ್ನಿಕೆಯನ್ನು ಲಗ್ನ ಮಾಡಿಕೊಂಡು ಅಮೇಲೆ ಅವಳಿಗೆ ಏನಾದರೂ ಜ್ವರಾದಿ ತಾಪವು ಉಂಟಾದಾಗ ತನಗೆ ಆ ದುಃಖವು ಸಂಭವಿಸಿತೆಂದು ತಿಳಿಯುತ್ತಾನೆ. ಅದೇ ಹುಡುಗಿಯನ್ನು ತಾನು ಲಗ್ನ ಮಾಡಿಕೊಳ್ಳುವುದಕ್ಕಿಂತ ಮೊದಲು ಎಷ್ಟೋ ಸಲ ಇಂತಹ ದುಃಖಗಳಿಂದ ಕೂಡಿದವಳನ್ನಾಗಿ ನೋಡಿದ್ದರೂ ಆಗ ಅವನಿಗೆ ದುಃಖವಾಗುವುದಿಲ್ಲ. ಆಗ

ನನ್ನವಳೆಂಬ ಅಭಿಮಾನವು ಇರುತ್ತಿದ್ದಿಲ್ಲ. ವಿವಾಹ ನಂತರದಲ್ಲಿ ಅಭಿಮಾನ ಉಳ್ಳವನಾದ ಪ್ರಯುಕ್ತ ದುಃಖವನ್ನು ಹೊಂದುವನು. ಇತ್ಯಾದಿ ದೃಷ್ಟಾಂತಗಳಿಂದ ಅಭಿಮಾನ ಸಹಿತವಾದ ವಿಷಯ ಸಂಬಂಧವೇ ಸುಖ ದುಃಖಗಳಿಗೆ ಕಾರಣವೆಂದು ತಿಳಿಯಬಹುದು. ಈ ಅಭಿಮಾನವನ್ನು ನೀನು ಬಿಡು. ಎಲ್ಲ ವಸ್ತುಗಳು ಸರ್ವಸ್ವಾಮಿಯಾದ ಪರಮಾತ್ಮನದು. ನನ್ನದೇ ವಸ್ತುವಾದ ಯಾವುದೂ ಇಲ್ಲವೆಂದು ತಿಳಿದು ನನ್ನದೆಂಬ ಅಭಿಮಾನವನ್ನು ಬಿಡು. ಈ ವಸ್ತು ಬಹಳ ಉತ್ತಮವಾದದ್ದು, ಸುಂದರವಾದದ್ದು ಎಂಬ ಸ್ನೇಹರೂಪ ಅಭಿಮಾನವನ್ನು ಕೂಡ ಯಾವ ವಸ್ತುಗಳಲ್ಲಿಯೂ ಮಾಡಬೇಡ. ಎಲ್ಲ ವಸ್ತುಗಳಲ್ಲಿ ಗುಣಕ್ಕಿಂತ ದೋಷವೇ ಬಹಳ ಇದೆ. ಅದರಿಂದಾಗುವ ಸುಖಕ್ಕಿಂತ ದುಃಖವೇ ಹೆಚ್ಚಾಗುತ್ತದೆ. ಎಲ್ಲ ವಸ್ತುಗಳು ಅಶಾಶ್ವತ. ಅದರ ಸಂಸರ್ಗದಿಂದ ನಾನು ಕೆಡುವ ಸಂಭವವಿದೆ. ಇತ್ಯಾದಿಗಳನ್ನೇ ವಿಚಾರ ಮಾಡಿ ಆ ವಸ್ತುಗಳಲ್ಲಿರತಕ್ಕಂತಹ ಆ ಪ್ರೇಮವೆಂಬ ಅಭಿಮಾನವನ್ನು ಬಿಡು.

ಬಂಧುಗಳು, ಹೆಂಡತಿ, ಮಕ್ಕಳು ಇವರೆಲ್ಲರೂ ಪರಮಾತ್ಮನ ಪೂಜೆಗೆ ಅನುಕೂಲವಾಗಿದ್ದರೇನೇ ನಾನು ಅವರನ್ನು ಅನುಸರಿಸಬೇಕು. ತಾನು ಮಾಡತಕ್ಕ ಧರ್ಮಕ್ಕೆ ವಿರೋಧಿಗಳಾಗಿದ್ದರೆ ಅವರನ್ನು ಸರ್ವಥಾ ಅಭಿಮಾನ ತ್ಯಾಗ ಮಾಡಿ ಪರಿತ್ಯಾಗವನ್ನೇ ಮಾಡಬೇಕು. ಅವರ ಪೋಷಣೆಗಾಗಿ ತಾನು ಭ್ರಷ್ಟನಾಗಿ ವೃಥಾ ಅಯಾಸ ಪಡಬಾರದು. ಆದುದರಿಂದ ನಿನಗೆ ಭಗವದಾರಾಧನರೂಪವಾಗಿ ಅವಶ್ಯ ಕರ್ತವ್ಯವಾದ, ಈ ದುಷ್ಟನಿಗ್ರಹರೂಪವಾದ, ಯುದ್ಧಕ್ಕೆ ನೀನು ಮಾಡತಕ್ಕ ಬಂಧುಪ್ರೇಮವು ಅತ್ಯಂತ ವಿರೋಧಿಯಾದುದರಿಂದ ಈ ಬಂಧುಗಳಲ್ಲಿ ಅಭಿಮಾನವನ್ನು ಪರಿತ್ಯಾಗ ಮಾಡು. ನೀನು ನಿನ್ನ ಧರ್ಮವನ್ನೇ ಅನುಷ್ಠಾನ ಮಾಡು."

ಈ ವಿಷಯದಲ್ಲಿ ಬೃಹದಾರಣ್ಯಕೋಪನಿಷತ್ತಿನಲ್ಲಿ ಯಾಜ್ಞವಲ್ಕ್ಯರು ಮೈತ್ರೇಯಿಗೆ ಉಪದೇಶ ಮಾಡಿದ ಇತಿಹಾಸವನ್ನು ಉಪದೇಶ ರೂಪವಾಗಿ ಹೇಳುತ್ತೇವೆ:

ಯಾಜ್ಞವಲ್ಕ್ಯರು ಮೈತ್ರೇಯಿ, ಕಾತ್ಯಾಯಿನಿ ಎಂಬ ಇಬ್ಬರು ಭಾರ್ಯೆಯರಿಂದ ಕೂಡಿದವರಾಗಿ ಬಹುಕಾಲ ಗೃಹಸ್ಥಾಶ್ರಮದಲ್ಲಿದ್ದು ಇನ್ನು ಕೇವಲ ತಪಸ್ಸು ಮಾಡಬೇಕೆಂಬ ಉದ್ದೇಶವುಳ್ಳವರಾಗಿ ಅರಣ್ಯಕ್ಕೆ ಹೋಗಲು ಉದ್ಯುಕ್ತರಾಗಿ ಮೈತ್ರೇಯಿಯನ್ನು ಕರೆದು, "ಎಲೋ ಮೈತ್ರೇಯಿಯೇ! ನಿನಗೂ ಕಾತ್ಯಾಯನಿಗೂ ನನ್ನಲ್ಲಿರುವ ದ್ರವ್ಯವನ್ನು ವಿಭಾಗ ಮಾಡಿ ಕೊಟ್ಟು ನಾನು ತಪಸ್ಸಿಗೆ ಹೋಗುತ್ತೇನೆ" ಎಂದನು. ಆವಾಗ ಮೈತ್ರೇಯಿಯು, "ಸ್ವಾಮಿ, ನೀವು ಈಗ ಕೊಡತಕ್ಕ ದ್ರವ್ಯದಿಂದ ನನಗೆ ಅಮೃತತ್ವ ಸಿಗಬಹುದೋ?" ಎಂದು ಪ್ರಶ್ನೆ ಮಾಡಿದಳು. ಆವಾಗ ಯಾಜ್ಞವಲ್ಕ್ಯರು "ದ್ರವ್ಯದಿಂದ ಅಮೃತತ್ವದ ಆಶೆಯೇ ಇಲ್ಲ" ಎಂದು ಹೇಳಿದರು. ಆವಾಗ ಮೈತ್ರೇಯಿಯು "ನನಗೆ ಯಾವುದರಿಂದ ಅಮೃತತ್ವವು ಪ್ರಾಪ್ತವಾದೀತೋ ಆ ಸಾಧನವನ್ನು ಉಪದೇಶಿಸಿರಿ. ಈ ದ್ರವ್ಯವು ನನಗೆ ಬೇಡ" ಎಂದಳು. ಅವಾಗ ಯಾಜ್ಞವಲ್ಕ್ಯರು ಬಹಳ ಸಂತುಷ್ಟರಾಗಿ ಅವಳನ್ನು ಸಮೀಪದಲ್ಲಿ ಕೂಡಿಸಿಟ್ಟುಕೊಂಡು, "ಎಲೋ! ಮೈತ್ರೇಯಿ" ಎಂದು ಸಂಬೋಧಿಸಿ ಉಪದೇಶ ಕೊಡುತ್ತಿದ್ದಾರೆ:

ಏನೆಂದರೆ, ಲೋಕದಲ್ಲಿ ಪತಿಗೆ ಈ ರೀತಿ ಇಚ್ಛೆ ಇರುವುದು. "ನನ್ನ ಹೆಂಡತಿಯು ನನ್ನಲ್ಲಿ ಪ್ರೇಮ ಮಾಡಲಿ" ಎಂದು. ಆದರೆ ಪರಮಾತ್ಮನ ಇಚ್ಛೆ ಆ ರೀತಿ ಇಲ್ಲದಿದ್ದರೆ ಪತ್ನಿಯು ಪತಿಯಲ್ಲಿ ಪ್ರೇಮ ಮಾಡಲಾರಳು. ಅದೇ ರೀತಿ, ಪತ್ನಿಗೆ ಪತಿಯು ನನ್ನಲ್ಲಿ ಪ್ರೇಮ ಮಾಡಲಿ ಎಂಬ ಇಚ್ಛೆಯು ಬರುವುದು. ಕೇವಲ ಅವಳಿಚ್ಛೆಯಿಂದ ಪತಿಯು ಪ್ರೇಮ ಮಾಡುವುದಿಲ್ಲ. ಪರಮಾತ್ಮನು ಹಾಗೆ ಇಚ್ಛಿಸಿದರೇನೆ ಪತ್ನಿಯ ಮೇಲೆ ಪತಿಯು ಪ್ರೇಮ ಮಾಡುವನು. ಆದುದರಿಂದ ಎಲ್ಲವೂ ಪರಮಾತ್ಮನ ಇಚ್ಛಾಧೀನವಾದುದ್ದು. ಅವನೇ ಸ್ವಾಮಿಯಾದವನು. ಆದುದರಿಂದ ಈ ವಸ್ತುಗಳಲ್ಲಿ ಅಭಿಮಾನ ತ್ಯಾಗ ಮಾಡಿ ಪರಮಾತ್ಮನನ್ನು ಗುರುಮುಖೇನ ಶ್ರವಣ ಮಾಡಿ, ಮನನ, ನಿದಿಧ್ಯಾಸನದಿಂದ ಆ ಪರಮಾತ್ಮನನ್ನು ಸಾಕ್ಷಾತ್ಕರಿಸಲು ಪ್ರಯತ್ನಿಸುವುದೇ ಮೋಕ್ಷಸಾಧನವಾದದ್ದು. ನಾವು ಯಾವ ವಸ್ತುವಿನ ಮೇಲೆ ವಿಶ್ವಾಸವನ್ನು ಇಟ್ಟಿದ್ದೇವೋ ಆ ಸಂಪದಾದಿ ವಸ್ತುಗಳು ಯಾವುದೂ ನಮಗೆ ತಾರಕವಲ್ಲ. ಆ ಪರಮಾತ್ಮನೊಬ್ಬನೇ

ಉದ್ಧಾರಮಾಡತಕ್ಕವನು ಎಂಬುದಾಗಿ ಉಪದೇಶ ಮಾಡಿದರೆಂದು ಉಪನಿಷತ್ತಿನಲ್ಲಿ ಕಥೆ ಇದೆ.

ಅದೇ ರೀತಿಯಾಗಿ ಶ್ರೀಕೃಷ್ಣನು ಈ ವಿಷಯದ ಅಭಿಮಾನವನ್ನು ತ್ಯಾಗ ಮಾಡಿ ಭಗವದಾರಾಧನ ರೂಪವಾದ ಸ್ವಧರ್ಮದಲ್ಲಿ ನಿರತನಾಗಬೇಕೆಂದು ಉಪದೇಶಿಸುತ್ತಿದ್ದಾನೆ. (ಎರಡನೆಯ ದಿನದ ಉಪನ್ಯಾಸವು ಮುಗಿಯಿತು.)

***

ಅರ್ಜುನನು ಶ್ರೀಕೃಷ್ಣನನ್ನು ಪ್ರಶ್ನೆ ಮಾಡುತ್ತಾನೆ: "ಎಲೋ ಶ್ರೀಕೃಷ್ಣನೇ, ಈ ಬಂಧುಗಳು ನಮ್ಮವರೆಂಬ ಅಭಿಮಾನದ ತ್ಯಾಗ ಮಾಡಿ ಬಂಧು ವಿರಹದ ದುಃಖವನ್ನು ಬಾರದಂತೆ ಮಾಡಿಕೊಳ್ಳಬೇಕೆಂದು ಉಪದೇಶ ಮಾಡಿರುವಿ. ಆದರೆ ದುಃಖ ಬಾರದೇ ಇರುವುದನ್ನು, ಇನ್ನೊಂದು ರೀತಿಯಿಂದ ಸಾಧಿಸಬಹುದು. ಯುದ್ಧವನ್ನೇ ಮಾಡದಿದ್ದರೆ ದುಃಖ ಬರುವಂತೆಯೇ ಇಲ್ಲ. ಕೆಸರಿಗೆ ಕೈ ಹಾಕಿ, ಕೈ ತೊಳೆಯುವದಕ್ಕಿಂತ ಕೆಸರಿಗೆ ಕೈ ಹಾಕದೇ ಇರುವುದೇ ಒಳ್ಳೇದು. ಅದೇ ರೀತಿ ಯುದ್ಧ ಮಾಡಿ ದುಃಖವು ಪ್ರಾಪ್ತವಾಗುವಾಗ ಅಭಿಮಾನ ತ್ಯಾಗದಿಂದ ದುಃಖ ಇಲ್ಲದೇ ಇರುವಂತೆ ಮಾಡಿಕೊಳ್ಳುವುದಕ್ಕಿಂತ ಯುದ್ಧವನ್ನು ಮಾಡದೇನೆ ನಿರ್ದುಃಖರಾಗಿರುವುದು ಒಳ್ಳೇದಷ್ಟೆ! ಎಂಬ ಈ ಶಂಕೆಯನ್ನು ಪರಿಹರಿಸು" ಎಂದು ಪ್ರಾರ್ಥಿಸಿದಾಗ, ಶ್ರೀಕೃಷ್ಣನು ಸಮಾಧಾನವನ್ನು ಹೇಳುತ್ತಾನೆ:

"ಈ ಮಾನವನು ಅಮೃತತ್ವವನ್ನು ಪಡೆಯಬೇಕಾದರೆ ಬ್ರಹ್ಮಜ್ಞಾನವನ್ನು ಸಂಪಾದಿಸಬೇಕು. ಸ್ತ್ರೀಯಾಗಲೀ, ಪುರುಷರಾಗಲೀ ಮೋಕ್ಷವನ್ನು ಬ್ರಹ್ಮಜ್ಞಾನದಿಂದ ಪಡೆಯಬೇಕಲ್ಲದೆ ಬೇರೆ ಸಾಧನವಿಲ್ಲ. ಬ್ರಹ್ಮಜ್ಞಾನಕ್ಕೆ ಸಾಧನವಾದದ್ದು ಅಂತಃಕರಣಶುದ್ಧಿ. ಅದಕ್ಕೆ ಸಾಧನವಾದದ್ದು ಸ್ವಧರ್ಮಾನುಷ್ಠಾನ. ಸ್ವಧರ್ಮಾನುಷ್ಠಾನ ಮಾಡುವಾಗ ವಿಷಯ ಸಂಬಂಧದಿಂದ ಚಿತ್ತವ್ಯತ್ಯಯ (ವ್ಯಥೆ) ವನ್ನು ಹೊಂದಬಾರದು. ವಿಷಯಸುಖವನ್ನು ಮೋಕ್ಷವಿರೋಧಿ ಎಂದು ತಿಳಿದು-ಕೊಂಡು ದುಃಖ ನನಗೆ ಹೇಗೆ ಬೇಡವೋ, ಹಾಗೆಯೇ ವಿಷಯಸುಖವು ನನಗೆ

ಬೇಡವೆಂದು ತಿಳಿದು, ವಿಷಯ ಪ್ರಾಪ್ತಿ, ಅದರ ವಿಯೋಗ, ಇವುಗಳಿಂದಾಗಿ ವ್ಯಥೆಯನ್ನು ಹೊಂದಿಕೊಳ್ಳದೆ ಸ್ವಧರ್ಮನಿಷ್ಠರಾಗಬೇಕು. ಅಂತಹವನಿಗೆ ಅಮೃತತ್ವವು ಪ್ರಾಪ್ತವಾಗುವುದು. ಕ್ಷತ್ರಿಯನಾದ ನಿನಗೆ ಅಂತಹ ಸ್ವಧರ್ಮವು ಯುದ್ಧವಾದುದರಿಂದ, ಅಮೃತತ್ವವು ಪ್ರಾಪ್ತಿಯಾಗಬೇಕಾದರೆ ಯುದ್ಧವನ್ನು ಮಾಡಲೇಬೇಕಾಗುವುದು'' ಎಂದು ಉಪದೇಶಿಸಿದನು.

ಈ ವಿಷಯದಲ್ಲಿ ಜನಕ ಮಹಾರಾಜನ ಕಥೆಯು ಉದಾಹರಣೆ-ಯಾಗುತ್ತದೆ. ಜನಕಮಹಾರಾಜನು ಶುಕ ಮಹರ್ಷಿಗಳಿಂದ ತತ್ತ್ವೋಪದೇಶವನ್ನು ಸ್ವೀಕರಿಸುತ್ತಾ ಬ್ರಹ್ಮನಿಷ್ಠನಾಗಿರುವ ಕಾಲಕ್ಕೆ ಮಿಥಿಲ ಪಟ್ಟಣವು ಸುಟ್ಟುಹೋಯಿತೆಂದು ಭೃತ್ಯರುಗಳು, ಮಂತ್ರಿಗಳು ಬಂದು ಹೇಳಿದಾಗ **''ಮಿಥಿಲಾಯಾಂ ಪ್ರದೀಪ್ತಾಯಾಂ ನ ಮೇ ದಹ್ಯತಿ ಕಿಂಚನ''** ''ಮಿಥಿಲಾ-ಪಟ್ಟಣ ಸುಟ್ಟುಹೋದರೆ ನನ್ನದೇನೂ ಸುಡಲಿಲ್ಲ. ಮಿಥಿಲಾಪಟ್ಟಣವು ನನ್ನದಲ್ಲ. ಎಲ್ಲವೂ ಸ್ವಾಮಿಯಾದ ಪರಮಾತ್ಮನದು. ಅವನ ಇಚ್ಛೆ ಇದ್ದಂತೆ ಆಗಿಯೇ ತೀರಬೇಕು'' ಎಂದು ಉತ್ತರಿಸಿದನು. ಯಾವ ತರಹದ ವ್ಯಥೆಯನ್ನು ಮಾಡಿ-ಕೊಳ್ಳದೇ ಸ್ವಕರ್ತವ್ಯದಲ್ಲೇ ಆಸಕ್ತನಾಗಿದ್ದನು. ಇದಕ್ಕೆ ಕಾರಣ ಅವನಿಗೆ ಯಾವ ವಸ್ತುಗಳಲ್ಲಿಯೂ ನನ್ನದೆಂಬ ಅಭಿಮಾನ ಇಲ್ಲದಿರುವುದು. ಇದರಂತೆ ಅಭಿಮಾನ ತ್ಯಾಗದಿಂದ ಮನೋವಿಕಾರ ಆಗದಂತೆ ಮಾಡಿಕೊಂಡು ಸ್ವಧರ್ಮನಿಷ್ಠನಾಗಿ ಬ್ರಹ್ಮಜ್ಞಾನಿಯಾಗಿ ಪುರುಷನು ಅಮೃತತ್ವವನ್ನು ಪಡೆಯ-ಬೇಕು. ಈ ಮಾರ್ಗ ಬಿಟ್ಟು ಬೇರೆ ಮಾರ್ಗವಿಲ್ಲ.

ಇಷ್ಟು ಉಪದೇಶವನ್ನು ಪಡೆದ ಮೇಲೆ ಅರ್ಜುನನು ಮತ್ತೆ ಪ್ರಶ್ನೆ ಮಾಡುತ್ತಾನೆ. ''ಎಲೋ ಶ್ರೀಕೃಷ್ಣನೇ! ಜೀವನು ಅನಾದಿನಿತ್ಯನೆಂದು ಈ ಹಿಂದೆ ಹೇಳಿದಿ. ಇದಕ್ಕೆ ದೃಷ್ಟಾಂತ ಯಾವುದು?'' ಶ್ರೀಕೃಷ್ಣನು ಈ ರೀತಿ ಉತ್ತರವನ್ನು ಕೊಡುತ್ತಾನೆ: ''ಜಗತ್ಸೃಷ್ಟಿಕರ್ತನಾದ ಪರಬ್ರಹ್ಮನು ಮತ್ತು ಜಗತ್ತಿಗೆ ಪರಿಣಾಮಕಾರಣವಾದ ಜಡಪ್ರಕೃತಿ – ಈ ಎರಡೂ ಕೂಡ ಎಂದಿಗೂ ಇಲ್ಲದಂತೆ ಆಗಿಲ್ಲ, ಆಗುವುದಿಲ್ಲ. ಇವುಗಳು ಅನಾದಿನಿತ್ಯಗಳು. ಈ ಎರಡು ವಸ್ತುಗಳಂತೆ

ಜೀವನನ್ನು ಅನಾದಿನಿತ್ಯನೆಂದು ತಿಳಿದುಕೊ. ಪರಬ್ರಹ್ಮನು ಪ್ರಕೃತಿಯು ಅನಾದಿ ನಿತ್ಯಗಳೆಂಬ ಉಪದೇಶವು ತತ್ವ ಸಾಕ್ಷಾತ್ಕಾರಿಗಳಿಂದ ಬಂದಿದೆ. ಅವರು ತತ್ವ ಸಾಕ್ಷಾತ್ಕಾರಿಗಳಾದ್ದರಿಂದ ಈ ವಿಷಯವನ್ನು ನಿರ್ಣಯಿಸಿದ್ದಾರೆ. ಅವರ ಉಪದೇಶ–ಪರಂಪರೆಯಿಂದ ನಾವು ತಿಳಿದುಕೊಳ್ಳಬೇಕು."

ಶ್ರೀಕೃಷ್ಣನು "ನಾಸತೋ ವಿದ್ಯತೇ ಭಾವಃ" ಎಂಬ ಶ್ಲೋಕದಿಂದ ಉಪದೇಶ ಮಾಡುತ್ತಿರುವಾಗ ಎರಡು ಅರ್ಥವುಳ್ಳ ಶಬ್ದವನ್ನು ಪ್ರಯೋಗ ಮಾಡಿದ್ದಾನೆ. ಒಂದರ್ಥವನ್ನು ಇಷ್ಟು ತನಕ ಹೇಳಿದ್ದಾಯಿತು. ಇನ್ನೊಂದರ್ಥದಿಂದ ಅರ್ಜುನನ ಯುದ್ಧದಿಂದ ಪಾಪವು ಪ್ರಾಪ್ತವಾಗುವುದೆಂಬ ಶಂಕೆಯನ್ನು ಪರಿಹರಿಸುತ್ತಾನೆ. ಹೇಗೆಂದರೆ, ಶಾಸ್ತ್ರನಿಷಿದ್ಧಕರ್ಮದಿಂದ ಅಂದರೆ ಅಸತ್ಕರ್ಮದಿಂದ ಹೇಗೆ ಸುಖವಿಲ್ಲವೋ, ಹಾಗೆ ಶಾಸ್ತ್ರವಿಹಿತ–ಸತ್ಕರ್ಮಾನುಷ್ಠಾನದಿಂದ ಪಾಪವಾಗಲೀ ದುಃಖವಾಗಲೀ ಎಷ್ಟು ಮಾತ್ರಕ್ಕೂ ಬರುವುದಿಲ್ಲ. ಇದನ್ನು ತತ್ವಜ್ಞಾನಿಗಳು ನಿರ್ಣಯಿಸಿ ನಮಗೆ ಉಪದೇಶ ಪರಂಪರೆಯಿಂದ ತಿಳಿಸುತ್ತಾರೆ. ಪ್ರಕೃತದಲ್ಲಿ ದುಷ್ಟ ನಿಗ್ರಹ ರೂಪವಾದ ಯುದ್ಧವು ಕ್ಷತ್ರಿಯನಿಗೆ ಶಾಸ್ತ್ರವಿಹಿತಸತ್ಕರ್ಮವಾಗಿದೆ. ಇದರಿಂದ ಪಾಪವು, ದುಃಖವು ಸಂಭವಿಸುವುದು ಎಂದು ಹೇಳುವುದು ಯುಕ್ತವಲ್ಲ.

ಈ ವಿಷಯದಲ್ಲಿ ಕೆಲವು ಜನರು ಪ್ರಶ್ನೆ ಮಾಡಬಹುದು. ಲೋಕದಲ್ಲಿ ಧಾರ್ಮಿಕರಾದವರು ದುಃಖವನ್ನು ಅನುಭವಿಸುವುದು, ಅಧಾರ್ಮಿಕರು ಸುಖವಾಗಿರುವುದು ಪ್ರಾಯಶಃ ಕಂಡಿದೆ. ಧರ್ಮಮೂರ್ತಿಯಾದ ಧರ್ಮರಾಜನೇ ಅರಣ್ಯವಾಸದಿಂದ ಬಹು ದುಃಖವನ್ನು ಅನುಭವಿಸಿದನು. ಅಧಾರ್ಮಿಕನಾದ ದುರ್ಯೋಧನನು ಮಹಾ ರಾಜ್ಯವನ್ನು ಭೋಗಿಸಿದನು. ಇದರಂತೆ ಲೋಕದಲ್ಲಿ ಬಹಳ ಉದಾಹರಣೆಗಳು ಕಂಡಿವೆ. ಆದ್ದರಿಂದ ಕೃಷ್ಣ ಪರಮಾತ್ಮನ ಉಪದೇಶವು ಹೇಗೆ ಕೂಡುತ್ತದೆ? ಈ ಪ್ರಶ್ನೆಗೆ ಹೀಗೆ ಸಮಾಧಾನವನ್ನು ತಿಳಿದುಕೊಳ್ಳಬೇಕು:

ಒಂದು ದೃಷ್ಟಿಯಿಂದ ವಿಚಾರ ಮಾಡಿದರೆ ತ್ರಿಕರಣ ಶುದ್ಧಿಯಿಂದ ಕಾಯೇನ ವಾಚಾ ಮನಸಾ ಧರ್ಮನಿಷ್ಠರಾಗಿರತಕ್ಕವರು ಬಹು ದುರ್ಲಭರು. ಹೊರಗಿನ ದೃಷ್ಟಿಯಿಂದ ನೋಡಿದಾಗ, ಧಾರ್ಮಿಕರಂತೆ ಕಾಣುತ್ತಿದ್ದರೂ ಬಹು

ಜನರಿಗೆ ಮನಃಶುದ್ಧಿಯಿಲ್ಲದೆ ಇರುವುದೇ ಹೆಚ್ಚಾಗಿ ಕಂಡಿದೆ. ಆದುದರಿಂದ ಧರ್ಮಾನುಷ್ಠಾನುವು ಯೋಗ್ಯ ಫಲವನ್ನು ಕೊಡದೇ ಇರಬಹುದು. ಇನ್ನೊಂದು ದೃಷ್ಟಿಯಿಂದ ವಿಚಾರ ಮಾಡಿದರೆ ಸ್ವಾಭಾವಿಕ ಧಾರ್ಮಿಕರೆಂದು ನಾವು ತಿಳಿಯು-ವುದಾದರೂ ಆ ಜನರು ಕಷ್ಟ ಅನುಭವಿಸಲು ಬೇರೆ ಕಾರಣವಿದೆ. ಜನ್ಮಾಂತರದ ಪ್ರಾರಬ್ಧ ಕರ್ಮದ ಫಲ ರೂಪವಾಗಿ "ಅವಶ್ಯಮನುಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ" ಎಂದು ಹೇಳಿದಂತೆ ಪ್ರಾರಬ್ಧ ಕರ್ಮದ ಫಲವನ್ನು ಅನು-ಭೋಗಿಸಿಯೇ ತೀರಬೇಕೆಂದು ನಿರ್ಣಯ ಮಾಡಿದ್ದರಿಂದ ಈ ಧಾರ್ಮಿಕರಿಗೆ ಪ್ರಾರಬ್ಧ ಕರ್ಮ ಪ್ರಯುಕ್ತವಾಗಿ ದುಃಖವನ್ನನುಭೋಗಿಸುವ ಯೋಗವು ಇರ-ಬಹುದು. ಈಗ ಮಾಡಿದ ಧರ್ಮದ ಫಲವು ಜನ್ಮಾಂತರದಲ್ಲಿ ಕಾಲಾಂತರದಲ್ಲಿ ಅನುಭವಿಸುವರು.

ಇನ್ನೊಂದು ಸಮಾಧಾನ ಹೀಗಿದೆ: ಧಾರ್ಮಿಕರಿಗೆ ಸಂಸಾರದಲ್ಲಿ ವೈರಾಗ್ಯವು ಹುಟ್ಟಿ ಸಂಸಾರವನ್ನು ಬಿಟ್ಟು ಮನಃಶುದ್ಧಿಯನ್ನು ಹೊಂದಿ ಪರಬ್ರಹ್ಮ-ನಿಷ್ಠರಾಗಬೇಕೆಂಬ ಉದ್ದೇಶದಿಂದ ಪರಮಾತ್ಮನು ದುಃಖವನ್ನು ಕೊಡುತ್ತಾನೆ. ತಾಯಿಯು ಮಕ್ಕಳಿಗೆ ಕಹಿಯಾದ ಔಷಧಿಯನ್ನು ಅವರ ಆರೋಗ್ಯಕ್ಕೋಸ್ಕರ ಕೊಡುವಂತೆ ಪರಮಾತ್ಮನು ಅವರಿಗೆ ದುಃಖವನ್ನು ಕೊಡುವುದು ಯುಕ್ತವೇ ಆಗುವುದು. ಧರ್ಮಮೂರ್ತಿಯಾದ ಧರ್ಮರಾಜನಿಗೆ ವನವಾಸ ದುಃಖ ಬರಲು ಇನ್ನೊಂದು ಕಾರಣವನ್ನು ಹೇಳಿದ್ದಾರೆ. ರಾಜಸೂಯಯಾಗದಿಂದ ತನ್ನ ಯೋಗ್ಯತೆಯನ್ನು ಮೀರಿ ಪುಣ್ಯವನ್ನು ಗಳಿಸಿದ್ದನು. ಆ ಪುಣ್ಯವನ್ನು ಭೀಮಸೇನಾ-ದಿಗಳಿಗೆ ಯಥಾಯೋಗ್ಯವಾಗಿ ಹಂಚುವುದಕ್ಕೋಸ್ಕರ ಪರಮಾತ್ಮನು ಧರ್ಮರಾಜ-ನಿಂದ ದ್ಯೂತ ಕ್ರೀಡೆಯನ್ನು ಮಾಡಿಸಿ ಆ ಕ್ರೀಡೆಯಲ್ಲಿ ಭೀಮಾದಿಗಳನ್ನು ಪಣಕ್ಕಿಟ್ಟು, ಹಾಗೆ ಅದರಿಂದ ಅವರಿಗೆ ವನವಾಸಾದಿಗಳು ಯುಧಿಷ್ಠಿರನಿಂದ ಆಗುವಂತೆ ಮಾಡಿದನು.

ಇನ್ನು ಅಧಾರ್ಮಿಕರು ಸುಖವನ್ನು ಅನುಭವಿಸಲು ಕಾರಣ ಅವರು ಹಿಂದಿನ ಜನ್ಮದಲ್ಲಿ ಮಾಡಿದ ಸುಕೃತವು ಈಗ ಫಲವನ್ನು ಕೊಡಲು ಆರಂಭಿಸಿದ್ದೇ ಆಗಿದೆ. ಈಗ ಮಾಡಿದ ಅಧರ್ಮದ ಫಲದಿಂದ ಬರುವ ಜನುಮದಲ್ಲಿ ದುಃಖ

ಅನುಭವಿಸಲಿಕ್ಕೆ ಇರುವರು. ಅಥವಾ ಅವರಿಗೆ ಅಧರ್ಮದಲ್ಲಿ ಅಭಿರುಚಿ ಉಂಟಾಗಲಿಕ್ಕೆ, ಮತ್ತಷ್ಟೂ ಪಾಪಕೆಲಸ ಮಾಡಲಿಕ್ಕೆ, ಅವರಿಗೆ ಯೋಗ್ಯತಾನುಸಾರ ಗತಿ ಆಗಲಿಕ್ಕೆ ಅವರಿಗೆ ಪರಮಾತ್ಮನು ಸುಖವನ್ನು ಕೊಡುವನು. ಕೊನೆಗೆ ಅವರು ಮಹಾ ದುಃಖವನ್ನು ಅನುಭವಿಸಲಿಕ್ಕೆ ಇರುವರು. ಅಪಥ್ಯಮಾಡುವ ರೋಗಿಗೆ ತಾತ್ಕಾಲಿಕ ಸುಖಾನುಭವವಾದರೂ ಕೊನೆಗೆ ಮರಣ ದುಃಖ ಹೊಂದುವ ಸಂಬಂಧವಿದ್ದಂತೆ, ಅಧಾರ್ಮಿಕರು ಅಧೋಗತಿಗೆ ಹೋಗಲಿಕ್ಕೆ ಇರುವರು. ಇದು ಶಾಸ್ತ್ರಸಿದ್ಧ ಸಮಾಧಾನ. ಆದುದರಿಂದ ಶ್ರೀಕೃಷ್ಣನ ಉಪದೇಶದಲ್ಲಿ ಯಾವ ಆಕ್ಷೇಪಕ್ಕೂ ಅವಕಾಶವಿಲ್ಲ.

ಅರ್ಜುನನು "ಈ ಜೀವನು ಅನಾದಿನಿತ್ಯನೆಂಬುದಕ್ಕೆ ಬೇರೆ ದೃಷ್ಟಾಂತ-ಗಳನ್ನು ನಮಗೆ ತಿಳಿಸಬೇಕು. ಹಿಂದೆ ಹೇಳಿದ ಪರಬ್ರಹ್ಮ, ಪ್ರಕೃತಿಗಳ ದೃಷ್ಟಾಂತವು ಎಲ್ಲರಿಗೆ ತಿಳಿಯದ ದೃಷ್ಟಾಂತವಾಯಿತು. ಲೋಕಸಿದ್ಧ ದೃಷ್ಟಾಂತವನ್ನು ತಿಳಿಯಲು ಅಪೇಕ್ಷಿಸುತ್ತೇನೆ" ಎಂದು ಪ್ರಾರ್ಥನೆ ಮಾಡಿದ್ದಕ್ಕೆ, ಶ್ರೀ ಕೃಷ್ಣಪರಮಾತ್ಮನು ಈ ರೀತಿಯಾಗಿ ಉಪದೇಶ ಮಾಡುತ್ತನೆ: "ಅವ್ಯಾಕೃತಾಕಾಶವು, ಅಕಾರಾದಿ ೫೦ ವರ್ಣಗಳು ಸರ್ವತ್ರ ವ್ಯಾಪಿಸಿಕೊಂಡಿವೆ. ಅವುಗಳು ಅನಾದಿ ನಿತ್ಯಗಳು. ಅವು-ಗಳಂತೆ ಜೀವನು ಅನಾದಿ ನಿತ್ಯನಾಗಿದ್ದಾನೆ".

"ಎಲೋ ಶ್ರೀಕೃಷ್ಣನೇ! ವೇದದಲ್ಲಿ ಜೀವನು ಪರಮಾತ್ಮನ ಪ್ರತಿಬಿಂಬನೆಂದು "ರೂಪಂ ರೂಪಂ ಪ್ರತಿರೂಪೋ ಬಭೂವ" ಎಂದು ಹೇಳಿದೆ. ಪ್ರತಿಬಿಂಬಕ್ಕೆ ಉಪಾಧಿಯು ಆವಶ್ಯಕ. ಕನ್ನಡಿ ಎಂಬ ಉಪಾಧಿ ಇಲ್ಲದೆ ಮುಖಕ್ಕೆ ಪ್ರತಿಬಿಂಬ ಇರಲಾರದು. ಪ್ರಕೃತದಲ್ಲಿ ಜೀವನೆಂಬ ಪ್ರತಿಬಿಂಬಕ್ಕೆ ಈ ದೇಹವೇ ಉಪಾಧಿಯಾಗಬೇಕು. ಕನ್ನಡಿಯೆಂಬ ಉಪಾಧಿಯು ನಾಶವಾದಾಗ ಮುಖದ ಪ್ರತಿಬಿಂಬವು ನಾಶವಾಗುವಂತೆ ದೇಹವೆಂಬ ಉಪಾಧಿಯು ನಾಶವಾದಾಗ ಪರಮಾತ್ಮನ ಪ್ರತಿಬಿಂಬನಾದ ಜೀವನು ನಾಶ ಹೊಂದಲೇಬೇಕಾಗುವುದು. ಹಾಗೆಯೇ ಬಿಂಬಕ್ಕೂ ಉಪಾಧಿಗೂ ಸನ್ನಿಧಿ ನಾಶವಾದಾಗ ಪ್ರತಿಬಿಂಬವು ನಾಶವಾಗುತ್ತದೆ. ಹೇಗೆಂದರೆ ಕನ್ನಡಿಯ ಎದುರಿನಲ್ಲಿ ಮುಖವು ಇಲ್ಲದಿದ್ದರೆ

ಕನ್ನಡಿಯ ಪ್ರತಿಬಿಂಬವು ನಾಶವಾಗುವುದು. ಹಾಗೆ ಬಿಂಬನಾದ ಪರಮಾತ್ಮನು ಜೀವನನ್ನು ಬಿಟ್ಟುಹೋದಾಗ ಬಿಂಬ ಮತ್ತು ಉಪಾಧಿಗಳ ಸನ್ನಿಧಿ ನಾಶದಿಂದ ಜೀವ ನಾಶವಾಗಬೇಕಾಗುತ್ತದೆ. ಆದುದರಿಂದ ಜೀವ ಅನಾದಿನಿತ್ಯನೆಂದು ಹೇಳಿದ್ದು ಹೇಗೆ ಕೂಡುತ್ತದೆ?" ಎಂದು ಅರ್ಜುನನು ಕೇಳಿದ್ದಕ್ಕೆ ಶ್ರೀಕೃಷ್ಣನು ಈ ರೀತಿ ಉಪದೇಶ ಮಾಡುತ್ತಾನೆ:

"ಜೀವನಿಗೆ ಈ ದೇಹವಲ್ಲದೆ ಒಳಗೆ ಸ್ವಾಭಾವಿಕವಾದ ಜೀವಸ್ವರೂಪಭೂತವಾದ ಜ್ಞಾನಾನಂದಮಯವಾದ ಮೋಕ್ಷ ಸುಖವನ್ನು ಅನುಭವಿಸಲಿಕ್ಕೆ ಕಾರಣವಾದ ದಿವ್ಯ ದೇಹವು ಅನಾದಿ ನಿತ್ಯವಾದದ್ದು ಇದೆ. ಅದೇ ಜೀವನ ಉಪಾಧಿ. ಆ ಉಪಾಧಿಗೆ ಎಂದಿಗೂ ಸೃಷ್ಟಿ, ನಾಶಗಳಿಲ್ಲ. ಆದುದರಿಂದ ಉಪಾಧಿಯಲ್ಲದ ಈ ಹೊರಗಿನ ದೇಹಕ್ಕೆ ನಾಶವಾದರೂ ಜೀವನಿಗೆ ನಾಶವಾಗುವ ಸಂಭವವಿಲ್ಲ. ಮತ್ತು ಸರ್ವಗತನಾದ ಪರಮಾತ್ಮನು ಸದಾ ಜೀವಾಂತರ್ಯಾಮಿ-ಯಾಗಿ ಜೀವನನ್ನು ರಕ್ಷಿಸಿಕೊಂಡು ಇರುವುದರಿಂದ ಬಿಂಬೋಪಾಧಿಸನ್ನಿಧಿ ನಾಶವೂ ಇಲ್ಲ. ಆದುದರಿಂದ ನೀನು ಹೇಳಿದ ಯಾವ ನಿಮಿತ್ತದಿಂದಲೂ ಜೀವನಿಗೆ ನಾಶವಿಲ್ಲದ ಕಾರಣ ಯುದ್ಧದಿಂದ ಈ ಬಂಧುಗಳ ಆತ್ಮಕ್ಕೆ ನಾಶವಾಗುತ್ತದೆಂಬ ದುಃಖವನ್ನು ನೀನು ಹೊಂದದೆ ನಿನ್ನ ಕರ್ತವ್ಯವಾದ ಯುದ್ಧವನ್ನು ಅವಶ್ಯವಾಗಿ ಮಾಡು" (ಮೂರನೆಯ ದಿನದ ಉಪನ್ಯಾಸ ಮುಗಿಯಿತು.)

***

ನಿನ್ನೆಯ ದಿವಸ ಉಪನ್ಯಾಸದಲ್ಲಿ ಹೇಳಿದ ಪ್ರಕಾರ ಜೀವನು ಪರಮಾತ್ಮನ ಪ್ರತಿಬಿಂಬನೆಂದು ಹೇಳಿ ಶ್ರೀಕೃಷ್ಣ ಪರಮಾತ್ಮನು ಅರ್ಜುನನ ಪ್ರಶ್ನೆಗೆ ಸಮಾಧಾನವನ್ನು ಹೇಳಿದ್ದಾನೆ.

ಈ ವಿಷಯದಲ್ಲಿ ಕೆಲವರಿಗೆ ಪ್ರಶ್ನೆ ಬರಬಹುದು. ಲೋಕದಲ್ಲಿ ಪ್ರತಿಬಿಂಬ ಎಂಬುವುದು ವಸ್ತುವೇ ಅಲ್ಲವೆಂದು ಸಿದ್ಧವಾಗಿದೆ. ತೇಜೋಮಯವಾದ ಚಕ್ಷುರಿಂದ್ರಿಯದ ರಶ್ಮಿಯು ಕನ್ನಡಿಗೆ ತಗಲಿ ವಾಪಾಸು ಗೋಡೆಗೆ ಬಿಸಾಡಿದ

ಚೆಂಡಿನಂತೆ ಬಂದು ಈ ಮುಖವನ್ನೇ ತಿಳಿಸುತ್ತದೆ. ಕನ್ನಡಿಯಲ್ಲಿ ಮುಖವೆಂದು ಅಜ್ಞಾನದಿಂದ ಭ್ರಾಂತಿಯು ಉಂಟಾಗುತ್ತದೆ. ಕನ್ನಡಿಯಲ್ಲಿ ಮುಖವೂ ಇಲ್ಲ, ಪ್ರತಿಮುಖವೂ ಇಲ್ಲ. ಪ್ರತಿಬಿಂಬವೆನ್ನುವುದು ವಸ್ತುವೇ ಅಲ್ಲ. ಅದರಂತೆ ಜೀವನು ಪ್ರತಿಬಿಂಬನೆಂದು ಒಪ್ಪಿದರೆ ಬ್ರಹ್ಮ ಒಂದೇ ಇರುವುದು, ಹೊರತು ಜೀವನೆಂಬ ಬೇರೆ ವಸ್ತು ಇಲ್ಲವೆಂದು ಅರ್ಥವಾಗುತ್ತದೆಂದು ಶಂಕೆ ಉಂಟಾದರೆ ಅದಕ್ಕೆ ನಮ್ಮ ಆಚಾರ್ಯರು ಸಮಾಧಾನವನ್ನು ತಿಳಿಸಿದ್ದಾರೆ:

ಏನೆಂದರೆ, ಜೀವನು ಪ್ರತಿಬಿಂಬನು ಎಂದು ಶಾಸ್ತ್ರದಲ್ಲಿ ಹೇಳಿದ ಮಾತಿಗೆ ಕನ್ನಡಿಯಲ್ಲಿ ತೋರತಕ್ಕ ಪ್ರತಿಬಿಂಬವು ಬಿಂಬದ ಅಧೀನವಾಗಿ ಹಾಗೂ ಬಿಂಬದ ಸದೃಶವಾಗಿ ತೋರುವಂತೆ ಜೀವನು ಪರಮಾತ್ಮನ ಅಧೀನನು, ಹಾಗೂ ಪರಮಾತ್ಮನ ಸದೃಶನು ಎಂದು ಅಭಿಪ್ರಾಯವೇ ಹೊರತು ಕನ್ನಡಿಯ ಪ್ರತಿಬಿಂಬನಂತೆ ಪ್ರತಿಬಿಂಬನೇ ಆಗಿದ್ದಾನೆಂಬ ಅರ್ಥವಲ್ಲ. ದೇವದತ್ತನು ಸಿಂಹನೆಂದರೆ, ಸಿಂಹಸದೃಶನೆಂದರ್ಥ. ಸಿಂಹವೇ ಎಂದು ಅರ್ಥ ಮಾಡುವುದಿಲ್ಲ. ಹಾಗೆ ಜೀವನು ಪ್ರತಿಬಿಂಬನೆಂಬ ಶಬ್ದಕ್ಕೆ ಬಿಂಬಸದೃಶನೆಂದು ಅರ್ಥ. ಜೀವನು ಪರಮಾತ್ಮನ ಸದೃಶನೆಂದರೆ ಸಂಪೂರ್ಣ ಸಾಮ್ಯವೆಂದು ಅರ್ಥವಲ್ಲ. ಸ್ವಲ್ಪ ಸಾದೃಶ್ಯ ಎಂದರ್ಥ. ಪರಮಾತ್ಮನು ಜ್ಞಾನಮಯನು. ಜೀವನೂ ಜ್ಞಾನಮಯನು. ಜೀವನಿಗೆ ತನ್ನ ಸ್ವರೂಪದಲ್ಲಿ ಸ್ವಾಭಾವಿಕವಾದ ಆಕೃತಿ ಉಂಟು. ಅದು ಒಂದೊಂದು ಜೀವನಲ್ಲಿ ಮನುಷ್ಯ, ಪಶು, ಪಕ್ಷಿ ಮೊದಲಾಗಿ ಬೇರೆ ಬೇರೆ ಅಕಾರವಿರಬಹುದು. ಕರ್ಮಾಧೀನವಾಗಿ ಬೇರೆ ಬೇರೆ ಆಕಾರ, ದೇಹ ಬರಬಹುದು. ಆದರೆ ಸ್ವಾಭಾವಿಕ ಆಕೃತಿಯು ಎಂದಿಗೂ ವ್ಯತ್ಯಾಸವಾಗುವದಿಲ್ಲ. ಜೀವನ ಸ್ವಾಭಾವಿಕ ಆಕೃತಿಗೆ ಸಮಾನ ಆಕೃತಿ ಉಳ್ಳ ಪರಮಾತ್ಮನ ರೂಪವೇ ಜೀವನಿಗೆ ಬಿಂಬರೂಪ. ಬಿಂಬ, ಪ್ರತಿಬಿಂಬ ಶಬ್ದದಿಂದ ಇಷ್ಟೇ ಅರ್ಥ ಇಟ್ಟು-ಕೊಳ್ಳಬೇಕೇ ಹೊರತಾಗಿ ಬಿಂಬ ಪ್ರತಿಬಿಂಬಗಳ ಸಂಪೂರ್ಣ ಸಾಮ್ಯವನ್ನು ಇಟ್ಟುಕೊಳ್ಳಬಾರದು.

ಅರ್ಜುನನು ಪ್ರಶ್ನೆ ಮಾಡುತ್ತಾನೆ: "ಜೀವನು ಮತ್ತು ಪರಮಾತ್ಮನು ನಿತ್ಯರೆಂದು ಹೇಳಿದರೆ ಜೀವನ ದೆಶೆಯಿಂದ ಪರಮಾತ್ಮನಲ್ಲಿ ವಿಶೇಷವೇನುಂಟು?

ಮಹಾ ವಿಶೇಷವುಳ್ಳ ಪರಮಾತ್ಮನ ಪೂಜೆ ಮಾಡಬೇಕೆಂದು ನೀನು ಹೇಳುತ್ತೀಯೆ. ಆ ಪರಮಾತ್ಮನಲ್ಲಿ ವಿಶೇಷ ಇಲ್ಲದಂತಾಯಿತು. ಅಂತಹ ವಿಶೇಷ ಹೇಳಬೇಕೆಂದರೆ ಜೀವನ ಸೃಷ್ಟಿ ನಾಶಮಾಡತಕ್ಕವನು ಈಶ್ವರನೆಂದು ಹೇಳಬೇಕಲ್ಲವೆ?''

ಶ್ರೀಕೃಷ್ಣ ಪರಮಾತ್ಮನು ಸಮಾಧಾನವನ್ನು ಹೇಳುತ್ತಾನೆ (ಇದು "ಅವಿನಾಶಿ ತು ತದ್ವಿದ್ಧಿ'' ಎಂಬ ಶ್ಲೋಕದ ಎರಡನೇ ಅರ್ಥವು):

"ಪರಮಾತ್ಮನಲ್ಲಿ ಜೀವನ ದೆಸೆಯಿಂದ ಬಹಳ ವಿಶೇಷಗಳಿದ್ದಾವೆ. ಪರಮಾತ್ಮನು ಎಲ್ಲ ದೇಶಗಳಲ್ಲಿ ವ್ಯಾಪ್ತನಾಗಿದ್ದಾನೆ. ಎಲ್ಲ ಗುಣಗಳಿಂದ ಪೂರ್ಣನಾಗಿದ್ದಾನೆ. ಅವನಿಗೆ ದುಃಖಪ್ರಸಕ್ತಿಯೇ ಇಲ್ಲ. ಅವನ ದೇಹಕ್ಕೆ ನಾಶವಿಲ್ಲ – ಇತ್ಯಾದಿ ಬಹು ವಿಶೇಷಗಳು ಪರಮಾತ್ಮನಲ್ಲಿವೆ. ಜೀವನು ದುಃಖಿಯು, ದೇಹ ನಾಶವುಳ್ಳವನು, ಅಪೂರ್ಣನು, ಸ್ವತಂತ್ರನಾದ ಈಶ್ವರನ ಅನುಗ್ರಹದಿಂದಲೇ ಮೋಕ್ಷವನ್ನು ಪಡೆಯಲಿಕ್ಕೆ ಯೋಗ್ಯನು. ಆದುದರಿಂದ ಎಲೋ ಅರ್ಜುನ! ಆ ಈಶ್ವರ ಆರಾಧನಾ ರೂಪವಾದ ಯುದ್ಧವನ್ನು ಮಾಡು".

ಅರ್ಜುನನು ಪುನಃ ಪ್ರಶ್ನೆ ಮಾಡುತ್ತಾನೆ: "ಲೋಕದಲ್ಲಿ ಇವನನ್ನು ಸಂಹಾರ ಮಾಡಿದನು, ಇವನು ಇವನಿಂದ ಸಂಹರಿಸಲ್ಪಟ್ಟನೆಂದು ವ್ಯವಹಾರವಿದೆ. ಆ ವ್ಯವಹಾರಕ್ಕೆ ಕಾರಣವಾದ ತಿಳುವಳಿಕೆಯು ಇದೆ. ಇದರಿಂದ ಕೊಲ್ಲುವುದೇ ಮೊದಲಾದ ಕಾರ್ಯದಲ್ಲಿ ಜೀವನು ಸ್ವತಂತ್ರನೆಂದೂ, ಒಂದು ಜೀವನಿಂದ ಮತ್ತೊಂದು ಜೀವವು ಸಂಹರಿಸಲ್ಪಡುವ ಪ್ರಯುಕ್ತ ಅನಿತ್ಯವೆಂದೂ ಸಿದ್ಧವಾಗುವುದು. ಹೀಗಿರುವಾಗ, ಜೀವನು ಸ್ವತಂತ್ರನಲ್ಲ, ಅನಿತ್ಯವಲ್ಲನೆಂದು ಹೇಗೆ ಹೇಳಿದಿ?'' ಇದಕ್ಕೆ ಶ್ರೀಕೃಷ್ಣಪರಮಾತ್ಮನು ಅರ್ಜುನನ್ನು ಕುರಿತು ಈ ರೀತಿ ಉತ್ತರ ಕೊಡುತ್ತಾನೆ:

"ಎಲೋ ಅರ್ಜುನಾ! ನಿತ್ಯನಾದ ಈಶ್ವರನಿಗೆ ಜೀವನು ಪ್ರತಿಬಿಂಬನೆಂದ ಮೇಲೆ ಜೀವನು ನಿತ್ಯನೇ ಆಗಬೇಕಾಗುವುದು. ಪ್ರತಿಬಿಂಬವು ಬಿಂಬನ ಅಧೀನವಾದುದರಿಂದ ಜೀವನು ಪರಮಾತ್ಮನ ಅಧೀನನೆ ಆಗಬೇಕಾಗುವುದು.

ಆದುದರಿಂದ ಲೋಕದ ತಿಳುವಳಿಕೆಯನ್ನು ಭ್ರಾಂತಿಯೆಂದೇ ನಿಶ್ಚಯ ಮಾಡಬೇಕು.''

ಈ ವಿಷಯದಲ್ಲಿ ಕಾಠಕೋಪನಿಷತ್ತಿನ ಮಂತ್ರವನ್ನು ಉದಾಹರಿಸುತ್ತಾರೆ. ಮಂತ್ರವಾದರೂ ಇದೇ ವಿಷಯವನ್ನೇ ಹೇಳುತ್ತದೆ. ಏನೆಂದರೆ, ಜೀವನು ಸ್ವರೂಪತಃ ಹುಟ್ಟುವುದಿಲ್ಲ ನಾಶವನ್ನು ಹೊಂದುವುದಿಲ್ಲ. ''ಪರಮಾತ್ಮನು ತಿಳಿದುಕೊಂಡನು'' ಎಂದು ವೇದದಲ್ಲಿ ನಿತ್ಯವಾದ ಪರಮಾತ್ಮನ ಜ್ಞಾನಕ್ಕೆ ಪರಮಾತ್ಮನ ಅಚಿಂತ್ಯಶಕ್ತಿಯಿಂದ ಮತ್ತೆ ಅಭಿವ್ಯಕ್ತಿಯನ್ನು ಹೇಳಿದ್ದುಂಟು. ಹಾಗೆ ಜೀವನಿಗೆ ಸೃಷ್ಟಿ ಮತ್ತು ನಾಶ ವ್ಯವಹಾರವು ಜೀವನ ಅಭಿವ್ಯಕ್ತಿಯ ದೃಷ್ಟಿಯಿಂದ ಇಟ್ಟುಕೊಳ್ಳಬಾರದು. ದೇಹ ಸಂಬಂಧ, ದೇಹ ವಿಯೋಗ ಈ ನಿಮಿತ್ತದಿಂದಲೇ ಜೀವನಿಗೆ ಸೃಷ್ಟಿ ಮತ್ತು ನಾಶದ ವ್ಯವಹಾರವನ್ನು ಕೂಡಿಸಬೇಕು. ಈಶ್ವರನ ರಾಮ, ಕೃಷ್ಣಾದಿ ಅವತಾರಗಳಲ್ಲೂ ದೇಹಯೋಗ, ವಿಯೋಗಗಳು ಇಲ್ಲದ ಕಾರಣ ಜನನ ಮರಣಾದಿ ಶಬ್ದಗಳಿಗೆ ಅಭಿವ್ಯಕ್ತಿ, ಅನಭಿವ್ಯಕ್ತಿಯೆಂದೇ ಅರ್ಥ ಮಾಡಬೇಕು. ಈ ಜೀವನು ಯಾವಾಗಲೂ ಅಸ್ವತಂತ್ರನಾಗಿಯೇ ಇರತಕ್ಕವನು. ಈ ದೇಹವನ್ನು ಬಿಡಬಾರದೆಂದು ಅಪೇಕ್ಷೆಯಿದ್ದರೂ, ಈ ಜೀವನು ಈ ದೇಹವನ್ನು ಬಿಟ್ಟು, ಇನ್ನೊಂದು ದೇಹಕ್ಕೆ ಹೋಗುವವನಾದ್ದರಿಂದ ಈ ಜೀವನು ಅಸ್ವತಂತ್ರ-ನೆಂದು ತಿಳಿಯುತ್ತದೆ. ದೇಹ ನಾಶವಾದರೂ ಜೀವ ನಾಶವಾಗದೇ ಇರುವುದೇ ಈ ಜೀವನಲ್ಲಿರತಕ್ಕ ಗುಣ. ಇಷ್ಟು ಈ ಮಂತ್ರದ ಸಾರ.

ಅರ್ಜುನನು ಶ್ರೀ ಕೃಷ್ಣನನ್ನು ಕುರಿತು ಪ್ರಶ್ನೆ ಮಾಡುತ್ತಾನೆ: "ಲೋಕಕ್ಕೆ ಜೀವನು ಅನಿತ್ಯನು, ಮತ್ತು ಸ್ವತಂತ್ರನೆಂದು ಭ್ರಾಂತಿ ಬರಲು ಕಾರಣವೇನು?" ಶ್ರೀಕೃಷ್ಣನು ಉಪದೇಶಿಸುತ್ತಾನೆ: "ಯಾರು ಶಾಸ್ತ್ರದಲ್ಲಿ ಹೇಳಿದ ಪ್ರಕಾರ ಜೀವ ಸ್ವರೂಪವನ್ನು, ಪರಮಾತ್ಮ ಸ್ವರೂಪವನ್ನು ತಿಳಿಯುತ್ತಾನೋ ಅವನಿಗೆ ಈ ಭ್ರಾಂತಿಯು ಬರಲಾರದು. ಆದುದರಿಂದ ಈ ಭ್ರಾಂತಿಗೆ ಶಾಸ್ತ್ರದಲ್ಲಿ ಹೇಳಿದ ತತ್ವದ ಅಜ್ಞಾನವೇ ಕಾರಣ. ಶಾಸ್ತ್ರ ಜ್ಞಾನವಿದ್ದವನು, ಅವನು ಕೊಂದ, ಇವನು ಕೊಲ್ಲಲ್ಪಟ್ಟನೆಂಬ ಬುದ್ಧಿ ಉಳ್ಳವನಾಗುವುದಿಲ್ಲ"

ಜೀವನು ಯಾವಾಗಲು ಅಸ್ವತಂತ್ರನೆಂದೇ ಹೇಳಿದರೆ ಕೆಲವು ಶಂಕೆಗಳು ಪ್ರಾಪ್ತವಾಗುವವು. ಮೋಕ್ಷಕ್ಕೆ ಹೋದ ಮೇಲೆ ಜೀವನು ಅಸ್ವಂತತ್ರ-ನಾಗಿರುವುದಾದರೆ ಮೋಕ್ಷವು ಮಹಾ ಫಲವಾಗಲಾರದು. ಮತ್ತು ಜೀವನು ಅಸ್ವತಂತ್ರನಾದರೆ, ಪರಮಾತ್ಮನೇ ಜೀವನಿಂದ ಕರ್ಮ ಮಾಡಿಸುವನೆಂದಾಯಿತು. ಆದ್ದರಿಂದ ಜೀವನು ಆ ಕರ್ಮಫಲವನ್ನು ಅನುಭೋಗಿಸುವ ಕಾರಣವೇ ಇಲ್ಲ. ಕೊಡಲಿಯಿಂದ ವೃಕ್ಷವನ್ನು ಛೇದನ ಮಾಡಿದರೆ ಕೊಡಲಿಯು ನಿಮಿತ್ತವಾಯಿತು. ಮುಖ್ಯ ಕಾರಣನಾದ ಪುರುಷನೇ ಅದರ ಫಲವನ್ನು ಅನುಭವಿಸುತ್ತಾನೆ. ಅದರಂತೆ ಜೀವನು ನಿಮಿತ್ತಮಾತ್ರನಾದ್ದರಿಂದ ಈಶ್ವರನೇ ಮುಖ್ಯಕರ್ತನಾದ್ದರಿಂದ ಜೀವನಿಗೆ ಕರ್ಮದ ಫಲ ಸುಖ ದುಃಖಾದಿಗಳು ಬರಲು ಸಂಭವವಿಲ್ಲ. ಈ ಎರಡು ಶಂಕೆಗಳಿಗೆ ಸಮಾಧಾನವನ್ನು ಹೇಳುತ್ತೇವೆ:

ಜೀವನು ಮೋಕ್ಷದಲ್ಲಿ ಅಸ್ವತಂತ್ರನಾಗಿದ್ದರೂ ತನ್ನಿಮಿತ್ತಕವಾದ ದುಃಖವು ಅಲ್ಲಿ ಇಲ್ಲ. ಅಸ್ವಾತಂತ್ರ್ಯವು ದೋಷವಾಗುವುದು ದುಃಖಕ್ಕೆ ಕಾರಣವಾದಾಗ. ಮೋಕ್ಷದಲ್ಲಿರತಕ್ಕ ಅಸ್ವಾತಂತ್ರ್ಯವೆಂದರೆ ಪರಮಾತ್ಮನ ಇಚ್ಛೆಗೆ ಅನುಸಾರಿಯಾದ ಇಚ್ಛೆಯು ಜೀವನಿಗೆ ಬರುವುದೆಂದರ್ಥ. ಅಂದರೆ ಪರಮಾತ್ಮನು ಯಾವುದನ್ನು ಇಚ್ಛಿಸುತ್ತಾನೋ ಅದನ್ನೇ ಜೀವನು ಇಚ್ಛಿಸುತ್ತಾನೆ. ಜೀವನು ಇಚ್ಛೆ ಮಾಡಿದ ವಿಷಯಗಳು ಪ್ರಾಪ್ತವಾಗುವವು. ಯಾಕೆಂದರೆ ಪರಮಾತ್ಮನಿಗೂ ಅದೇ ತರಹದ ಇಚ್ಛೆ ಇದೆ. ಇಷ್ಟೇ ಅಲ್ಲದೇ ಈಶ್ವರನ ಕಿಂಕರಭಾವವನ್ನೆ ಈ ಸಜ್ಜೀವನು ಸರ್ವದಾ ಅಪೇಕ್ಷಿಸುತ್ತಾನೆ. ಆದುದರಿಂದ ಮನೋಭೀಷ್ಟವಾದ ಕೈಂಕರ್ಯವು ಮೋಕ್ಷದಲ್ಲಿ ದೋಷವೆಂದು ಹೇಳಲಿಕ್ಕೆ ಆಗುವುದಿಲ್ಲವೆಂದು ಪ್ರಥಮ ಶಂಕೆಗೆ ಸಮಾಧಾನ.

ಎರಡನೆ ಶಂಕೆಗೆ ಈ ರೀತಿ ಸಮಾಧಾನ ತಿಳಿದುಕೊಳ್ಳಬೇಕು. ಜೀವನು, ಕೊಡಲಿ ಮೊದಲಾದ ಅಚೇತನ ಪದಾರ್ಥಗಳಂತೆ ಸರ್ವಥಾ ಅಕರ್ತನು ಎಂದು ತಿಳಿಯಬಾರದು. **"ಕರ್ತಾ ಶಾಸ್ತ್ರಾರ್ಥವತ್ವಾತ್"** ಎಂಬ ಸೂತ್ರದಲ್ಲಿ ಜೀವನ ಕರ್ತೃತ್ವವನ್ನು ಸಮರ್ಥಿಸಿದ್ದಾರೆ. ಹೇಗೆಂದರೆ ಶಾಸ್ತ್ರದ ವಿಧಿ ನಿಷೇಧಗಳು ಜಡ, ಜೀವ, ಈಶ್ವರ ಈ ಮೂರು ವಸ್ತುಗಳ ಮಧ್ಯದಲ್ಲಿ ಯಾರನ್ನು ಕುರಿತು ಇವೆ?

ಈಶ್ವರನು ಸ್ವತಂತ್ರನಾದುದರಿಂದ ವಿಧಿ ನಿಷೇಧಗಳಿಗೆ ವಿಷಯನಾಗಲಾರನು. ಜಡವಸ್ತುವು ವಿಧಿನಿಷೇಧಗೋಚರವಲ್ಲವೆಂದು ಹೇಳುವುದೇ ಅನಾವಶ್ಯಕವು. ಯಾಕೆಂದರೆ ಜಡವಾದ ಕಂಬವನ್ನು ಕುರಿತು 'ನೀನು ನಿಲ್ಲು' ಎಂದು ವಿಧಿ ಮಾಡತಕ್ಕವನನ್ನು ಹುಚ್ಚನೆಂದು ಹೇಳುತ್ತಾರೆ. ಆದುದರಿಂದ ಜೀವನೇ ವಿಧಿನಿಷೇಧವಿಷಯನೆಂದು ಹೇಳಬೇಕು. ವಿಧಿ ಎಂದರೆ ಇದನ್ನು ಮಾಡೆಂದು ತಿಳಿಸುವುದು. ಸರ್ವಥಾ ಕರ್ತೃತ್ವವು ಜೀವನಲ್ಲಿ ಇಲ್ಲದೇ ಹೋದರೆ ಇದನ್ನು ಮಾಡೆಂಬ ವಿಧಿಯು ಜೀವನನ್ನು ಕುರಿತು ಕೂಡುವುದಿಲ್ಲ. ಆದರೆ, ಜೀವನು ಈಶ್ವರನಂತೆ ಸ್ವತಂತ್ರ ಕರ್ತನಲ್ಲ. ನಮ್ಮ ಪ್ರೇರಣಾನುಸಾರವಾಗಿ ಕೆಲಸ ಮಾಡುವ ಬಡಗಿಯಂತೆ ಅಸ್ವತಂತ್ರ ಕರ್ತನೆಂದು ಹೇಳಬೇಕು. ಅಸ್ವಂತಂತ್ರಕರ್ತನಾದ ಬಡಗಿಯು ತನ್ನ ಕರ್ಮದ ಫಲವನ್ನು ಹೊಂದುವುದೇ ಯುಕ್ತವು. ಸ್ವತಂತ್ರ ಕರ್ತನಾದ ಈಶ್ವರನಿಗೆ ಕರ್ಮದ ಫಲವು ಬರುವ ಪ್ರಸಕ್ತಿಯು ಇಲ್ಲ. ರಾಗ ದ್ವೇಷಪೂರ್ವಕವಾಗಿ ಮಾಡುವವರಿಗೇನೆ ಕರ್ಮದ ಫಲ. ಈಶ್ವರನಿಗೆ ರಾಗ, ದ್ವೇಷಗಳಿಲ್ಲ. ಜೀವನ ಯೋಗ್ಯತೆ, ಜನ್ಮಾಂತರದ ಕರ್ಮ– ಇವುಗಳನ್ನು ಅನುಸರಿಸಿ ಶುಭಾಶುಭದಲ್ಲಿ ಪ್ರೇರಣೆ ಮಾಡುತ್ತಾನೆ. ಆದುದರಿಂದ ಅಸ್ವತಂತ್ರ ಕರ್ತನಾದ್ದರಿಂದ ಕರ್ಮ ಫಲವನ್ನು ಅನುಭವಿಸಬೇಕೆಂದು ಸಮಾಧಾನವನ್ನು ತಿಳಿದುಕೊಳ್ಳಬೇಕು. (ನಾಲ್ಕನೆಯ ದಿನದ ಉಪನ್ಯಾಸವು ಮುಗಿಯಿತು.)

***

ಬಂಧುಗಳ ದೇಹ ನಾಶದಿಂದ ದುಃಖವನ್ನು ಹೊಂದುತ್ತಿರುವ ಅರ್ಜುನನಿಗೆ ಶ್ರೀಕೃಷ್ಣ ಪರಮಾತ್ಮನು ದೃಷ್ಟಾಂತ ಪೂರ್ವಕ ಉಪದೇಶ ಮಾಡುತ್ತಾನೆ: "ಪುರುಷನು ತನ್ನ ಜೀರ್ಣವಾದ ವಸ್ತ್ರವನ್ನು ತ್ಯಾಗ ಮಾಡಿ ನೂತನ ವಸ್ತ್ರವನ್ನು ಸ್ವೀಕರಿಸುತ್ತಾನೆ. ಅವನಿಗೆ ಜೀರ್ಣವಸ್ತ್ರವನ್ನು ಬಿಡುವಾಗ ದುಃಖವಿಲ್ಲ. ನೂತನ ವಸ್ತ್ರಧಾರಣದಿಂದ ಸಂತುಷ್ಟನೇ ಆಗಿರುತ್ತಾನೆ. ಅದೇ ರೀತಿಯಾಗಿ ಜೀರ್ಣವಾದ ಒಂದು ದೇಹವನ್ನು ಬಿಟ್ಟು ಇನ್ನೊಂದು ನೂತನವಾದ ದೇಹವನ್ನು

ಧರಿಸುವಾಗ ಜೀರ್ಣವಾದ ದೇಹ ಹೋಗಿ ನೂತನವಾದ ದೇಹ ಬಂತೆಂದು ಸಂತೋಷವೇ ಉಂಟಾಗಬೇಕೇ ಹೊರತಾಗಿ, ಧೀರನಾದ ಪುರುಷನಿಗೆ ದುಃಖಕ್ಕೆ ಕಾರಣವಿಲ್ಲ.

ಈ ದೃಷ್ಟಾಂತವನ್ನು ದೇಹ, ಆತ್ಮರು ಬೇರೆ ಬೇರೆಂಬ ವಿಷಯದಲ್ಲಿಯೂ ಶ್ರೀಕೃಷ್ಣನು ಹೇಳಿರುತ್ತಾನೆ. ಕೆಲವು ನಾಸ್ತಿಕರು ದೇಹ, ಆತ್ಮಒಂದೇ ಎಂದು ಹೇಳುತ್ತಾರೆ. ಅದು ಯುಕ್ತವಲ್ಲ. ಒಬ್ಬ ಪುರುಷನು ಒಂದು ವಸ್ತ್ರವನ್ನು ಬಿಟ್ಟು ಇನ್ನೊಂದು ವಸ್ತ್ರವನ್ನು ಸ್ವೀಕರಿಸುವಂತೆ ಜೀವನು ಒಂದು ದೇಹವನ್ನು ಬಿಟ್ಟು ಇನ್ನೊಂದು ದೇಹವನ್ನು ಧರಿಸುವ ಪ್ರಯುಕ್ತ ಜೀವನು ಬೇರೆ, ದೇಹವು ಬೇರೆ ಎಂದು ವಸ್ತ್ರ ದೃಷ್ಟಾಂತದಿಂದ ತಿಳಿದುಕೊಳ್ಳಬೇಕು. ಅಲ್ಲದೇ ವಸ್ತ್ರವು ನಿಯಮೇನ ಜೀರ್ಣವಾಗುವಂತೆ ನಮ್ಮ ದೇಹವು ನಮ್ಮ ಇಚ್ಛೆ ಇಲ್ಲದಿದ್ದರೂ ಜೀರ್ಣ-ವಾಗುತ್ತದೆ. ಇದರಿಂದ ಜೀವನು ಅಸ್ವತಂತ್ರನೆಂದು ತಿಳಿಯಬೇಕು.

ಇದೇ ವಸ್ತ್ರ ದೃಷ್ಟಾಂತದಿಂದ ನಾವು ವಿಹಿತ ಕರ್ಮಾನುಷ್ಠಾನುವನ್ನು ಮಾಡದೇ ಇದ್ದಲ್ಲಿ ಪರಮಾತ್ಮನು ಇನ್ನೊಂದು ದೇಹವನ್ನು ಕೊಡುವಾಗ ನಿಕೃಷ್ಟವಾದ ದೇಹವನ್ನೂ ವಿಹಿತ ಕರ್ಮ ಮಾಡಿದರೆ ಉತ್ಕೃಷ್ಟ ದೇಹವನ್ನೂ ಕೊಡುತ್ತಾನೆಂದು ತಿಳಿಯಬೇಕು. ಹೇಗೆಂದರೆ, ಯಜಮಾನನು ತನ್ನ ಭೃತ್ಯರುಗಳಿಗೆ ಅನ್ನ ವಸ್ತ್ರವನ್ನು ಕೊಡುವಾಗ ತನ್ನ ಆಜ್ಞೆಕ್ಕೆ ಸರಿಯಾಗಿ ಕರ್ಮ ಮಾಡಿದ ಭೃತ್ಯರಿಗೆ ಒಳ್ಳೆಯ ಅನ್ನ ವಸ್ತ್ರವನ್ನು, ಸರಿಯಾಗಿ ಕರ್ಮ ಮಾಡದಿದ್ದವರಿಗೆ ನಿಕೃಷ್ಟವಾದ ಅನ್ನ ವಸ್ತ್ರವನ್ನು ಕೊಡುವಂತೆ ಪರಮಾತ್ಮನು ನಮ್ಮ ಕರ್ಮಾನುಸಾರಿಯಾದ ದೇಹವನ್ನು ಕೊಡುತ್ತಾನೆಂದು ಶ್ರೀಕೃಷ್ಣನ ಅಭಿಪ್ರಾಯ.

ಇಷ್ಟು ಉಪದೇಶವನ್ನು ಕೇಳಿದ ಅರ್ಜುನನು ಜೀವ ನಾಶ ವಿಷಯದಲ್ಲಿ ಶಂಕಿಸುತ್ತಾನೆ. "ದಕ್ಷಪ್ರಜಾಪತಿಯ ಶಿರಚ್ಛೇದವನ್ನು ಮಹಾ ಪ್ರಯತ್ನದಿಂದ, ಶಸ್ತ್ರದಿಂದ ರುದ್ರದೇವರು ಮಾಡಿದಂತೆ ಈ ಯುದ್ಧದಲ್ಲಿ ಶಸ್ತ್ರಗಳಿಂದ ಜೀವ ನಾಶವು ಸಂಭವಿಸುವುದಷ್ಟೇ?" ಎಂದು ಶಂಕಿಸಿದರೆ, ಅದಕ್ಕೂ ಶ್ರೀಕೃಷ್ಣನು ಸಮಾಧಾನವನ್ನು ಹೇಳುತ್ತಾನೆ:

 

"ಪರಮಾತ್ಮನು ನಿತ್ಯದಲ್ಲಿ ಸರ್ವತ್ರದಲ್ಲಿ ವ್ಯಾಪಿಸಿದ್ದಾನೆ. ಅವನು ಶಶ್ವದೇಕ ಪ್ರಕಾರ, ಸೃಷ್ಟಿ, ಪ್ರಳಯಾದಿ ಅನೇಕ ಕಾರ್ಯಗಳನ್ನು ಮಾಡಿದಾಗ್ಯೂ ತನ್ನ ಅಚಿಂತ್ಯ ಶಕ್ತಿಯಿಂದ ಯಾವುದೊಂದು ವಿಕಾರವನ್ನು ಹೊಂದುವುದಿಲ್ಲ. ಈ ವಿಷಯವು ಶಾಸ್ತ್ರಸಿದ್ಧವಾಗಿದೆ. ಅಂತಹ ನಿತ್ಯನಾದ ಅಚ್ಛೇದ್ಯ, ಅಭೇದ್ಯನಾದ, ಶಶ್ವದೇಕ ಪ್ರಕಾರನಾದ ಪರಮಾತ್ಮನಿಗೆ ಪ್ರತಿಬಿಂಬನಾದ ಜೀವನು ಪರಮಾತ್ಮ-ನಂತೆ ಶಸ್ತ್ರಾದಿಗಳಿಂದ ಜಲ, ವಾಯು, ಅಗ್ನಿಗಳಿಂದಲೂ ನಾಶ ಹೊಂದಲು ಶಕ್ಯವಿಲ್ಲ. ಬಿಂಬ ಪ್ರತಿಬಿಂಬಗಳಿಗೆ ಲೋಕದಲ್ಲಿ ಸಾಮ್ಯವಿರುವುದರಿಂದ ಪರಮಾತ್ಮನ ಪ್ರತಿಬಿಂಬನಾದ ಜೀವನು ಪರಮಾತ್ಮನಂತೆ ನಿತ್ಯನಾಗಿದ್ದಾನೆ. ಪರಮಾತ್ಮನಂತೆ ಜೀವನು ಇದ್ದಾನೆಂದರೆ ಎಲ್ಲ ವಿಷಯಗಳಲ್ಲಿ ಸಾಮ್ಯವನ್ನು ತಿಳಿದುಕೊಳ್ಳಬಾರದು. ಶಾಸ್ತ್ರ ಅವಿರುದ್ಧವಾದ ವಿಷಯದಲ್ಲಿ ಮಾತ್ರ ಬಿಂಬ-ಪ್ರತಿಬಿಂಬ ಭಾವದಿಂದ ಸಾಮ್ಯವನ್ನು ತಿಳಿದುಕೊಳ್ಳಬೇಕು" ಎಂದು ಸಮಾಧಾನ-ವನ್ನು ಕೊಟ್ಟಮೇಲೆ ಪುನಃ ಅರ್ಜುನನು ಶಂಕಿಸುತ್ತಾನೆ:

"ಪರಮಾತ್ಮನಂತೆ ಜೀವನು ಅಚ್ಛೇದ್ಯ, ಅಭೇದ್ಯನಾದರೆ ಪರಮಾತ್ಮನಲ್ಲಿ ಜೀವಕ್ಕಿಂತ ವಿಶೇಷವೇನಿದೆ?" ಇದಕ್ಕೆ ಶ್ರೀ ಕೃಷ್ಣನು ಈ ರೀತಿಯಾಗಿ ಸಮಾಧಾನ ಹೇಳುತ್ತಾನೆ:

"ಪರಮಾತ್ಮನು ಸರ್ವತ್ರ ವ್ಯಾಪ್ತನು. ಜೀವನು ಅಣು. ಆ ಜೀವನು ಪರಮಾತ್ಮನನ್ನು ಆಶ್ರಯಿಸಿಕೊಂಡು ಅವನ ಅಧೀನನಾಗಿ ಸದಾ ಇರುತ್ತಾನೆ. ಜೀವನಿಗೆ ಪರಮಾತ್ಮನು ಆಧಾರನಾಗಿದ್ದಾನೆ. ನಮಗೆ ಆಧಾರವಾದ ಪೃಥ್ವಿಯು ಕಾಣುವಂತೆ ಪರಮಾತ್ಮನು ಏಕೆ ಕಾಣುವುದಿಲ್ಲವೆಂದು ಶಂಕಿಸಬಹುದು. ಆದರೆ ಆತನು ಅವ್ಯಕ್ತ ಸ್ವಭಾವನು. ದೇಹವುಳ್ಳವನಾದರೂ ಕೂಡಾ ತನ್ನ ಅಚಿಂತ್ಯ ಶಕ್ತಿಯಿಂದ ಕಾಣಿಸಿಕೊಳ್ಳುವುದಿಲ್ಲ. ತಾನು ಅವ್ಯಕ್ತ ಸ್ವಭಾವನಾದರೂ ಕೂಡ ತನಗೆ ಇಚ್ಛೆ ಬಂದರೆ ತನ್ನ ಅಚಿಂತ್ಯ ಶಕ್ತಿಯಿಂದ ಭಕ್ತನಿಗೆ ಕಾಣಿಸಿಕೊಳ್ಳುತ್ತಾನೆ. ಅವನ ಶಕ್ತಿಯಲ್ಲಿ ಯಾವಾಗಲೂ ವ್ಯತ್ಯಾಸವಾಗುವುದಿಲ್ಲ. ಇದೆಲ್ಲ ಶಾಸ್ತ್ರಸಿದ್ಧವಾದ ವಿಷಯವು. ಈ ಪ್ರಕಾರ ಜೀವ ಪರಮಾತ್ಮರ ವಿಚಾರವನ್ನು ತಿಳಿದುಕೊಂಡು,

ಜೀವರಿಗೆ ನಾಶವಿಲ್ಲವೆಂದು ನಿಶ್ಚಯ ಮಾಡು. ಆಗ ನೀನು ಯುದ್ಧದಲ್ಲಿ ದುಃಖವನ್ನು ಹೊಂದಲು ಶಕ್ಯವಿಲ್ಲ"

ಪುನಃ ಅರ್ಜುನನು ಪ್ರಶ್ನೆ ಮಾಡುತ್ತಾನೆ: "ಸ್ವಾಮಿ! ಜನನ, ಮರಣಗಳು ದುಃಖಕ್ಕೆ ಕಾರಣಗಳೆಂಬುದು ನಿಶ್ಚಿತ. ಆದುದರಿಂದ ಬಂಧುಗಳ ಮರಣದಿಂದ ದುಃಖಿತನಾಗಿದ್ದೇನೆ" ಎಂದು ಕೇಳಿದ್ದಕ್ಕೆ, ಶ್ರೀಕೃಷ್ಣನು "ದೇಹವಿಯೋಗದಿಂದ ದುಃಖಿಸುವುದು ಸರಿಯಲ್ಲ. ನೀನು ಯುದ್ಧ ಮಾಡದೇ ಇದ್ದರೂ, ನಿನ್ನ ಬಂಧುಗಳಿಗೆ ಒಂದು ದಿವಸ ದೇಹ ವಿಯೋಗ ಆಗಿಯೇ ತೀರುತ್ತದೆ. ಅಪರಿಹಾರ್ಯ ವಿಷಯದಲ್ಲಿ ನೀನು ದುಃಖದಿಂದ ಯುದ್ಧವನ್ನು ಮಾಡದೇ ಕರ್ತವ್ಯಭ್ರಷ್ಟನಾಗುವುದು ಯುಕ್ತವಲ್ಲ.

ಈ ದೇಹಗಳು ಪ್ರಕೃತಿಯಿಂದ ನಿರ್ಮಿತವಾದ ಮೇಲೆ ಪ್ರಕೃತಿಯಲ್ಲಿ ಲೀನವಾಗುವುದು ಆ ದೇಹಗಳ ಸ್ವಭಾವವೇ ಆಗಿರುತ್ತದೆಂದು ತಿಳಿದು ನಿನ್ನ ಕರ್ತವ್ಯವನ್ನು ನೀನು ಮಾಡು. ಇದು ನಿನ್ನ ಧರ್ಮವೆಂದು ತಿಳಿದರೆ ನಿನಗೆ ದುಃಖವಾಗುವುದಿಲ್ಲ. ಈ ಯುದ್ಧದಿಂದ ನಿನಗೆ ಏನೂ ಶ್ರೇಯಸ್ಸಿಲ್ಲವೆಂದು ತಿಳಿಯಬೇಡ. ಭಗವತ್ಪೂಜಾರೂಪವಾದ ದುಷ್ಟ ನಿಗ್ರಹರೂಪ ಯುದ್ಧಕ್ಕಿಂತ ಕ್ಷತ್ರಿಯರಿಗೆ ಬೇರೆ ಶ್ರೇಯಸ್ಸೇ ಇಲ್ಲ. ಅನಾಯಾಸವಾಗಿ ಇಂತಹ ಪ್ರಸಂಗ ಒದಗುವುದು ಪುಣ್ಯಶಾಲಿಯಾದ ಕ್ಷತ್ರಿಯರಿಗೆ ಮಾತ್ರ. ಇಂತಹ ಸ್ವಧರ್ಮವಾದ ಯುದ್ಧವನ್ನು ನೀನು ಮಾಡದೇ ಇದ್ದರೇ ನೀನು ಧರ್ಮಭ್ರಷ್ಟನಾಗಿ ಧರ್ಮಹಾನಿ-ಯಿಂದ ಅಕೀರ್ತಿಯನ್ನೂ, ಪಾಪವನ್ನೂ ಹೊಂದುವಿ. ಸಂಭಾವಿತನಾದ ಪುರುಷನಿಗೆ ಅಪಕೀರ್ತಿಯು ಮರಣ ದುಃಖಕ್ಕಿಂತ ಅಧಿಕವಾದದ್ದು. 'ನೀನು ದಯಾಳು-ವಾದ್ದರಿಂದ ಯುದ್ಧವನ್ನು ಬಿಟ್ಟ' ಎಂದು ಯಾರೂ ಹೇಳಲಾರರು. 'ಅರ್ಜುನನು ಭಯದಿಂದ ರಣವನ್ನು ಬಿಟ್ಟ' ಎಂದೇ ಹೇಳುತ್ತಾರೆ. ಕೆಟ್ಟ ಕೆಟ್ಟ ಮಾತುಗಳಿಂದ ಮಹಾರಥರುಗಳು ನಿನ್ನ ನಿಂದೆ ಮಾಡುವರು. ಯಾವ ಮಹಾರಥರುಗಳ ಎದುರಿನಲ್ಲಿ ನೀನು ಶ್ರೇಷ್ಠವ್ಯಕ್ತಿಯೆಂದು ಅನಿಸಿಕೊಂಡಿದ್ದೀಯೋ, ಅಂತಹ ನೀನು ಅವರ ಎದುರಿನಲ್ಲಿಯೇ ಸಣ್ಣವನಾಗುತ್ತಿ. ಈ ಯುದ್ಧದಿಂದ ಜಯವೋ, ಅಪ-

 

ಜಯವೋ ಎಂಬ ಶಂಕೆ ನಿನಗೆ ಬೇಡ. ಜಯವಾದರೆ ರಾಜ್ಯ ಲಾಭವು. ನೀನು ಹತನಾದರೆ ಸ್ವರ್ಗ ಪ್ರಾಪ್ತಿಯು. ಈ ರೀತಿ ಜಯಾಪಜಯಗಳು ಎರಡೂ ಶ್ರೇಯಸ್ಕರವಾದ್ದರಿಂದ, ಸುಖ ದುಃಖಾದಿಗಳನ್ನು ಸಮಾನವಾಗಿ ತಿಳಿದು ಪರಮಾತ್ಮನ ಪ್ರೀತ್ಯರ್ಥವಾಗಿ ಯುದ್ಧವನ್ನು ಮಾಡಿದರೆ ನಿನಗೆ ಬಹಳ ಶ್ರೇಯಸ್ಸುಂಟು. ಯಾವ ಪಾಪಕ್ಕೂ ಪ್ರಸಕ್ತಿ ಇಲ್ಲ" ಎಂದು ಅರ್ಜುನನಿಗೆ ಶ್ರೀಕೃಷ್ಣ ಪರಮಾತ್ಮನು ಬೋಧಿಸಿದನು.

ಈ ರೀತಿಯಾದ ಶ್ರೀಕೃಷ್ಣನ ಉಪದೇಶವು ಯುದ್ಧ ಮಾಡತಕ್ಕ ಕ್ಷತ್ರಿಯರಿಗೆ ಸಂಬಂಧ ಪಟ್ಟದ್ದು ಹೊರತು ಯುದ್ಧದ ಪ್ರಸಕ್ತಿ ಇಲ್ಲದ ಬ್ರಾಹ್ಮಣಾದಿಗಳಿಗೆ ಅಲ್ಲವೆಂದು ತಿಳಿದುಕೊಳ್ಳಬಾರದು. ಯುದ್ಧವನ್ನು ಎಲ್ಲರು ಮಾಡಬೇಕು. ಯುದ್ಧವು ಎರಡು ಪ್ರಕಾರ: ಬಾಹ್ಯಯುದ್ಧ ಮತ್ತು ಅಂತರಂಗ ಯುದ್ಧ ಎಂದು. ಬಾಹ್ಯ ಯುದ್ಧ ಕ್ಷತ್ರಿಯಯರಿಗಾದರೆ, ಅಂತರಂಗ ಯುದ್ಧ ಎಲ್ಲ ಶ್ರೇಯಸ್ಕಾಮಿಗಳಿಗೆ ಅವಶ್ಯಕವು. ಬಾಹ್ಯ ಯುದ್ಧದಲ್ಲಿ ದುರ್ಯೋಧನ, ದುಶ್ಶಾಸನ, ಶಕುನಿ ಮೊದಲಾದ ದುಷ್ಟರು ಇದ್ದಂತೆ ಎಲ್ಲರ ಹೃದಯದಲ್ಲಿ ಅಜ್ಞಾನ, ಮಿಥ್ಯಾಜ್ಞಾನ, ತತ್ವ ಸಂಶಯ, ನಾಸ್ತಿಕ್ಯ ಬುದ್ಧಿ ಮೊದಲಾದ ಶತ್ರುಗಳು ವಾಸಮಾಡುತ್ತಿದ್ದಾರೆ. ಆ ದೋಷಗಳಿಗೆಲ್ಲ ದುರ್ಯೋಧನಾದಿಗಳು ಅಭಿ-ಮಾನಿಗಳು. ಅವರು ಒಂದು ರೂಪದಿಂದ ದೇಹದೊಳಗಿದ್ದಾರೆ. ನಮ್ಮ ದೇಹದಲ್ಲಿರತಕ್ಕ ಪಾಪಕರ್ಮಗಳು ಹೊರಗಿನ ಯುದ್ಧದಲ್ಲಿ ಇರುವ ದುರ್ಯೋಧನನ ಮಹತ್ತಾದ ಸೈನ್ಯದಂತೆ. ನಮ್ಮ ದೇಹದಲ್ಲಿರತಕ್ಕ ಪುಣ್ಯ ಕರ್ಮಗಳು ಅಲ್ಪವಾದ ಪಾಂಡವರ ಸೈನ್ಯದಂತೆ. ಧರ್ಮ, ಭಕ್ತ್ಯಾದಿಗುಣಗಳು ಹೊರಗಿನ ಯುದ್ಧದಲ್ಲಿರತಕ್ಕ ಪಾಂಡವರಂತೆ. ಶ್ರೀಕೃಷ್ಣ ಪರಮಾತ್ಮನನ್ನು ಆಶ್ರಯಿಸಿ, ಪಾಂಡವರು ದುರ್ಯೋಧನಾದಿಗಳನ್ನು ನಿಗ್ರಹ ಮಾಡಿದಂತೆ ಶ್ರೀಕೃಷ್ಣ ಪರಮಾತ್ಮನನ್ನು ಆಶ್ರಯಿಸಿ ಘೋರವಾದ ಯುದ್ಧವನ್ನು ಒಳಗೆ ನಡೆಸಿ, ಅಜ್ಞಾನ, ಮಿಥ್ಯಾಜ್ಞಾನ, ನಾಸ್ತಿಕ್ಯ ಬುದ್ಧಿ ಮೊದಲಾದವುಗಳನ್ನು ನಾಶ ಮಾಡಿಯೇ ತೀರಬೇಕು. ಇದರ ವಿನಃ ಆತ್ಮೋದ್ಧಾರವು ಆಗಲಾರದು. ಆದುದರಿಂದ ಅಂತರ್ಯುದ್ಧದ ದೃಷ್ಟಿಯಿಂದ ಗೀತೆಯು ಸರ್ವರಿಗೂ ಸಂಬಂಧಿಸುತ್ತದೆ.

ಈ ವಿಷಯವನ್ನು ನಮ್ಮ ಆಚಾರ್ಯರು **"ಏವಮಧ್ಯಾತ್ಮನಿಷ್ಠಂ ಹಿ ಭಾರತಂ ಸರ್ವಮುಚ್ಯತೇ"** ಎಲ್ಲ ಭಾರತವು ಈ ರೀತಿ ಅಧ್ಯಾತ್ಮ ಪರವಾಗಿದೆ, ಎಂದು ನಿರ್ಣಯಿಸಿದ್ದಾರೆ. ಆದುದರಿಂದ ಗೀತೆಯು ಎಲ್ಲರಿಗೂ ಆತ್ಮೋದ್ಧಾರಕ್ಕೆ ಕಾರಣವಾದುದರಿಂದ ಎಲ್ಲರಿಗೂ ಗೀತೆಯ ಜ್ಞಾನವು ಅವಶ್ಯಕವು. (ಐದನೆಯ ದಿನದ ಉಪನ್ಯಾಸವು ಮುಗಿಯಿತು.)

***

ಇನ್ನು ಮೇಲೆ ಶ್ರೀಕೃಷ್ಣ ಪರಮಾತ್ಮನು ಬ್ರಹ್ಮಜ್ಞಾನಕ್ಕೆ ಸಾಧನವಾದ ನಿಷ್ಕಾಮಕರ್ಮಯೋಗವನ್ನು ಹೇಳುತ್ತಾ ಆ ನಿಷ್ಕಾಮಕರ್ಮಯೋಗದಲ್ಲಿ ಆದರ ಉಂಟಾಗುವುದಕ್ಕೋಸ್ಕರ ಅದನ್ನು ಸ್ತೋತ್ರ ಮಾಡುತ್ತಾನೆ:

"ಎಲೋ ಅರ್ಜುನಾ! ಲೋಕದಲ್ಲಿ ಕೃಷ್ಯಾದಿಗಳನ್ನು ಮಾಡಬೇಕೆಂದು ಇಚ್ಛಾ ಮಾಡಿದರೂ ಸ್ವಲ್ಪ ಆರಂಭಿಸಿ ಅಲ್ಲಿಗೇ ಬಿಟ್ಟರೆ ಏನೂ ಫಲ ಸಿಗಲಾರದು. ನಿಷ್ಕಾಮ ಕರ್ಮವು ಹೀಗಲ್ಲ. ಭಗವತ್ಪ್ರೀತಿಕರವಾದ ಕರ್ಮವನ್ನು ಮಾಡುವೆನೆಂಬ ಇಚ್ಛೆ ಮಾಡಿದರೂ, ಸ್ವಲ್ಪ ಆರಂಭಿಸಿ ವಿಘ್ನದಿಂದ ಅಲ್ಲಿಗೆ ಬಿಟ್ಟರೂ, ಅಷ್ಟಕ್ಕೂ ಫಲವಿದೆ. ರೋಗಿಯ ರೋಗ ಪರಿಹಾರಕ್ಕೋಸ್ಕರ ವೈದ್ಯರು ಶಸ್ತ್ರ ಚಿಕಿತ್ಸೆಯನ್ನು ಮಾಡುವಾಗ ಸ್ವಲ್ಪ ವ್ಯತ್ಯಾಸವಾದರೆ, ಹಾಗೆಯೇ ರೋಗಿಯು ಔಷಧಿಯನ್ನು ತೆಗೆದುಕೊಳ್ಳುವಾಗ ಅಪಥ್ಯ ಮಾಡಿದರೆ ಅನರ್ಥವಾಗುವುದು ಕಂಡಿದೆ. ನಿಷ್ಕಾಮ ಕರ್ಮಯೋಗವು ಪ್ರಮಾದದಿಂದ ಏನಾದರೂ ವ್ಯತ್ಯಾಸ ಹೊಂದಿದರೂ ಅನರ್ಥ ಫಲವನ್ನು ಕೊಡಲಾರದು. ವಿಷ್ಣುಪ್ರೀತಿಕರವಾದ ಧರ್ಮವನ್ನು ಮಾಡುವಾಗ ಇತರ ದೇವತೆಗಳ ಪ್ರೀತಿಕರವಾದ ಧರ್ಮವನ್ನು ಮಾಡದೇ ಇದ್ದುದರಿಂದ ಸಂಭವಿಸುವ ಅನರ್ಥವೂ ಇಲ್ಲ. ಪರಮಾತ್ಮನ ಪ್ರೀತ್ಯರ್ಥವಾದ ಧರ್ಮದ ಸ್ವಲ್ಪಾಂಶವೂ ಕೂಡ ಯಮಧರ್ಮನ ಮಹಾಭಯದಿಂದ ಪಾರು ಮಾಡುತ್ತದೆ".

ಈ ವಿಷಯದಲ್ಲಿ ಕೆಲವರಿಗೆ ಪ್ರಶ್ನೆ ಉಂಟಾಗುವುದು. ಸ್ವಲ್ಪವಾಗಿ ಮಾಡಿದ ಧರ್ಮವು ಮಹಾ ಭಯದಿಂದ ಪಾರು ಮಾಡುವುದು ಹೇಗೆ? ಅಷ್ಟು

ಮಾತ್ರದಿಂದ ಮಹಾಫಲವಾದ ಮೋಕ್ಷವು ಸಿಗುವುದು ಹೇಗೆ? ಈ ಪ್ರಶ್ನೆಗೆ, ಶ್ರೀ ಕೃಷ್ಣನು ಮುಂದಿನ ಅಧ್ಯಾಯಗಳಲ್ಲಿ ಸಮಾಧಾನವನ್ನು ಹೇಳಿದ್ದಾನೆ:

"ಈ ಜನ್ಮದಲ್ಲಿ ಸ್ವಲ್ಪವಾಗಿ ಧರ್ಮ ಮಾಡಿದ ಪುರುಷನು ಬರುವ ಜನುಮದಲ್ಲಿ ಸತ್ಕುಲ ಪ್ರಸೂತನಾಗಿ ಸಜ್ಜನರ ಸಂಗದಿಂದ ಬಾಲ್ಯದಲ್ಲಿಯೇ ಧರ್ಮವನ್ನು ಆರಂಭಿಸಿ ಇದಕ್ಕಿಂತ ಹೆಚ್ಚಿನ ಧರ್ಮವನ್ನು ಅನುಷ್ಠಾನ ಮಾಡಿ ಅದರ ಬಲದಿಂದ ಇನ್ನು ಹೆಚ್ಚು ಅಭ್ಯಾಸ ಮಾಡಿ, ಇದೇ ರೀತಿ ಅನೇಕ ಜನುಮಗಳಲ್ಲಿ ಸಿದ್ಧಿ ಹೊಂದಿ ಮಹಾಫಲವಾದ ಮೋಕ್ಷವನ್ನು ಹೊಂದುತ್ತಾನೆ" ಎಂದು ಶ್ರೀಕೃಷ್ಣನ ಅಭಿಪ್ರಾಯ.

ಅರ್ಜುನನು ಪ್ರಶ್ನೆ ಮಾಡುತ್ತಾನೆ: "ಎಲೋ ಶ್ರೀಕೃಷ್ಣನೇ! ನೀನು ನಿಷ್ಕಾಮ ಕರ್ಮವನ್ನು ಜ್ಞಾನೋಪಾಯವೆಂದು ಹೇಳುತ್ತಿ. ಇತರ ವಾದಿಗಳು ಬೇರೆ ಬೇರೆ ಜ್ಞಾನೋಪಾಯಗಳನ್ನು ಹೇಳುತ್ತಿದ್ದಾರೆ. ಹೀಗಿರುವಾಗ ನೀನು ಹೇಳಿದ್ದರಲ್ಲಿಯೇ ವಿಶ್ವಾಸವಿಡುವುದು ಹೇಗೆ? ಅವರು ಹೇಳಿದ ದಾರಿಗಳೇ ಜ್ಞಾನೋಪಾಯಗಳೇಕಾಗಬಾರದು?" ಇದಕ್ಕೆ ಶ್ರೀಕೃಷ್ಣನು ಸಮಾಧಾನವನ್ನು ಹೇಳುತ್ತಾನೆ:

"ನಿಷ್ಕಾಮಕರ್ಮವೇ ಜ್ಞಾನೋಪಾಯ ಎಂಬುದು ವೇದಾದಿಶಾಸ್ತ್ರಗಳ ಆಧಾರ-ದಿಂದ ನಿರ್ಣಯಿಸಲ್ಪಟ್ಟಿದೆ. ಯಾವುದೇ ಶಾಸ್ತ್ರದ ಆಧಾರವಿಲ್ಲದೇ ತಮ್ಮ ಬುದ್ಧಿಕಲ್ಪಿತವಾದ ಜ್ಞಾನೋಪಾಯವನ್ನು ಅನೇಕರು ಅನೇಕ ರೀತಿ ಹೇಳಬಹುದು. ಒಬ್ಬರು ಹೇಳಿದ್ದಕ್ಕೆ ಮತ್ತೊಬ್ಬರು ವಿರುದ್ಧ ಹೇಳುತ್ತಿದ್ದರೆ ಅವುಗಳಿಗೆ ಪ್ರಮಾಣದ ಆಧಾರ ಇಲ್ಲದ್ದರಿಂದ ಅವುಗಳಲ್ಲಿ ವಿಶ್ವಾಸ ಮಾಡದೇ ಪ್ರಮಾಣಗಳ ಆಧಾರದಲ್ಲಿ ನಾನು ಹೇಳುವ ನಿಷ್ಕಾಮಕರ್ಮಯೋಗದ ಮಾರ್ಗದಲ್ಲಿಯೇ ವಿಶ್ವಾಸವಿಡು."

ಇಷ್ಟು ಹೇಳಿದಾಗ ಪುನಃ ಅರ್ಜುನನು ಪ್ರಶ್ನೆ ಮಾಡುತ್ತಾನೆ: "ವೇದದ ಆಧಾರದಿಂದಲೇ ಮೀಮಾಂಸಕರು ಕಾಮ್ಯಕರ್ಮವು ಶ್ರೇಯಸ್ಸಿನ ಮಾರ್ಗವೆಂದು ಹೇಳುತ್ತಿದ್ದಾರೆ. ನೀನು ಮತ್ತು ಮೀಮಾಂಸಕರು ಇಬ್ಬರೂ ವೇದದ

ಆಧಾರದಿಂದಲೇ ನಿಷ್ಕಾಮಕರ್ಮ ಮತ್ತು ಕಾಮ್ಯಕರ್ಮವೆಂಬ ಎರಡು ವಿರುದ್ಧ ಮಾರ್ಗಗಳನ್ನು ಹೇಳುತ್ತಿರುವಾಗ, ಯಾವುದರಲ್ಲಿ ವಿಶ್ವಾಸ ಮಾಡಬೇಕು?"

ಅದಕ್ಕೆ ಶ್ರೀಕೃಷ್ಣಪರಮಾತ್ಮನು ಉತ್ತರವನ್ನು ಹೇಳುತ್ತಾನೆ: "ಅರ್ಜುನಾ! ಮೀಮಾಂಸಕರು ಕಾಮ್ಯಕರ್ಮವನ್ನು ಶ್ರೇಯೋಮಾರ್ಗವೆಂದು ವೇದದ ಆಧಾರವನ್ನು ಕೊಟ್ಟು ಹೇಳುವುದೇನೋ ನಿಜ. ಆದರೆ ಅವರು ವೇದದ ಮುಖ್ಯ ತಾತ್ಪರ್ಯ ಪರಬ್ರಹ್ಮನೆಂದೂ, ಮೋಕ್ಷಕ್ಕೆ ಸಾಧನವಾದುದು ನಿಷ್ಕಾಮಕರ್ಮ ಎಂಬುದನ್ನೂ ತಿಳಿಯಲಿಲ್ಲ. ವೇದದಲ್ಲಿ ವಿಚಾರ ಮಾಡದೇ ಮೇಲೆ ಮೇಲೆ ನೋಡುವಾಗ ತೋರತಕ್ಕ ಅಮುಖ್ಯಾರ್ಥವನ್ನು ಇಟ್ಟುಕೊಂಡು, ಅವರು ಕಾಮ್ಯಕರ್ಮವನ್ನು ಪ್ರತಿಪಾದಿಸುತ್ತಾರೆ. ಕಾಮ್ಯಕರ್ಮಫಲವಾದ ಸ್ವರ್ಗವು ಮರದ ಹೂವಿದ್ದಂತೆ, ಮೋಕ್ಷವು ಹಣ್ಣಿನಂತೆ. ಅಂದರೆ ಕಾಮ್ಯಕರ್ಮದಿಂದ ಸ್ವರ್ಗವಾಗಬಹುದು. ಆದರೆ ಪುನಃ ಭೂಮಿಯಲ್ಲಿ ಹುಟ್ಟಬೇಕು. ಸಂಸಾರಬಂಧವು ಕಾಮ್ಯಕರ್ಮಗಳಿಂದ ತಪ್ಪುವುದಿಲ್ಲ. ಇಂತಹ ಸಂಸಾರ ಬಂಧಕ್ಕೆ ಕಾರಣವಾದ ಕಾಮ್ಯಕರ್ಮವನ್ನು ಅನಿತ್ಯ ಸುಖಭೋಗಕ್ಕೋಸ್ಕರವಾಗಿ ಹೇಳುತ್ತಿದ್ದಾರೆ. ಅವರು ಅನಿತ್ಯವಾದ ಸುಖದ ಭೋಗದಲ್ಲಿ ಆಸಕ್ತರಾದುದರಿಂದ ಅದಕ್ಕೇ ಸರಿಯಾದ ಅರ್ಥವನ್ನು ವೇದಕ್ಕೆ ಮಾಡಿಕೊಳ್ಳುತ್ತಾರೆ.

ಒಬ್ಬ ಉಪಾಧ್ಯಾಯರಿಗೆ ಅನೇಕ ಸ್ವಭಾವದ ಅನೇಕ ವಿದ್ಯಾರ್ಥಿಗಳಿದ್ದರು. ಅವರಿಗೆ ಸಾಯಂಕಾಲದಲ್ಲಿ ಸಂಧ್ಯಾವಂದನೆ ಮಾಡಬೇಕೆಂಬ ಅಭಿಪ್ರಾಯದಿಂದ ಉಪಾಧ್ಯಾಯನು 'ಸೂರ್ಯಾಸ್ತವಾಯಿತು' ಎಂದು ಹೇಳಿದನು. ಅಭಿಪ್ರಾಯವನ್ನು ತಿಳಿದು ಒಬ್ಬ ಸಂಧ್ಯಾವಂದನೆಗೆ ಹೋದ. ಮತ್ತೊಬ್ಬ ಕಳ್ಳತನಕ್ಕೆ ಹೊರಟ. ಚೌರ್ಯದಲ್ಲಿ ಅವನ ಮನಸ್ಸು ಆಸಕ್ತವಾದ್ದರಿಂದ ಗುರುಗಳು ಚೌರ್ಯ ಮಾಡಲು ಸಮಯ ಪ್ರಾಪ್ತವಾಯಿತೆಂದು ತಿಳಿದು ಹೇಳಿದರೆಂದು ಅದಕ್ಕಾಗಿ ಹೊರಟನು.

ಅದೇ ರೀತಿ ವಿಷಯಸುಖದಲ್ಲಿ ಆಸಕ್ತರಾದವರಿಗೆ ವೇದವು ಕಾಮ್ಯಕರ್ಮ ಮೊದಲಾದವುಗಳಿಂದ ಉಂಟಾಗುವ ಅನಿತ್ಯ ಸುಖವನ್ನು ಬೋಧಿಸುತ್ತದೆಂದು ತಿಳಿಯುತ್ತಾರೆ. ಸಾತ್ವಿಕ ಜೀವರುಗಳು ವಿಷಯದಲ್ಲಿ ವಿರಕ್ತರಾದುದರಿಂದ ಆ ಅರ್ಥವನ್ನು ತಿಳಿದುಕೊಳ್ಳದೇ ವೇದದಲ್ಲಿ ಗೂಢವಾದ ಮುಖ್ಯ ತಾತ್ಪರ್ಯವಾದ

ಪರಬ್ರಹ್ಮನೆಂಬ ಅರ್ಥವನ್ನು ಮೋಕ್ಷವೆಂಬ ಮಹಾಫಲವನ್ನು, ಅದಕ್ಕೆ ಸಾಧನವಾದ ನಿಷ್ಕಾಮಕರ್ಮವನ್ನು ವೇದದಿಂದ ತಿಳಿದುಕೊಳ್ಳುತ್ತಾರೆ.

ಯಾರಿಗೆ ವಿಷಯದಲ್ಲಿ ಆಸಕ್ತಿಯಿದೆಯೋ ಅವರಿಗೆ ಪರಮಾತ್ಮನಲ್ಲಿ ಮನಸ್ಸು ಹೋಗಲಾರದು. ಅದಕ್ಕಾಗಿ 'ಯಮದೇವರು ನಚಿಕೇತನಿಗೆ ವಿಷಯಾಸಕ್ತಿ ಉಂಟೋ ಎಂದು ಬಹಳವಾಗಿ ಪರೀಕ್ಷಿಸಿದರು. ನಿನಗೆ ಬೇಕಾದ ಭೋಗಸಾಧನಗಳನ್ನು ಕೊಡುತ್ತೇನೆ, ಬೇಕಾದಷ್ಟು ಆಯುಷ್ಯ ಕೊಡುತ್ತೇನೆಂದು ಅನೇಕ ರೀತಿಯಿಂದ ಎಷ್ಟು ಪ್ರಲೋಭನ ಮಾಡಿದರೂ, ನಚಿಕೇತನು ತನಗೆ ಸರ್ವಥಾ ಬೇಡವೆಂದು ಹೇಳಿದನು. ಮುಕ್ತ ನಿಯಾಮಕ ಭಗವತ್ಸ್ವರೂಪವನ್ನೇ ತನಗೆ ಉಪದೇಶಬೇಕೆಂದು ಕೇಳಿದನು. ಆನಂತರ ಅವನಿಗೆ ಯಮದೇವರು ಭಗವತ್ಸ್ವರೂಪವನ್ನು ಚೆನ್ನಾಗಿ ಉಪದೇಶಿಸಿದರು' ಎಂದು ಕಾಠಕೋಪನಿಷತ್ತಿನಲ್ಲಿ ವರ್ಣಿತವಾಗಿದೆ ಎಂಬ ಅಭಿಪ್ರಾಯವನ್ನು ಇಟ್ಟುಕೊಂಡು ಶ್ರೀಕೃಷ್ಣನು ಅರ್ಜುನನಿಗೆ ಸಮಾಧಾನವನ್ನು ಹೇಳಿದನು.

ಮುಂದುವರಿಸಿ ಶ್ರೀಕೃಷ್ಣನು ಅರ್ಜುನನಿಗೆ ಹೇಳುತ್ತಾನೆ: "ಎಲೋ ಅರ್ಜುನಾ! ನೀನು ವೇದಗಳಲ್ಲಿ ಮೇಲೆ ಮೇಲೆ ತೋರುವ ಕಾಮ್ಯಕರ್ಮವೆಂಬ ಮಾರ್ಗವನ್ನು ಬಿಟ್ಟು, ವಿಷಯಸುಖದಲ್ಲಿ ಆಸಕ್ತನಾಗದೇ, ಸುಖ-ದುಃಖಾದಿಗಳನ್ನು ಸಮನಾಗಿ ತಿಳಿದು ನಿತ್ಯದಲ್ಲಿಯೂ ಸದ್ಗುಣೋಪೇತನಾದ ಪರಮಾತ್ಮನಲ್ಲಿ ಆಸಕ್ತನಾಗಿ, ಸಾಂಸಾರಿಕ ಯೋಗ-ಕ್ಷೇಮ ವಿಚಾರದಲ್ಲಿ ಶಾಸ್ತ್ರವಿರೋಧ ಬಾರದ ರೀತಿಯಲ್ಲಿ ಇರತಕ್ಕವನಾಗಿ ಪರಮಾತ್ಮನನ್ನು ಸ್ವಾಮಿಯೆಂತೆಂದು ಧ್ಯಾನ ಮಾಡುವವನಾಗಿ ಇರು. ಕಾಮ್ಯ ಕರ್ಮಾನುಷ್ಠಾನ ಮಾಡುವವರಿಗಿರುವ ಸುಖ ಇಲ್ಲಿ ಇಲ್ಲದಿದ್ದರೂ, ನಿಷ್ಕಾಮಕರ್ಮಕ್ಕೆ ನ್ಯೂನತೆ ಇಲ್ಲ. ಈ ಯೋಗದಿಂದಾಗುವ ಮಹಾಫಲವಾದ ಮೋಕ್ಷದಲ್ಲಿ ಇತರ ಎಲ್ಲಾ ಫಲಗಳೂ ಅಂತರ್ಭೂತ-ವಾಗುತ್ತವೆ. ಸಣ್ಣ ಜಲಾಶಯದಿಂದ ಆಗತಕ್ಕ ಪ್ರಯೋಜನವು ದೊಡ್ಡಸರೋವರದ ಜಲಾಶಯದಿಂದ ಆಗುವ ಮಹಾ ಪ್ರಯೋಜನದಲ್ಲಿ ಅಂತರ್ಭೂತವಾಗುವಂತೆ ಇದನ್ನು ತಿಳಿಯಬೇಕು.

ಸಮಸ್ತ ವೇದಗಳನ್ನು ವಿಚಾರ ಮಾಡಿ ವಿಶೇಷವಾದ ಜ್ಞಾನವಳ್ಳವನಾದ ಬ್ರಹ್ಮಜ್ಞಾನಿಯಾದ ಕಾರಣ ಬ್ರಾಹ್ಮಣನೆಂದು ಹೇಳಿಸಿಕೊಳ್ಳುವನಿಗೇನೆ, ಸರ್ವೋ-ತ್ಕೃಷ್ಟನಾದ ತನ್ನನ್ನೂ ಪಾಲಿಸಲು ಇನ್ನೊಬ್ಬರು ಇಲ್ಲದಿರುವ ಸರ್ವಶ್ರೇಷ್ಟಕನಾದ ಪರಮಾತ್ಮನು ಪ್ರಸನ್ನನಾದರೆ ಆಗತಕ್ಕ ಎಲ್ಲ ಫಲಗಳು ಸುಲಭವಾಗಿ ದೊರೆಯುತ್ತವೆ. ವೇದಾರ್ಥ ವಿಚಾರದಿಂದ ಜ್ಞಾನರಹಿತರಾದವರಿಗೆ ಪರಮಾತ್ಮನ ಪ್ರಸಾದದಿಂದ ಉಂಟಾಗುವ ಯಾವ ಫಲವೂ ಸಿಗಲಾರದು. ಆದುದರಿಂದ ವೇದದ ಗೂಢಾರ್ಥವನ್ನು ವಿಚಾರಿಸಿ ಜ್ಞಾನ ಸಂಪಾದಿಸು.

ವೇದದಲ್ಲಿ ಸ್ವರ್ಗ, ಕಾಮ್ಯ ಇತ್ಯಾದಿ ಶಬ್ದಗಳು ಇರುವುದರಿಂದ 'ಸ್ವರ್ಗಾದಿ ಫಲವನ್ನು ಅಪೇಕ್ಷಿಸಬೇಕು' ಎಂದೂ, 'ಫಲಕಾಮನೆಯನ್ನು ಶಾಸ್ತ್ರವು ವಿಧಿಸುತ್ತಿದೆ' ಎಂದೂ ತಿಳಿದುಕೊಳ್ಳಬೇಡ. ವೇದವು ಫಲಕಾಮನೆಯನ್ನು ವಿಧಾನ ಮಾಡಲಿಲ್ಲ. ಫಲಕಾಮನೆಯನ್ನು ಅನುವಾದ ಮಾಡಿ ಕರ್ಮವನ್ನು ಮಾತ್ರ ವಿಧಾನಮಾಡುತ್ತದೆ. ಹೀಗೇ ಯಾಕೆ ಅರ್ಥಮಾಡಬೇಕು ಎಂದರೆ, ಕರ್ಮಾನುಷ್ಠಾನ ಮಾಡದಿದ್ದವನಿಗೆ ನರಕಾದ್ಯನರ್ಥವನ್ನು ವೇದವು ಹೇಳುತ್ತದೆ. ಫಲಕಾಮನೆಯನ್ನು ಮಾಡದಿದ್ದವನಿಗೆ ಅನರ್ಥವನ್ನು ಹೇಳುವುದಿಲ್ಲ. ಆದುದರಿಂದ ಫಲಕಾಮನೆಯನ್ನು ವಿಧಿಸುವುದು ವೇದದ ಉದ್ದೇಶವಲ್ಲ. ಕರ್ಮ ಮಾಡದೆ ಇದ್ದರೇ ವೇದವು ಅನರ್ಥ ಹೇಳಿದ ಕಾರಣ, ಕರ್ಮವಿಧಿಯಲ್ಲಿಯೇ ತಾತ್ಪರ್ಯವೆಂದು ತಿಳಿದು ನೀನು ಕಾಮ್ಯಕರ್ಮವನ್ನು ಮಾಡದೇ ಭಗವತ್ಪ್ರೀ-ತ್ಯರ್ಥವಾಗಿ ಕರ್ಮವನ್ನು ಅನುಷ್ಠಾನ ಮಾಡು. ಫಲವನ್ನು ಕಾಮಿಸಬಾರದೆಂದರೆ ಅನಿತ್ಯ ಸುಖವೆಂಬ ಫಲವನ್ನು ಅಪೇಕ್ಷಿಸಬಾರದೆಂದು ಅಭಿಪ್ರಾಯ. ನಿತ್ಯ ಸುಖವನ್ನು, ಅದಕ್ಕೆ ಸಾಧನವಾದ ಭಗವಂತನ ಪ್ರೀತಿಯನ್ನು, ಜ್ಞಾನಭಕ್ತ್ಯಾದಿ ಗುಣಗಳನ್ನು ಕಾಮನಾ ಮಾಡಿ ಕರ್ಮ ಮಾಡಿದರೆ ತಪ್ಪಿಲ್ಲ. ಶಾಸ್ತ್ರ ಅವಿರುದ್ಧ ಕಾಮನಾ ಮಾಡಿದ ಪ್ರಯುಕ್ತ, ಈ ಕರ್ಮಕ್ಕೆ ನಿಷ್ಕಾಮ ಕರ್ಮ ಎಂದೇ ಹೆಸರು. 'ನಾನು ಒಬ್ಬ ದೇವತೆಯಾಗಬೇಕು, ಋಷಿಯಾಗಬೇಕು, ಗಂಧರ್ವನಾಗಬೇಕು, ಪರಬ್ರಹ್ಮನಾಗಬೇಕು' ಇತ್ಯಾದಿ ಅಯೋಗ್ಯ ಇಚ್ಛೆಯು ಶಾಸ್ತ್ರ ನಿಷಿದ್ಧ. ಇಂತಹ ನಿಷಿದ್ಧ ಕಾಮನೆ ಬಿಟ್ಟವನು ಅಕಾಮನೆಂದೇ ಹೇಳಲ್ಪಡುತ್ತಾನೆಂದು

**"ಅತೋऽವಿರುದ್ಧಕಾಮಃ ಸ್ಯಾತ್ ಅಕಾಮಸ್ತೇನ ಭಣ್ಯತೇ"** ಇತ್ಯಾದಿ ಪ್ರಮಾಣಗಳು ಹೇಳುತ್ತವೆ.

ಆದುದರಿಂದ ಭಗವತ್ಪ್ರೀತ್ಯರ್ಥವಾಗಿ ಕರ್ಮ ಮಾಡದೇ ಇರುವುದರಲ್ಲಿ ಆಸಕ್ತಿಯು ಬರಬಾರದು. ಮತ್ತು ನಾನು ಪರಮಾತ್ಮನೆಂದೇ ಜ್ಞಾನಮಾಡಿದರೆ ಮಿಥ್ಯೋಪಾಸನೆಯಾಗುವದು. ಮಿಥ್ಯೋಪಾಸನೆಯಿಂದ ಅನರ್ಥ ಪ್ರಾಪ್ತಿಯಾಗು-ತ್ತದೆ. ನಾನು ಈಶ್ವರನೆಂಬ ಉಪಾಸನೆಯು ಮಿಥ್ಯೋಪಾಸನೆ. ಯಾಕೆಂದರೆ, ಜೀವನು ಕರ್ಮಾನುಷ್ಠಾನಕ್ಕೆ ಅರ್ಹನು. ಪರಮಾತ್ಮನು ಫಲ ಕೊಡಲಿಕ್ಕೆ ಸಮರ್ಥನು, ಫಲ ಕೊಡುವ ಸಾಮರ್ಥ್ಯ ಜೀವನಿಗಿಲ್ಲ. ಕರ್ಮ ವಿಧಿಯು ಪರಮಾತ್ಮನಿಗೆ ಇಲ್ಲ. ಈ ತರಹದ ವಿರುದ್ಧ ಧರ್ಮವುಳ್ಳ ಜೀವೇಶ್ವರರು ಒಂದೇ ಆಗಲಾರರು. ಆದುದರಿಂದ ಕರ್ಮಫಲಕ್ಕೆ ಕಾರಣನಾದ ಈಶ್ವರನೇ ನಾನೆಂದು ಉಪಾಸನೆಯ ಮಾಡುವುದು ಮಿಥ್ಯೋಪಾಸನೆಯಾಗುವುದು. ಆದುದರಿಂದ ಅನರ್ಥಫಲವಾಗುವುದೆಂದು ಬ್ರಹ್ಮಸೂತ್ರದಲ್ಲಿ ನಿರ್ಣಯಿಸಲ್ಪಟ್ಟಿದೆ. ಆದುದರಿಂದ ಹಿಂದೆ ಹೇಳಿದ ಪ್ರಕಾರ ಪರಮಾತ್ಮನನ್ನು ಸ್ವಾಮಿಯೆಂದೇ ಉಪಾಸನೆ ಮಾಡು.

ಸ್ವಾಮಿಯೆಂದು ಉಪಾಸನೆ ಮಾಡುತ್ತ ಕರ್ಮವನ್ನು ಮಾತ್ರ ಬಿಟ್ಟು ಬಿಡಬೇಡ ಅಥವಾ ಕರ್ಮವನ್ನು ಮಾಡುತ್ತ ಪರಮಾತ್ಮನನ್ನು ಸ್ವಾಮಿಯು ಎಂಬ ಉಪಾಸನೆ ಮಾಡದೇ ಇರಬೇಡ. ಎರಡೂ ಅಂದರೆ ಕರ್ಮವು ಮತ್ತು ಪರಮಾತ್ಮನು ಸ್ವಾಮಿಯೆಂಬ ಉಪಾಸನೆಯು ಅವಶ್ಯ ಕರ್ತವ್ಯವಾಗಿದೆ. (ಆರನೆ ದಿನದ ಉಪನ್ಯಾಸವು ಮುಗಿಯಿತು.)

***

ಶ್ರೀಕೃಷ್ಣನು ಅರ್ಜುನನಿಗೆ ನಿಷ್ಕಾಮಕರ್ಮದ ಸ್ವರೂಪವನ್ನು ಹೇಳುತ್ತಾನೆ: "ಎಲೋ ಅರ್ಜುನಾ! ನೀನು ಜ್ಞಾನೋಪಾಯದಲ್ಲಿ ಆಸಕ್ತನಾಗಿ ಕರ್ಮದ ಫಲದಲ್ಲಿ ಆಸಕ್ತಿಯನ್ನು ಬಿಟ್ಟು ಕರ್ಮ ಮಾಡು. ಕರ್ಮದ ಫಲ ಪ್ರಾಪ್ತವಾಗಲಿ ಅಥವಾ ಆಗದೇ ಇರಲಿ, ನಿರ್ವಿಕಾರ ಚಿತ್ತನಾಗಿರು. ಇದೇ ನಿನಗೆ

ಜ್ಞಾನೋಪಾಯವಾಗಿದೆ. ಈ ರೀತಿ ನಿಷ್ಕಾಮ ಕರ್ಮ ಮಾಡುವವನ ಮೇಲೆ ಪರಮಾತ್ಮನು ಅತ್ಯಂತ ಪ್ರೀತನಾಗುತ್ತಾನೆ.''

ಇದಕ್ಕೆ ಲೋಕದಲ್ಲೂ ದೃಷ್ಟಾಂತವಿದೆ. ಒಬ್ಬನು ಸ್ವಾರ್ಥಕ್ಕೋಸ್ಕರವಾಗಿ ಯಜಮಾನನ ಸೇವೆಯನ್ನು ಮಾಡುತ್ತಿದ್ದಾನೆ. ಮತ್ತೊಬ್ಬನು ನಿನ್ನ ಸೇವೆಯೇ ನನಗೆ ಯಾವಾಗಲೂ ಬೇಕಾದದ್ದೆಂದು ಹೇಳುತ್ತಾ ನಿಸ್ವಾರ್ಥ ಬುದ್ಧಿಯಿಂದ ಯಜಮಾನನನ್ನು ಸೇವಿಸುತ್ತಿದ್ದಾನೆ. ಸ್ವಾರ್ಥ ಸೇವಕನ ದೆಸೆಗಿಂತಲೂ, ನಿಸ್ವಾರ್ಥ ಸೇವಕನ ಮೇಲೆ ಯಜಮಾನನಿಗೆ ತನ್ನನ್ನೇ ಅವನಿಗೆ ಕೊಡುವಷ್ಟು ಪ್ರೇಮವು ಉತ್ಪನ್ನವಾಗುತ್ತದೆ. ಇದೇ ರೀತಿ ಪರಮಾತ್ಮನು ನಿಷ್ಕಾಮ ಕರ್ಮದಿಂದ ಅತ್ಯಂತ ಸಂತುಷ್ಟನಾಗುತ್ತಾನೆ. ಆದುದರಿಂದ ನಿಷ್ಕಾಮಕರ್ಮಗಳಲ್ಲಿ ಅಗ್ರೇಸರನಾದ ಹನಮಂತನಿಗೆ ಶ್ರೀರಾಮಚಂದ್ರನು ಸ್ವಾತ್ಮಪ್ರದಾನವನ್ನು ಮಾಡಿದ್ದಾನೆ. ಕಾಮ್ಯ-ಕರ್ಮವೆಂದರೆ ಅದೊಂದು ದೇವರಲ್ಲಿಯ ವ್ಯಾಪಾರ. ನಿಜವಾದ ಸ್ವಾಮಿ-ಭೃತ್ಯಭಾವವಲ್ಲ.

ಫಲದಲ್ಲಿ ಆಸಕ್ತಿಯನ್ನು ಬಿಡಬೇಕೆಂದರೆ ಕೆಲವು ಭಾಷ್ಯಕಾರರು "**ಈಶ್ವರೋ ಮೇ ತುಷ್ಯತು** = ಈಶ್ವರನು ನನಗೆ ಪ್ರೀತನಾಗಲಿ'' ಎಂಬ ಇಚ್ಛೆಯನ್ನು ಸಹ ಬಿಟ್ಟು ಕರ್ಮ ಮಾಡಬೇಕು. ಇದೇ ನಿಷ್ಕಾಮಕರ್ಮವೆಂದು ಬರೆಯುತ್ತಾರೆ. ಅದು ಯುಕ್ತವಲ್ಲ. ಈಶ್ವರನ ಪ್ರೀತಿಯನ್ನು ಅಪೇಕ್ಷಿಸುವುದು ಶಾಸ್ತ್ರವಿಹಿತವಾದದ್ದು. ಈಶ್ವರನ ಜ್ಞಾನ, ಅವನಲ್ಲಿ ಭಕ್ತಿ, ಅವನ ಅನುಗ್ರಹ ಇವುಗಳನ್ನು ಕೇಳಲೇಬೇಕು. ಆದುದರಿಂದಲೇ ಹನುಮಂತನು ಶ್ರೀರಾಮಚಂದ್ರನಲ್ಲಿ "**ಪ್ರವರ್ಧತಾಂ ಭಕ್ತಿರಲಂ ಕ್ಷಣೇಕ್ಷಣೇ** = ಯಾವಾಗಲೂ ನಿನ್ನಲ್ಲಿ ಭಕ್ತಿಯು ಅಭಿವೃದ್ಧಿಯಾಗುತ್ತ ಇರಲಿ.'' "**ಅನುಗ್ರಹಸ್ತೇ ಮಯಿ** = ನಿನ್ನ ಮುಖ್ಯವಾದ ಅನುಗ್ರಹವು ನನ್ನಲ್ಲಿರಲಿ'' ಎಂದು ಪ್ರಾರ್ಥಿಸಿದ್ದಾನೆ. ಆದುದರಿಂದ ಫಲ ಸ್ನೇಹವನ್ನು ಬಿಡಬೇಕೆಂದರೆ ಸ್ವರ್ಗ, ಸಾಂಸಾರಿಕ ಸುಖ ಮೊದಲಾದ ಫಲದ ಅಪೇಕ್ಷೆಯನ್ನು ಬಿಟ್ಟು ಈಶ್ವರ ಪ್ರೀತ್ಯರ್ಥವಾಗಿ ಕರ್ಮ ಮಾಡಬೇಕೆಂದು ತಿಳಿಯಬೇಕು. ಇದೇ ಶ್ರೀಕೃಷ್ಣನ ಅಭಿಪ್ರಾಯ.

ಮುಂದೆ, ಶ್ರೀಕೃಷ್ಣನು ಕಾಮ್ಯಕರ್ಮವನ್ನು ನಿಂದಿಸುತ್ತಿದ್ದಾನೆ: "ಎಲೋ ಅರ್ಜುನಾ! ಕಾಮ್ಯಕರ್ಮವು ಅತ್ಯಂತ ನಿಕೃಷ್ಟವಾದದ್ದು. ಕಾಮ್ಯ ಕರ್ಮ ಮಾಡಿದವರು ಸ್ವಲ್ಪ ಕಾಲ ಸ್ವರ್ಗಾದಿ ಸುಖವನ್ನನುಭವಿಸಿದರೂ, ಅನಂತರ ಕರ್ಮಾನುಸಾರ ಈ ಮನುಷ್ಯಲೋಕಕ್ಕಾಗಲೀ, ನರಕಾದಿಲೋಕಕ್ಕಾಗಲೀ ಹೋಗಿ ದುಃಖವನ್ನು ಅನುಭವಿಸುತ್ತಾರೆ. ಆದ್ದರಿಂದ ಕಾಮ್ಯಕರ್ಮಿಗಳು ಕೃಪಾವಿಷಯ-ರಾಗಿದ್ದಾರೆ. ನಿಷ್ಕಾಮಕರ್ಮಿಯು ಬ್ರಹ್ಮ ಸಾಕ್ಷಾತ್ಕಾರವನ್ನು ಹೊಂದಿ ಅನಾದ್ಯನಂತ ಜನುಮದಲ್ಲಿ ಮಾಡಿದ ಸುಕೃತ, ದುಷ್ಕೃತಗಳನ್ನು ಪರಿತ್ಯಾಗ ಮಾಡಿ, ಜನ್ಮ ಬಂಧನದಿಂದ ಬಿಡುಗಡೆಯನ್ನು ಹೊಂದಿ, ವಿಷ್ಣುವಿನ ಸ್ಥಾನಕ್ಕೆ ಹೋಗಿ ಸೇರುತ್ತಾರೆ. ಆದುದರಿಂದ ನಿಷ್ಕಾಮ ಕರ್ಮವು ಬಹಳ ಶ್ರೇಷ್ಠವಾದದ್ದು."

ಬ್ರಹ್ಮಜ್ಞಾನಿಯಾದವನು ದುಷ್ಕೃತವನ್ನು ಬಿಡುವಂತೆ ಸುಕೃತವನ್ನು ಬಿಡಲು ಕಾರಣವೇನು? ಎಂದು ಕೇಳಿದರೆ, ಸುಕೃತದಲ್ಲಿ ಎರಡು ವಿಭಾಗಗಳಿವೆ. ಕೆಲವು ಮೋಕ್ಷಕ್ಕೆ ಕಾರಣವಾದ ಸುಕೃತ, ಕೆಲವು ಸ್ವರ್ಗಾದಿ ಸುಖ ಅನುಭವಿಸಲಿಕ್ಕೆ ಕಾರಣವಾದ ಸುಕೃತ. ಸ್ವರ್ಗಾದಿಕಾರಣವಾದ ಸುಖವು ಪ್ರಾಯಃ ಅವನಿಗೆ ಅನಿಷ್ಟವಾದುದರಿಂದ, ಅಂದರೆ ಮೋಕ್ಷಕ್ಕೆ ಹೋಗಲು ಅದು ವಿಲಂಬ ಮಾಡುವುದರಿಂದ, ಅದನ್ನು ತನ್ನವರಿಗೆ ಕೊಟ್ಟು ಬಿಡುತ್ತಾನೆ. ತನಗೆ ಇಷ್ಟವಾದ ಸುಕೃತವನ್ನು ಬಿಡುವುದಿಲ್ಲ. ಪರಮಾತ್ಮನು ಅದನ್ನು ನಾಶ ಮಾಡುವದಿಲ್ಲ. ಸ್ವರ್ಗಾದಿ ಸುಖವು ಬ್ರಹ್ಮಜ್ಞಾನಕ್ಕಿಂತ ಮೊದಲು ಅವನಿಗೆ ಇಷ್ಟವಾಗಿತ್ತು. ಬ್ರಹ್ಮಜ್ಞಾನ ಬಂದಮೇಲೆ ಅವನಿಗೆ ಬೇಡವೆಂದು ಕಾಣುತ್ತದೆ. ಆದುದರಿಂದ ಅದನ್ನು ಬಿಟ್ಟು ಮೋಕ್ಷಸುಖಕ್ಕೆ ಕಾರಣವಾದ ಸುಕೃತದಿಂದ ಕೂಡಿಕೊಂಡು ಮೋಕ್ಷಕ್ಕೆ ಹೋಗುತ್ತಾನೆಂದು ಅಭಿಪ್ರಾಯವು.

ಇದಕ್ಕೆ ದೃಷ್ಟಾಂತ: ಒಬ್ಬ ಪ್ರಯಾಣಿಕನು ಮಧ್ಯದಲ್ಲಿ ಬಂದು ವಸತಿ ಮಾಡಿದಾಗ ತನ್ನ ಭೋಜನಕ್ಕೆ ಬೇಕಾದ ಸಾಮಾನುಗಳನ್ನು ತಂದಿರುತ್ತಾನೆ. ಭೋಜನ ತೀರಿಸಿ ಹೋಗುವಾಗ, ಉಳಿದ ಕೆಲವು ಸಾಮಾನುಗಳನ್ನು, ಕಟ್ಟಿಗೆ, ಎಲೆ ಮುಂತಾದುವನ್ನು ಅಲ್ಲಿ ತನಗೆ ಬೇಕಾದವರಿಗೆ ಕೊಟ್ಟು, ಕೇಸರಿ, ಸಕ್ಕರೆ ಮೊದಲಾದ ತನಗೆ ಇಷ್ಟವಾದ ವಸ್ತುವನ್ನು ತೆಗೆದುಕೊಂಡು ಇನ್ನೊಂದು ಊರಿಗೆ

ಪ್ರಯಾಣ ಮಾಡುತ್ತಾನೆ. ಅದೇ ರೀತಿ ಬ್ರಹ್ಮಜ್ಞಾನಿಯು, ಕೆಲವು ಸುಕೃತವನ್ನು ಬಿಟ್ಟು, ಕೆಲವು ಸುಕೃತಗಳನ್ನು ತೆಗೆದುಕೊಂಡು ಹೋಗುತ್ತಾನೆಂದು ತಿಳಿಯಬೇಕು.

ನಿಷ್ಕಾಮಕರ್ಮವನ್ನು ಎಷ್ಟರವರೆಗೆ ಮಾಡಬೇಕೆಂದರೆ ಮನಸ್ಸಿನ ಶುದ್ಧಿ ಆಗುವತನಕ. ಅಂದರೆ ಮನಃಶುದ್ಧಿಗೆ ಕಾರಣವಾದ ನಿಷ್ಕಾಮಕರ್ಮವು ಮನಃ-ಶುದ್ಧಿಯವರೆಗೆ. ಮನಃಶುದ್ಧಿಯ ನಂತರದಲ್ಲಿ ಬ್ರಹ್ಮ ಸಾಕ್ಷಾತ್ಕಾರಕ್ಕೋಸ್ಕರ ಮಾಡತಕ್ಕ ನಿಷ್ಕಾಮ ಕರ್ಮವು ಸಾಕ್ಷಾತ್ಕಾರವಾಗುವವರೆಗೆ. ಬ್ರಹ್ಮಸಾಕ್ಷಾತ್ಕಾರ ನಂತರ ಮಾಡತಕ್ಕ ನಿಷ್ಕಾಮಕರ್ಮವು ಅಸಂಪ್ರಜ್ಞಾತ ಸಮಾಧಿವರೆಗೆಯೂ. ಅಸಂಪ್ರಜ್ಞಾತ ಸಮಾಧಿಯಿಂದ ನಿಷ್ಕಾಮಕರ್ಮದ ಫಲವು ಪೂರ್ಣವಾಯಿತು. ಮನಃಶುದ್ಧಿ ಎಂದರೆ ಮನಸ್ಸಿನಲ್ಲಿರತಕ್ಕ ರಾಗದ್ವೇಷಾದಿಗಳು ಇಲ್ಲದಂತಾಗಿ, ಶಾಸ್ತ್ರಗಳಲ್ಲಿ ಪರಸ್ಪರ ವಿರೋಧವು ತೋರದೇ, ತತ್ವವಿಷಯದಲ್ಲಿ ವಿಪರೀತ ಜ್ಞಾನವಾಗದಿರುವುದು. ಅಸಂಪ್ರಜ್ಞಾತ ಸಮಾಧಿ ಎಂದರೆ ಬ್ರಹ್ಮಸಾಕ್ಷಾತ್ಕಾರ ಆದ ಪುರುಷನು ಪರಬ್ರಹ್ಮನ ರೂಪವನ್ನು ಹೃದಯದಲ್ಲಿ ನೋಡುತ್ತಾ ಆನಂದ ಸಮುದ್ರದಲ್ಲಿ ಮಗ್ನನಾಗಿದ್ದು, ಅವನ ಸಮೀಪದಲ್ಲಿ ಭೇರಿತಾಡನ ಮಾಡಿದರೂ ಕೂಡ, ಅವನಿಗೆ ಎಚ್ಚರಿಕೆ ಆಗದಿರುವುದು.

ಇಷ್ಟು ಶ್ರೀ ಕೃಷ್ಣನು ಉಪದೇಶಿಸಿದ ಮೇಲೆ, ಅರ್ಜುನನು ಪ್ರಶ್ನೆ ಮಾಡುತ್ತಾನೆ: "ಇಂತಹ ಬ್ರಹ್ಮ ಸಾಕ್ಷಾತ್ಕಾರದಿಂದ ಮಹದಾನಂದವನ್ನು ಅನುಭವಿಸುವ ಶುಕಾಚಾರ್ಯರೇ ಮೊದಲಾದ ಮಹಾನುಭಾವರು ಗಮನಾದಿ ಕರ್ಮಗಳನ್ನು, ಇತರರೊಂದಿಗೆ ಸಂಭಾಷಣೆಗಳನ್ನು ಯಾವುದಕ್ಕೋಸ್ಕರ ಮಾಡು-ತ್ತಾರೆ? ಅಂತಹ ಮಹಾಜ್ಞಾನಿಗಳ ಲಕ್ಷಣವೇನು?" ಇದಕ್ಕೆ ಶ್ರೀಕೃಷ್ಣ ಪರ-ಮಾತ್ಮನು ಸಮಾಧಾನವನ್ನು ಹೇಳುತ್ತಾನೆ:

"ಬ್ರಹ್ಮಜ್ಞಾನಿಯಾದವನಿಗೂ ಪ್ರಾರಬ್ಧ ಕರ್ಮಕ್ಕನುಸಾರವಾಗಿ ಒಮ್ಮೊಮ್ಮೆ ಬ್ರಹ್ಮಸ್ವರೂಪವು ತಿರೋಹಿತವಾಗುವುದು. ಆವಾಗ ಭಿಕ್ಷಾದಿಗಳನ್ನು ಉದ್ದೇಶಿಸಿ ಅವರು ಇತರ ವ್ಯಾಪಾರಗಳನ್ನು ಮಾಡುತ್ತಾರೆ.

ಬ್ರಹ್ಮಸಾಕ್ಷಾತ್ಕಾರಿಗಳ ಲಕ್ಷಣವೇನೆಂದರೆ, ಪ್ರಾಯಶಃ ಸಮಸ್ತ ನಿಷಿದ್ಧ ಕರ್ಮಗಳನ್ನು ಪರಿತ್ಯಾಗಮಾಡಿ ಪರಮಾತ್ಮನಲ್ಲಿಯೇ ಆಸಕ್ತರಾಗಿ, ಆನಂದ-

ದಿಂದಲೇ ತೃಪ್ತರಾಗಿರುವುದು. ಸಾಂಸಾರಿಕ ಸುಖದಲ್ಲಿ ಇಚ್ಛೆಯೇ ಅವರಿಗಿಲ್ಲ. ದುಃಖ ಬಂದರೆ ಮನಸ್ಸಿಗೆ ವಿಕಾರವಿಲ್ಲ. ಸುಖ-ದುಃಖ ಕಾರಣಗಳಾದ ವಿಷಯಗಳು ಸಮೀಪಕ್ಕೆ ಬಂದರೂ ಅವರಿಗೆ ಸಂತೋಷ ಅಥವಾ ದ್ವೇಷ-ವಾಗುವುದಿಲ್ಲ. ಅವರಿಗೆ ಕಾಮವೂ ಇಲ್ಲದಂತಾಗಿರುತ್ತದೆ."

ಇಲ್ಲಿ ಕಾಮ ಎಂದರೆ ಮನಸ್ಸಿನಲ್ಲಿದ್ದ ಕಾಮವೆಂದು ಅರ್ಥ ಮಾಡಬೇಕು. ಕಾಮವು ಎರಡು ಪ್ರಕಾರವಾದದ್ದು. ಜೀವಸ್ವರೂಪಭೂತವಾದ ಕಾಮ ಒಂದು. ಮನೋಗತವಾದ ಕಾಮ ಇನ್ನೊಂದು. ಜೀವಸ್ವರೂಪಭೂತವಾದ ಕಾಮವು ಮೋಕ್ಷದಲ್ಲಿ ಚೆನ್ನಾಗಿ ಅಭಿವ್ಯಕ್ತವಾಗುತ್ತದೆ. **"ಸ ಯದಿ ಪಿತೃಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯ ಪಿತರಸ್ಸಮುತಿಷ್ಠಂತಿ** = ಮುಕ್ತನಿಗೆ ಯಾವುದೇ ಹಿಂದಿನ ಜನುಮದ ತನ್ನ ಪಿತೃಗಳನ್ನು ನೋಡಬೇಕೆಂದು ಇಚ್ಛೆಯಾದರೆ, ಸಂಕಲ್ಪ ಮಾತ್ರದಿಂದಲೇ ಪಿತೃಗಳು ಅಲ್ಲಿ ಬರುತ್ತಾರೆ'' ಎಂದು ಛಾಂದೋಗ್ಯ ಶ್ರುತಿಯಲ್ಲಿ ಹೇಳಿದೆ. ಆದ್ದರಿಂದ ಮೋಕ್ಷದಲ್ಲಿಯೂ ಕಾಮನೆ ಇದೆ ಎಂದು ತಿಳಿಯಿತು. ಅಲ್ಲಿಯ ಕಾಮಕ್ಕೂ, ಇಲ್ಲಿಯ ಕಾಮಕ್ಕೂ ಇಷ್ಟೇ ವ್ಯತ್ಯಾಸ. ಮುಕ್ತಿಯಲ್ಲಿ ಮಾಡಿದ ಕಾಮವು ಸಫಲವೇ ಆಗುತ್ತದೆ. ಇಲ್ಲಿ ಮಾಡಿದ ಕಾಮವು ಪ್ರಾಯಃ ವ್ಯರ್ಥವಾಗುತ್ತದೆ. ಮುಕ್ತಿಯಲ್ಲಿರುವ ಕಾಮವು ಜೀವಸ್ವರೂಪವಾದದ್ದೆಂದೇ ಹೇಳಬೇಕು. ಮನೋಗತವೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಮುಕ್ತಿಯಲ್ಲಿ ಮನಸ್ಸು, ದೇಹ ಮುಂತಾದ ಪ್ರಾಕೃತ ವಸ್ತುಗಳಿಲ್ಲ.

ಈಗ ಇರುವ ಕಾಮವು ಮನಸ್ಸಿನ ವಿಕಾರ. ಆ ಕಾಮವು ಮನೋಗತವಾದರೂ ಅದನ್ನು ಅನುಭವಿಸತಕ್ಕವನು ಜೀವನೇ ಆದ್ದರಿಂದ ಕಾಮವು ಜೀವನ ಧರ್ಮವೆಂದು ಹೇಳುವುದುಂಟು. ಅದಕ್ಕೊಂದು ಲೌಕಿಕ ದೃಷ್ಟಾಂತ ಕೊಡ-ಬಹುದು. ಒಬ್ಬನು ಬ್ಯಾಂಕಿನಲ್ಲಿ ದ್ರವ್ಯವನ್ನು ಇಟ್ಟಿದ್ದರೂ, ಆ ದ್ರವ್ಯದ ಯಥೇಷ್ಟ ವಿನಿಯೋಗ ಮಾಡುವ ಅಧಿಕಾರ ಉಳ್ಳವನಾದುದರಿಂದ 'ದ್ರವ್ಯವುಳ್ಳವನು' ಎಂಬ ವ್ಯವಹಾರವು ಲೋಕದಲ್ಲಿ ಇರುತ್ತದೆ. ಇದರ ಹೊರತು 'ದ್ರವ್ಯ ಉಳ್ಳವನು' ಎಂದು ಹೇಳಲ್ಪಡಬೇಕಾದರೆ, ಅವನು ದ್ರವ್ಯವನ್ನು ತಲೆಯ ಮೇಲೆ ಹೊತ್ತುಕೊಂಡಿರಬೇಕೆಂದಿಲ್ಲ. ಅದೇ ರೀತಿಯಾಗಿ ಮನೋಧರ್ಮವಾದ

ಕಾಮಕ್ಕೆ ಸ್ವಾಮಿಯಾದ ಜೀವಾತ್ಮನನ್ನು 'ಕಾಮವುಳ್ಳವನು' ಎಂದು ವ್ಯವಹಾರ ಮಾಡುವುದು. ಎರಡು ವಿಧವಾದ ಕಾಮವು ಉಂಟೆಂಬುದು ನಮಗೆ ಸಂಸಾರದಲ್ಲಿ ಒಮ್ಮೊಮ್ಮೆ ಅನುಭವಕ್ಕೆ ಬರುತ್ತವೆ. ಅಸತ್ಕಾರ್ಯವನ್ನು ಮಾಡಬೇಕೆಂದು ಒಂದು ಇಚ್ಛೆ. ಇದು ಅಸತ್ಕಾರ್ಯವಾದುದರಿಂದ ಮಾಡಬಾರದೆಂದು ಇನ್ನೊಂದು ಇಚ್ಛೆ. ಎರಡೂ ಇಚ್ಛೆಗಳೂ ಏಕ ಕಾಲದಲ್ಲಿ ಇರುತ್ತವೆ. ಇವು ವಿರುದ್ಧ ಇಚ್ಛೆಗಳು. ಈ ಎರಡೂ ಮನೋಧರ್ಮವೆಂದು ಹೇಳಲಾಗುವುದಿಲ್ಲ. ಆದ್ದರಿಂದ ಒಂದು ಮನೋಧರ್ಮ, ಮತ್ತೊಂದು ಜೀವಸ್ವರೂಪ ಎಂದು ಹೇಳಬೇಕೆಂದು ಅಭಿಪ್ರಾಯ.

ಅರ್ಜುನನು ಪ್ರಶ್ನೆ ಮಾಡುತ್ತಾನೆ: "ಇಂತಹ ಶ್ರೇಷ್ಠವಾದ ಬ್ರಹ್ಮಜ್ಞಾನ-ವನ್ನು ಹೊಂದಲು ಎಲ್ಲರೂ ಏಕೆ ಪ್ರಯತ್ನ ಮಾಡುವುದಿಲ್ಲ?" ಆದಕ್ಕೆ ಶ್ರೀಕೃಷ್ಣನು ಹೇಳುತ್ತಾನೆ:

"ಇಂದ್ರಿಯನಿಗ್ರಹವಿಲ್ಲದೇ ಬ್ರಹ್ಮಜ್ಞಾನವು ಬರಲಾರದು. ನಿರಾಹಾರದಿಂದ ಇಂದ್ರಿಯಗಳ ಭೋಗ ಶಕ್ತಿಯನ್ನು ನಾಶ ಮಾಡಿ ಇಂದ್ರಿಯ ನಿಗ್ರಹವನ್ನು ಮಾಡಬೇಕು. ಅಲ್ಲದೇ ನಿರಾಹಾರದಿಂದ ಇಂದ್ರಿಯಗಳ ಭೋಗಶಕ್ತಿಯು ನಾಶವಾದೀತೇ ಹೊರತು ಭೋಗಾಕಾಂಕ್ಷೆಯು ನಾಶವಾಗಲಾರದು. ಒಂದು ವೇಳೆ ಇತರ ಇಂದ್ರಿಯಗಳಿಂದ ಭೋಗಿಸುವ ಇಚ್ಛೆಯು ನಾಶವಾದರೂ, ನಾಲಿಗೆಯಿಂದ ರಸವನ್ನು ಆಸ್ವಾದನ ಮಾಡುವ ಇಚ್ಛೆಯು ಮಾತ್ರ ಪರಮಾತ್ಮನ ಸಾಕ್ಷಾತ್ಕಾರ-ದಿಂದಲೇ ನಾಶವಾಗತಕ್ಕದ್ದು. ನಿರಾಹಾರವನ್ನು ಮಾಡುವುದು ಎಲ್ಲರಿಗೂ ಕಷ್ಟ-ಸಾಧ್ಯವಾದ್ದರಿಂದ ಬ್ರಹ್ಮಜ್ಞಾನ ಸಂಪಾದಿಸುವುದು ಅಶಕ್ಯವಾಗುತ್ತದೆ. ಆದ್ದರಿಂದಲೇ ಬ್ರಹ್ಮಜ್ಞಾನದಲ್ಲಿ ಎಲ್ಲರೂ ಪ್ರವೃತ್ತಿ ಮಾಡುವುದಿಲ್ಲ. ಆಹಾರ ಬಿಡಲು ಶಕ್ತರಾದ ಕೆಲವರು ಮಾತ್ರ ಪ್ರವೃತ್ತಿ ಮಾಡುತ್ತಾರೆ" (ಏಳನೆಯ ದಿನದ ಉಪನ್ಯಾಸವು ಮುಗಿಯಿತು.)

***

ಅರ್ಜುನನು ಶ್ರೀಕೃಷ್ಣ ಪರಮಾತ್ಮನನ್ನು ಪ್ರಶ್ನೆ ಮಾಡುತ್ತಾನೆ: "ಬ್ರಹ್ಮಜ್ಞಾನಕ್ಕೆ ಸಾಧನವಾದ ಇಂದ್ರಿಯನಿಗ್ರಹವನ್ನು ಸಾರಾಸಾರವಿವೇಕ-ಜ್ಞಾನದಿಂದಲೂ ಪ್ರತ್ಯಾಹಾರ (ಅಂದರೆ ವಿಷಯದ ಕಡೆಗೆ ಇಂದ್ರಿಯಗಳನ್ನು ಹೋಗದ ಹಾಗೆ ಮಾಡುವುದು) ಎಂಬ ಪ್ರಯತ್ನದಿಂದಲೂ ಮಾಡಲು ಸಾಧ್ಯವಿದೆ. ಇದು ಸುಲಭ. ಆಹಾರವನ್ನು ಬಿಟ್ಟು ಇಂದ್ರಿಯಗಳನ್ನು ನಿಗ್ರಹಿಸುವುದೆಂದರೆ ಯಾರಿಗೂ ಶಕ್ಯವಿಲ್ಲ. ಈ ಸುಲಭೋಪಾಯದಿಂದ ಬ್ರಹ್ಮಜ್ಞಾನವನ್ನು ಎಲ್ಲರೂ ಸಂಪಾದಿಸಬಹುದಷ್ಟೆ?"

ಶ್ರೀಕೃಷ್ಣನು ಉತ್ತರವನ್ನು ಹೇಳುತ್ತಾನೆ: "ಸಾರಾಸಾರವಿವೇಕ ಜ್ಞಾನಿಗೂ ಪ್ರತ್ಯಾಹಾರ ಮಾಡತಕ್ಕವನಿಗೂ ಇಂದ್ರಿಯನಿಗ್ರಹವು ಸುಲಭವಲ್ಲ. ಇಂದ್ರಿಯಗಳು ತಾವಾಗಿ ವಿಷಯದ ಕಡೆಗೆ ಹೋಗಿ ಮನಸ್ಸನ್ನು ವಿಷಯಾಸಕ್ತವನ್ನಾಗಿ ಮಾಡುತ್ತವೆ. ಅದನ್ನು ಸ್ವಾಧೀನ ಪಡಿಸಿಕೊಳ್ಳಲು ಸಾಧ್ಯವಾಗದೇ ಎಷ್ಟೋ ಜ್ಞಾನಿಗಳು ಇಂದ್ರಿಯಗಳ ಅಧೀನವಾದದ್ದು ಕಂಡಿದೆ."

ಆಗ ಅರ್ಜುನನು, "ಹಾಗಾದರೆ, ಬ್ರಹ್ಮಜ್ಞಾನವನ್ನು ಪಡೆಯಲೇ ಸಾಧ್ಯವಿಲ್ಲ ಎಂದಾಯಿತಲ್ಲಾ?" ಎಂದು ಕೇಳಲು ಶ್ರೀಕೃಷ್ಣ ಪರಮಾತ್ಮನು, "ಮಹಾಪ್ರಯತ್ನವನ್ನು ಮಾಡಿದರೆ, ಬ್ರಹ್ಮಜ್ಞಾನವು ಶಕ್ಯವಾಗಬಹುದು" ಎಂದು ಉಪದೇಶಿಸುತ್ತಾನೆ.

ಮಹಾ ಪ್ರಯತ್ನವೇನೆಂದರೆ, ಎಲ್ಲಾ ಇಂದ್ರಿಯಗಳನ್ನು ನಿಯಮನ ಮಾಡಿ, ಪರಮಾತ್ಮನಲ್ಲಿ ಆ ಇಂದ್ರಿಯಗಳನ್ನಿಟ್ಟು ಪರಮಾತ್ಮನೇ ಸರ್ವೋತ್ತಮನೆಂದು ತಿಳಿದು, ಎಲ್ಲ ಕರ್ಮಯೋಗವನ್ನು ಪರಮಾತ್ಮನಿಗೆ ಅರ್ಪಿಸುತ್ತ, ದೇಹಧಾರಣೆಗೆ ಉಪಯುಕ್ತವಾದ, ಅವಶ್ಯಕವಾದ, ಮಿತವಾದ, ಸಾತ್ವಿಕವಾದ, ಪರಿಶುದ್ಧವಾದ ಅಹಾರವನ್ನು ಸೇವಿಸುತ್ತಾ, ವಿಷಯಗಳಲ್ಲಿರುವ ದೋಷಗಳನ್ನು ಚಿಂತನ ಮಾಡುತ್ತ ಇರಬೇಕು. ವಿಷಯಗಳಲ್ಲಿರುವ ದೋಷವೆಂದರೆ, 'ವಿಷಯದ ಸಂಗವನ್ನು ನಾನು ಮಾಡಿದರೆ, ವಿಷಯದ ಇಚ್ಛೆಯು ನನಗೆ ಪ್ರಾಪ್ತವಾದೀತು. ಆ ಇಚ್ಛೆಯಿಂದ ವಿಷಯದ ಪ್ರಾಪ್ತಿಗೋಸ್ಕರ ನಾನು ಪ್ರಯತ್ನ ಮಾಡಿದಾಗ, ಅದಕ್ಕೆ

ಅಡ್ಡಿಪಡಿಸುವವರನ್ನು ಘಾಸಿ ಮಾಡುವ ಸಂಭವವಿದೆ. ಅವನ ಮೇಲೆ ಇರತಕ್ಕ ಕ್ರೋಧೋದ್ರೇಕದಿಂದ ಶಾಸ್ತ್ರದ ವಿಧಿನಿಷೇಧಗಳೇ ಮರೆತು ಹೋಗುವ ಸಂಭವವಿದೆ. ಆಗ 'ಹಿಂಸೆಯು ಅನರ್ಥ ಸಾಧನ' ಎಂಬ ಜ್ಞಾನವು ಇಲ್ಲದಂತಾಗಿ ಮಹಾ ಪಾಪ ಸಾಧನವಾದ ಹಿಂಸಾದಿ ದೋಷಗಳನ್ನು ಸಂಪಾದಿಸಿ, ಅತಿ ಕಷ್ಟವಾದ ನರಕಕ್ಕೆ ಹೊಗಬೇಕಾಗುವುದು. ಆದುದರಿಂದ ವಿಷಯ ಧ್ಯಾನವು ಕೆಟ್ಟದೆಂದು ತಿಳಿಯಬೇಕು."

ಇದಕ್ಕೆ ದೃಷ್ಟಾಂತ: ಕಳ್ಳರು ನಮ್ಮಲ್ಲಿನ ಧನವನ್ನು ಅಪಹರಿಸಿ, ನಮಗೆ ಕಷ್ಟವನ್ನು ಕೊಡುವ ಸಂಭವವಿದೆ ಎಂದು ತಿಳಿದಾಗ, ನಾವು ಮೊದಲೇ ಜಾಗ್ರತರಾಗಿ ಆ ಧನವನ್ನು ಸುರಕ್ಷಿತ ಸ್ಥಳದಲ್ಲಿ ಅಂದರೆ ರಾಜನ ಆಶ್ರಯದಲ್ಲಿಯೋ ಬ್ಯಾಂಕಿನಲ್ಲಿಯೋ ಇಡಬೇಕು. ಅದೇ ರೀತಿ ಈ ಮನಸ್ಸೆಂಬುದು ಮೋಕ್ಷ-ಸಾಧನವಾದ ಶ್ರೇಷ್ಠಧನ. ಆ ಧನವನ್ನು ಬಾಹ್ಯೇಂದ್ರಿಯಗಳೆಂಬ ಕಳ್ಳರು ಅಪಹರಿಸಿ ವಿಷಯದ ಕಡೆಗೆ ತೆಗೆದುಕೊಂಡು ಹೋಗುತ್ತಾರೆ. ಈ ಪುರುಷನಿಗೆ ವಿಷಯಾಸಕ್ತಿಯಿಂದ ದುಃಖ ಬರುವಂತೆ ಮಾಡುತ್ತಾರೆ. ಅದಕ್ಕೋಸ್ಕರ ಈ ಮನಸ್ಸೆಂಬ ಧನವನ್ನು ರಾಜಾಧಿರಾಜನಾದ ಪರಮಾತ್ಮನಲ್ಲಿಡಬೇಕು. ಅಂದರೆ ಪರಮಾತ್ಮನೇ ಸರ್ವೋತ್ತಮನೆಂದು ಧ್ಯಾನ ಮಾಡುತ್ತ, ಈ ಮನಸ್ಸನ್ನು ನಿಶ್ಚಲವಾಗಿಸಿ ಪರಮಾತ್ಮನನ್ನೇ ಧ್ಯಾನಿಸಬೇಕು. ಆವಾಗ ಇಂದ್ರಿಯಗಳೆಂಬ ಚೋರರಿಗೆ ಮನಸ್ಸನ್ನು ಅಪಹರಿಸಿ ವಿಷಯದ ಕಡೆಗೆ ತೆಗೆದುಕೊಂಡು ಹೋಗಲು ಸಾಧ್ಯವಾಗುವುದಿಲ್ಲ.

ಲೋಕದಲ್ಲಿಯೂ ಒಬ್ಬ ಪುರುಷನು ವಿಚಿತ್ರವಾದ ವಿಶಿಷ್ಟವಾದ ವಸ್ತುವಿನಲ್ಲಿ ಮನಸ್ಸನ್ನಿಟ್ಟಿದ್ದರೆ, ಆ ಮನಸ್ಸು ಬೇರೆ ಸಾಮಾನ್ಯ ವಿಷಯದ ಕಡೆಗೆ ಹೋಗುವುದಿಲ್ಲ. ಪರಮಾತ್ಮನೋ ಮಹಾಶ್ಚರ್ಯನಾದ ವಿಶೇಷ ವಸ್ತು. ಅವನಲ್ಲಿ ಮನಸ್ಸು ರಮಿಸುತ್ತಿದ್ದರೆ, ಆ ಮನಸ್ಸು ಅತ್ಯಂತ ನಿಕೃಷ್ಟವಾದ ವಿಷಯದ ಕಡೆ ಹೋಗಲಾರದು. ಆ ಮನಸ್ಸನ್ನು ಸೆಳೆದುಕೊಳ್ಳಲಿಕ್ಕೆ ಇಂದ್ರಿಯಗಳಿಗೂ ಸಾಮರ್ಥ್ಯ ಸಾಲದು. ಆದ್ದರಿಂದ ಮಹಾ ಪ್ರಯತ್ನ ಮಾಡಿ, ಆ ಮನಸ್ಸನ್ನು ಪರಮಾತ್ಮ-

ನಲ್ಲಿಡಬೇಕು. ಇದರಿಂದಲೇ ಇಂದ್ರಿಯ ಜಯವು ಸಾಧ್ಯ. ಇದರಿಂದಲೇ ಸಮಸ್ತದುಃಖನಿವೃತ್ತಿ.

ಅದು ಹೇಗೆಂದರೆ, ಪರಮಾತ್ಮನಲ್ಲಿ ಆಸಕ್ತವಾದ ಮನಸ್ಸುಳ್ಳವನಿಗೆ ಗುರುಮುಖದಿಂದ ಶಾಸ್ತ್ರದ ಶ್ರವಣವು ಸಾಧ್ಯವಾಗುವುದು. ಆಮೇಲೆ ಮನನ. ಮನನದಿಂದ ಧ್ಯಾನ, ಧ್ಯಾನದಿಂದ ಪರಮಾತ್ಮನ ಸಾಕ್ಷಾತ್ಕಾರ. ಸಾಕ್ಷಾತ್ಕಾರದಿಂದ ಪರಮಾತ್ಮನ ಪರಿಪೂರ್ಣ ಪ್ರಸಾದವು. ಅದರಿಂದ ಸಮಸ್ತ ದುಃಖ ನಿವೃತ್ತಿಪೂರ್ವಕ ಪರಿಪೂರ್ಣ ಆನಂದವೆಂಬ ಮೋಕ್ಷವು ಸಾಧ್ಯವಾಗುತ್ತದೆ.

ಅದಕ್ಕಾಗಿ ಮನಸ್ಸನ್ನು ಪರಮಾತ್ಮನಲ್ಲಿ ಆಸಕ್ತವಾದದ್ದನ್ನಾಗಿ ಮಾಡಬೇಕು. ಯಾರು ಈ ರೀತಿ ಮನೋನಿಗ್ರಹ ಮಾಡುವುದಿಲ್ಲವೋ, ಅವರಿಗೆ ಆಗುವ ಅನರ್ಥವನ್ನು ಒಂದು ದೃಷ್ಟಾಂತದಿಂದ ನಿರೂಪಿಸಬಹುದು. ಮಹಾ ಪ್ರವಾಹವುಳ್ಳ ನದಿಯಲ್ಲಿ ಜೋರಾಗಿ ಗಾಳಿ ಬೀಸುತ್ತಿರುವಾಗ ದೋಣಿಯನ್ನು ಪ್ರವಾಹದಲ್ಲಿ ಸೆಳೆದುಕೊಂಡು ಹೋಗುವ ಮನುಷ್ಯನು ಗಾಳಿಯ ವಿರುದ್ಧ ಪ್ರಯತ್ನವನ್ನು ಮಾಡದೇ, ಗಾಳಿಗೆ ಸರಿಯಾಗಿ ದೋಣಿಯನ್ನು ಬಿಟ್ಟರೆ, ದೋಣಿಯು ಎಲ್ಲೆಲ್ಲೋ ಹೋಗಿ ಸೇರಿ ಅದು ಮುಳುಗುವ ಸಂಭವವಿದೆ. ಅದರಲ್ಲಿರುವವರೂ ನಾಶವಾಗು-ತ್ತಾರೆ. ಅದೇ ರೀತಿ ಇಂದ್ರಿಯಗಳು ಯಾವ ಕಡೆಗೆ ಹೋಗುತ್ತವೆಯೋ ಆ ಕಡೆಗೆ ಮನಸ್ಸೆಂಬ ದೋಣಿಯನ್ನು ಬಿಟ್ಟುಬಿಟ್ಟರೆ, ಆ ಮನಸ್ಸೆಂಬ ದೋಣಿಯು ಕೆಟ್ಟ ವಿಷಯದಲ್ಲಿ ಹೋಗಿ ಸೇರಿ ಈ ಪುರುಷನನ್ನು ಅತ್ಯಂತ ದುಃಖಿಯನ್ನಾಗಿ ಮಾಡಬಹುದು.

ಆದ್ದರಿಂದ ಇಂದ್ರಿಯನಿಗ್ರಹವು ಇಂತಹ ಅನರ್ಹ ನಿವೃತ್ತಿಗೂ ಬ್ರಹ್ಮಜ್ಞಾನವೆಂಬ ಮಹಾಫಲಕ್ಕೂ ಸಾಧನವಾದುದರಿಂದ ಮಹಾ ಪ್ರಯತ್ನ ಮಾಡಿ ಇಂದ್ರಿಯ ಜಯವನ್ನು ಹಿಂದೆ ಹೇಳಿದ ರೀತಿಯಲ್ಲಿ ಅವಶ್ಯವಾಗಿ ಮಾಡಬೇಕು

ಹೀಗೆ ಶ್ರೀಕೃಷ್ಣನು ಬ್ರಹ್ಮಜ್ಞಾನವನ್ನು ಸಂಪಾದಿಸುವುದು ಮಹಾ ಕಷ್ಟಸಾಧ್ಯವೆಂದು, ಅದನ್ನು ಸಾಧಿಸುವ ಮಾರ್ಗವು ತಾನು ಹೇಳಿದ್ದು ಒಂದೇ ಒಂದು ಎಂದು ಹೇಳಿ, ಪುನಃ ಬ್ರಹ್ಮಸಾಕ್ಷಾತ್ಕಾರ ಆದವರ ಲಕ್ಷಣವನ್ನು ಸ್ಪಷ್ಟೀಕರಿಸಿ ಹೇಳುತ್ತಾನೆ: "ಸಾಮಾನ್ಯ ಜೀವರು ನಿದ್ರೆಯಲ್ಲಿ ಯಾವ ವಸ್ತುವನ್ನೂ ನೋಡದಂತೆ

ಇರುತ್ತಾರೆ. ಅಂದರೆ ಆ ನಿದ್ರೆಯ ಅವಸ್ಥೆಯಲ್ಲಿ ಅಜ್ಞಾನಿಗಳಾಗಿರುವರು. ಅದೇ ರೀತಿ ಎಚ್ಚರಿಕೆಯಲ್ಲಿದ್ದರೂ ಕೂಡ ಪರಮಾತ್ಮನ ವಿಷಯದಲ್ಲಿ ಮಾತ್ರ ನಿದ್ರೆ ಬಂದವರಂತೆ ಅತ್ಯಂತ ಅಜ್ಞಾನಿಗಳಾಗಿರುತ್ತಾರೆ. ಸಾಮಾನ್ಯ ಜೀವರು ವಿಷಯದಲ್ಲಿ ಜಾಗರೂಕವಾಗಿರುವಂತೆ ಬ್ರಹ್ಮಜ್ಞಾನಿಗಳು ಮಾತ್ರ ಪರಬ್ರಹ್ಮನ ವಿಷಯದಲ್ಲಿ ಯಾವಾಗಲೂ ಜಾಗರೂಕರಾಗಿರುತ್ತಾರೆ. ಅವರು ಶಬ್ದಾದಿ ಬಾಹ್ಯ ವಿಷಯದಲ್ಲಿ ನಿದ್ರೆ ಬಂದವರಂತೆ ಅಜ್ಞಾನಿಗಳಾಗಿರುತ್ತಾರೆ."

ಬ್ರಹ್ಮಜ್ಞಾನಿಗಳಲ್ಲಿ ಎರಡು ಪ್ರಕಾರದವರಿದ್ದಾರೆ. ಉತ್ತಮ ಅಧಿಕಾರಿಗಳಾದ ದೇವತೆಗಳು ಮತ್ತು ಇತರರು ಎಂದು. ಉತ್ತಮಾಧಿಕಾರಿಗಳಾದ ದೇವತೆಗಳು ತತ್ವಾಭಿಮಾನಿಗಳಾದ ಪ್ರಯುಕ್ತ ನಮ್ಮ ದೇಹದಲ್ಲಿ ನಿಯಾಮಕ-ರಾಗಿದ್ದು ನಮ್ಮ ಎಲ್ಲಾ ಕಾರ್ಯಗಳಿಗೆ ಪ್ರವರ್ತಕರಾಗಿದ್ದಾರೆ. ಅವರಿಗೆ ಬ್ರಹ್ಮಜ್ಞಾನ ಮತ್ತು ಜಗತ್ತಿನ ಜ್ಞಾನ ಎರಡೂ ಇರುತ್ತವೆ. ಅವರಿಗೆ ಜಗತ್ತಿನ ಜ್ಞಾನ ಇಲ್ಲದಿದ್ದರೆ, ಅವರು ನಮಗೆ ಪ್ರೇರಣಾದಿಗಳನ್ನು ಮಾಡದೇ ಜಗತ್ತಿನ ಚೇಷ್ಟೆಯು ನಿಂತು ಹೋಗುವ ಸಂಭವವಿದೆ. ಇತರ ಬ್ರಹ್ಮ ಸಾಕ್ಷಾತ್ಕಾರಿಗಳು, ಕೇವಲ ಪರಬ್ರಹ್ಮನನ್ನು ನೋಡುತ್ತ ಪ್ರಪಂಚದ ವಿಷಯದಲ್ಲಿ ನಿದ್ರೆ ಬಂದವರಂತೆ ಇರುತ್ತಾರೆಂದು ತಿಳಿದುಕೊಳ್ಳಬೇಕು.

ಇದರಿಂದ ಒಂದು ಶಂಕೆಯು ಪರಿಹೃತವಾಯಿತು. ಏನೆಂದರೆ ಕೆಲವರು ಪ್ರಪಂಚವು ಮಿಥ್ಯಾ ಎಂದು ಸಾಧಿಸುವದಕ್ಕೋಸ್ಕರ ಬ್ರಹ್ಮ ಸಾಕ್ಷಾತ್ಕಾರ ಆದವರಿಗೆ ಪ್ರಪಂಚವು ಕಾಣುವುದಿಲ್ಲ ಎಂದು ಹೇಳುತ್ತಾರೆ. ಕಪ್ಪೆಚಿಪ್ಪನ್ನು ಬೆಳ್ಳಿಯೆಂದು ಭ್ರಮಿಸಿದ ಪುರುಷನು ಪರೀಕ್ಷೆ ಮಾಡಿ, 'ಇದು ಕಪ್ಪೆಚಿಪ್ಪು' ಎಂದು ತಿಳಿದ ಮೇಲೆ ಬೆಳ್ಳಿಯನ್ನು ಕಾಣುವುದಿಲ್ಲ. ಅವನಿಗೆ ಕಪ್ಪೆಚಿಪ್ಪು ಮಾತ್ರ ಕಾಣುತ್ತದೆ. ಆದ್ದರಿಂದ ಅಷ್ಟರವರೆಗೆ ಕಾಣಿಸಿದ ಬೆಳ್ಳಿಯು ಮತ್ತೆ ಕಾಣದೇ ಇರುವ ಪ್ರಯುಕ್ತ ಅದು ಸುಳ್ಳೆಂದು ಸಿದ್ಧವಾಗುವಂತೆ ಬ್ರಹ್ಮಸಾಕ್ಷಾತ್ಕರವಾದ ಮೇಲೆ ಕಾಣದೇ ಮೊದಲು ಮಾತ್ರ ಕಾಣುತ್ತಿದ್ದ ಪ್ರಪಂಚವು ಸುಳ್ಳು ಎಂದು ಸಾಧಿಸುತ್ತಾರೆ.

ಆದರೆ ಈ ಮೊದಲು ಹೇಳಿದಂತೆ ಸಾಮಾನ್ಯ ಬ್ರಹ್ಮಜ್ಞಾನಿಗಳಿಗೆ ಪ್ರಪಂಚವು ಕಾಣಿಸದೇ ಇದ್ದರೂ ತತ್ತ್ವಾಭಿಮಾನಿ ದೇವತೆಗಳಿಗೆ ಬ್ರಹ್ಮ-

ಸಾಕ್ಷಾತ್ಕಾರದ ಜೊತೆಗೇ ಪ್ರಪಂಚ ಸಾಕ್ಷಾತ್ಕಾರವೂ ಇರುವುದರಿಂದ ಪ್ರಪಂಚವು ಸತ್ಯವೇ ಎಂದು ತಿಳಿಯಬೇಕು. ಪ್ರಪಂಚವು ಅನಿತ್ಯ ಬ್ರಹ್ಮನು ನಿತ್ಯ ಎಂಬುದಷ್ಟೇ ಬ್ರಹ್ಮ ಮತ್ತು ಪ್ರಪಂಚಗಳಿಗಿರುವ ವಿಶೇಷ ಎಂದು ಸಿದ್ಧವಾಯಿತು.

ಈ ಬ್ರಹ್ಮಜ್ಞಾನಿಯಾದವನು ಪ್ರಾರಬ್ಧಕರ್ಮದಿಂದ ಬ್ರಹ್ಮ ಸಾಕ್ಷಾತ್ಕಾರಕ್ಕೆ ತಿರೋಭಾವ ಬಂದಾಗ ವಿಷಯಗಳನ್ನು ಭೋಗಿಸುತ್ತಾನೆ. ಆದರೆ ಅವನು ಮಾಡುವ ವಿಷಯ ಭೋಗದಲ್ಲಿ, ಇತರರ ಭೋಗಕ್ಕಿಂತ ಬಹಳ ವೈಲಕ್ಷಣ್ಯವಿದೆ. ಅವನು ವಿಷಯ ಭೋಗಕ್ಕೋಸ್ಕರ ಪ್ರಯತ್ನ ಮಾಡುವುದಿಲ್ಲ. ವಿಷಯ ಭೋಗ ಸಿಗದಿದ್ದ ಮಾತ್ರಕ್ಕೆ ಕುಗ್ಗುವುದಿಲ್ಲ. ವಿಷಯಭೋಗ ಸಿಕ್ಕಿದ್ದರಿಂದ ಸಂತೋಷದ ಅತಿರೇಕವನ್ನು ಹೊಂದುವುದಿಲ್ಲ. ಅವನು ಸಮುದ್ರದಂತಿರುತ್ತಾನೆ. ಸಮುದ್ರವು ನದಿಗಳು ಬರುವುದಕ್ಕೋಸ್ಕರ ಪ್ರಯತ್ನ ಮಾಡುವುದಿಲ್ಲ. ನದಿಗಳು ಬಂದು ಸೇರಿದ ಮಾತ್ರಕ್ಕೆ ವೃದ್ಧಿಯೂ ಆಗುವುದಿಲ್ಲ, ಹೋದರೆ ಹ್ರಾಸವನ್ನು ಹೊಂದುವುದಿಲ್ಲ. ಅದೇ ರೀತಿ ಬ್ರಹ್ಮಜ್ಞಾನಿಯು ವಿಷಯವನ್ನು ಭೋಗಿಸುತ್ತಿದ್ದರೂ, ಶಾಂತನಾಗಿ-ರುತ್ತಾನೆ. ಅಜ್ಞಾನಿಯಾದ ಭೋಗಲಂಪಟನಿಗೆ ಇಂತಹ ಶಾಂತಿಯು ಎಂದಿಗೂ ಬರಲಾರದು.

ಬ್ರಹ್ಮಜ್ಞಾನಿಗೆ ಶಾಸ್ತ್ರನಿಷಿದ್ಧವಾದ ಇಚ್ಛೆಯೂ ಇಲ್ಲ. ನಾನು ಇಂತಹ ಕೆಲಸವನ್ನು ಮಾಡುತ್ತೇನೆಂಬ ಕರ್ತೃತ್ವಾಭಿಮಾನವಿಲ್ಲ. ನಾನು ಸ್ವಾಮಿ-ಯಾಗಿದ್ದೇನೆಂಬ ಮಿಥ್ಯಾಜ್ಞಾನವಿಲ್ಲ. ಆದ್ದರಿಂದಲೇ ಒಳ್ಳೇ ಶಾಂತಿಯು ಇವನಿಗಿರುವುದು. ಇಂತಹ ಬ್ರಹ್ಮಜ್ಞಾನವನ್ನು ಹೊಂದಿದವನೇ ಅಥವಾ ಹೊಂದಲು ಪ್ರಯತ್ನ ಮಾಡತಕ್ಕವನೇ ಪುರುಷನು. ಬೇರೆಯವರು ಪಶುವಿನಂತೆ ಎಂದು ತಿಳಿಯಬೇಕು.

ಇಂತಹ ಬ್ರಹ್ಮಜ್ಞಾನದ ಅವಸ್ಥೆಯು ಯಾವಾಗ ಪ್ರಾಪ್ತವಾಗುತ್ತದೋ ಅಂದಿನಿಂದ ಅವನು ಮೋಕ್ಷಕ್ಕೆ ಹೋಗೇ ಹೋಗುತ್ತಾನೆಂಬುದು ನಿಶ್ಚಿತ. ಅದೇ ಜನ್ಮದಲ್ಲಿ ದೇಹ ಪತನಾನಂತರ ಮೋಕ್ಷಕ್ಕೆ ಹೋಗದೇ, ಪ್ರಾರಬ್ಧ ಕರ್ಮಾಧೀನವಾಗಿ ಎಷ್ಟೋ ಜನ್ಮಗಳು ಬರಬಹುದು. ಜ್ಞಾನಿಗೂ ಪ್ರಾರಬ್ಧಕರ್ಮವು ಭೋಗದಿಂದಲೇ ನಾಶವಾಗತಕ್ಕದ್ದು. ಜ್ಞಾನದಿಂದ ಅಪ್ರಾರಬ್ಧ-

ಕರ್ಮಗಳೆಲ್ಲವೂ ನಾಶವಾಗುತ್ತವೆ. ಪ್ರಾರಬ್ಧಕರ್ಮವು ನಾಶವಾಗುವುದಿಲ್ಲ. ಯಾಕೆಂದರೆ ಬ್ರಹ್ಮಸಾಕ್ಷಾತ್ಕಾರಿಯು ಕೂಡಲೇ ಮೋಕ್ಷಕ್ಕೆ ಹೋದರೆ, ಲೋಕಕ್ಕೆ ಸರಿಯಾಗಿ ಬ್ರಹ್ಮೋಪದೇಶ ಮಾಡತಕ್ಕವರು ಇಲ್ಲದಂತಾಗಿ ಸಜ್ಜನರ ಉದ್ಧಾರವು ಇಲ್ಲದಂತಾದೀತು. ಅದಕ್ಕಾಗಿ ಪರಮಾತ್ಮನು ಬ್ರಹ್ಮಜ್ಞಾನಿಗಳಿಗೆ ಪ್ರಾರಬ್ಧ-ಕರ್ಮವನ್ನು ಉಳಿಸಿ ಅದರಿಂದ ಅನೇಕ ಜನ್ಮಗಳನ್ನು ಕೊಟ್ಟು ಅವರ ಉಪದೇಶದಿಂದ ಅನೇಕ ಸಜ್ಜನರನ್ನು ಉದ್ಧಾರ ಮಾಡಿಸಿ ಆ ಬ್ರಹ್ಮಜ್ಞಾನಿಗಳಿಗೆ ವಿಶೇಷವಾದ ಅನುಗ್ರಹಮಾಡಿ ಮೋಕ್ಷದಲ್ಲಿ ವಿಶೇಷ ಆನಂದವನ್ನು ಕೊಡುತ್ತಾನೆ. ಈ ಪ್ರಾರಬ್ಧಕರ್ಮವು ಉತ್ತಮ ಜೀವರುಗಳಿಗೆ ಹೆಚ್ಚು. ಬ್ರಹ್ಮದೇವರಿಗೆ ನೂರು ಕಲ್ಪ. ರುದ್ರಾದಿ ದೇವತೆಗಳಿಗೆ ಅದಕ್ಕಿಂತ ಕಡಿಮೆ. ಋಷಿಗಳಿಗೆ, ಮನುಷ್ಯರಿಗೆ ಇನ್ನೂ ಕಡಿಮೆ. ಯಾರಿಗೆ ಹೆಚ್ಚು ಪ್ರಾರಬ್ಧ ಕರ್ಮವಿದೆಯೋ ಅವರು ಹೆಚ್ಚು ಭಗವತ್ಸೇವೆಯನ್ನು ಮಾಡುತ್ತಾರೆ. ಆದುದರಿಂದ ಅವರಿಗೆ ಶ್ರೇಷ್ಠವಾದ ಮೋಕ್ಷವು ಪ್ರಾಪ್ತವಾಗುತ್ತದೆ.

ಈ ಪ್ರಾರಬ್ಧ ಕರ್ಮವು ಇರುವತನಕ ಅವರಿಗೆ ಸಾಯುವ ಕಾಲಕ್ಕೆ ಪರಮಾತ್ಮನ ಸ್ಮರಣೆ ಬರಲಾರದು. ದೇಹತ್ಯಾಗ ಮಾಡುವ ಒಂದು ಕ್ಷಣದಲ್ಲಿ ಪರಮಾತ್ಮನ ಸ್ಮರಣವು ಇಲ್ಲದಂತಾಗುತ್ತದೆ. ಇದು ವಿಷ್ಣುಮಾಯೆಯ ಮಹಿಮೆ. ಅಂತ್ಯಕಾಲದಲ್ಲಿ ಪರಮಾತ್ಮನ ಸ್ಮರಣೆ ಇದ್ದವರಿಗೇನೆ ಮೋಕ್ಷಲಾಭವಾಗುವುದು. ಬ್ರಹ್ಮಜ್ಞಾನಿಗಳಿಗೂ ಸಹ ಪ್ರಾರಬ್ಧಕರ್ಮವಿದ್ದರೆ, ಅಂತ್ಯಕಾಲದಲ್ಲಿ ಪರಮಾತ್ಮನ ಸ್ಮರಣೆ ಬರುವುದಿಲ್ಲವೆಂದಮೇಲೆ, ಅಜ್ಞಾನಿಗಳಿಗೆ ಸಾಯುವ ಕಾಲಕ್ಕೆ ಪರಮಾತ್ಮನ ಸ್ಮರಣೆಯು, ಅದರಿಂದ ಮೋಕ್ಷಪ್ರಾಪ್ತಿಯು ಅಶಕ್ಯವೇ ಸರಿ. ಭೀಷ್ಮಾಚಾರ್ಯ-ರಂತಹ ಬ್ರಹ್ಮಜ್ಞಾನಿಗಳಿಗೂ ಸಹ ಸಾಯುವ ಕಾಲಕ್ಕೆ ಸ್ಮರಣೆ ಕ್ಷಣ ಮಾತ್ರ ಇಲ್ಲದಂತಾಯಿತು.

ವೈಶೇಷಿಕಾದಿಗಳು ಹೇಳುತ್ತಾರೆ: 'ಪ್ರಾರಬ್ಧಕರ್ಮವನ್ನು ಭೋಗಿಸುವದ-ಕ್ಕೋಸ್ಕರ ಸೌಭರ್ಯಾದಿ ಋಷಿಗಳಂತೆ ಜ್ಞಾನಿಗಳೂ ಸ್ವಲ್ಪ ಕಾಲದಲ್ಲಿ ಕಾಯವ್ಯೂಹ ನಿರ್ಮಾಣ ಮಾಡಿ, ಅಂದರೆ ಅನೇಕ ದೇಹಗಳನ್ನು ಏಕಕಾಲದಲ್ಲಿ ಧರಿಸಿ ಕರ್ಮವನ್ನೆಲ್ಲ ಭೋಗಿಸಿಬಿಟ್ಟು ಅದೇ ಜನ್ಮದಲ್ಲಿಯೇ ಮೋಕ್ಷಕ್ಕೆ ಹೋಗುತ್ತಾರೆ.

ಬ್ರಹ್ಮಜ್ಞಾನಿಗಳಿಗೆ ಬೇರೆ ಜನುಮ ಬರುವದಿಲ್ಲ' ಎಂದು. ಅದು ಸರಿಯಲ್ಲ. ಯಾಕೆಂದರೆ ರುದ್ರದೇವರು ಮಹಾಬ್ರಹ್ಮಜ್ಞಾನಿಗಳೂ. ಅವರು ಬರುವ ಕಲ್ಪದಲ್ಲಿ ಶೇಷನಾಗಿ ಹುಟ್ಟಿ ಎಷ್ಟೋ ಭಗವತ್ಸೇವೆಯನ್ನು ಮಾಡಿ ನಂತರ ಮೋಕ್ಷಕ್ಕೆ ಹೋಗತಕ್ಕವರಿದ್ದಾರೆ. ಹೀಗೆ ಅನೇಕ ಉದಾಹರಣೆಗಳುಂಟು. ಆದುದರಿಂದ ಬ್ರಹ್ಮಜ್ಞಾನಿಗಳು ಪುನರ್ಜನ್ಮವನ್ನು ಹೊಂದುವುದಿಲ್ಲವೆಂಬ ನಿಯಮವು ಪ್ರಮಾಣವಿರುದ್ಧ. ಆದ್ದರಿಂದ ಕೆಲವರು ಕಾಯವ್ಯೂಹವನ್ನು ನಿರ್ಮಾಣ ಮಾಡಬಹುದು. ಕೆಲವರು ಅನೇಕ ಜನ್ಮಗಳನ್ನು ಹೊಂದಬಹುದು, ಕೆಲವರು ಪ್ರಾರಬ್ಧ ಜನ್ಮ ಇಲ್ಲದ ಪ್ರಯುಕ್ತ ಅದೇ ಜನ್ಮದಲ್ಲಿ ಮೋಕ್ಷವನ್ನು ಹೊಂದ-ಬಹುದು.

ಬ್ರಹ್ಮಜ್ಞಾನ ಬಂದು ಪ್ರಾರಬ್ಧ ಕರ್ಮದಿಂದಾಗಿ ಬಹು ಜನ್ಮಗಳು ಹೊಂದಿದ ಮೇಲೆ ಬಹಳ ಹಿಂದೆ ಸಂಪಾದಿಸಿದ್ದ ಬ್ರಹ್ಮಜ್ಞಾನವು ನಾಶವಾಗಿ ಆ ಜೀವರಿಗೆ ಮೋಕ್ಷವೇ ಇಲ್ಲವೆಂತಾದೀತೆಂಬ ಶಂಕೆ ಬೇಡ. ಬಹು ಜನ್ಮಗಳಿಂದ ಬಹು ಕಾಲ ಹೋದರೂ ಆ ಬ್ರಹ್ಮಜ್ಞಾನವು ಮೋಕ್ಷವನ್ನು ಕೊಟ್ಟೇ ಕೊಡುತ್ತದೆ. ಪ್ರಾರಬ್ಧಕರ್ಮವು ಮುಗಿಯುವುದೊಂದೇ ತಡ, ಪ್ರಾರಬ್ಧಕರ್ಮ ಮುಗಿದ ಮೇಲೆ ಶರೀರಪಾತವಾದಾಗ, ಅವನಿಗೆ ಉತ್ತರಕ್ರಿಯೆಯನ್ನು ಮಾಡಲಿ ಅಥವಾ ಮಾಡದೇ ಇರಲಿ ಆ ಬ್ರಹ್ಮಜ್ಞಾನಿಗೆ ಮೋಕ್ಷವು ನಿಯತ.

ಆ ಜ್ಞಾನಿಯು ನಿರ್ವಾಣ ಬ್ರಹ್ಮನನ್ನು ಹೊಂದುತ್ತಾನೆ. ನಿರ್ವಾಣ ಬ್ರಹ್ಮನೆಂದರೆ ಪ್ರಾಕೃತ ಶರೀರವಿಲ್ಲದೇ ಇರತಕ್ಕ ಪರಬ್ರಹ್ಮನೆಂದರ್ಥ. 'ನಿರ್ವಾಣ' ಶಬ್ದವನ್ನು ಹೇಳದೇ 'ಬ್ರಹ್ಮನನ್ನು ಹೊಂದುತ್ತಾನೆ' ಎಂದಷ್ಟೇ ಹೇಳಿದ್ದರೆ ಚತುರ್ಮುಖ ಬ್ರಹ್ಮನನ್ನು ಹೊಂದುತ್ತಾನೆ ಎಂಬ ಅರ್ಥವು ಆಗುವ ಸಂಭವವಿದೆ. ಚತುರ್ಮುಖ ಬ್ರಹ್ಮನು ಪ್ರಾಕೃತ ಶರೀರವುಳ್ಳವನಾದ ಪ್ರಯುಕ್ತ, ಪ್ರಾಕೃತ ಶರೀರರಹಿತನಾದ ಬ್ರಹ್ಮನೆಂದರೆ ಪರಮಾತ್ಮ ಎಂದೇ ಅರ್ಥ. ಅವನನ್ನು ಹೊಂದುವುದೇ ಮೋಕ್ಷವು. ಪರಮಾತ್ಮನಿಗೆ ಪ್ರಾಕೃತಶರೀರವಿಲ್ಲವೆಂದೇ ತಿಳಿಯಬೇಕು. ಸರ್ವಥಾ ಶರೀರವಿಲ್ಲವೆಂದು ನಿರ್ವಾಣ ಶಬ್ದಕ್ಕೆ ಅರ್ಥ ಮಾಡಬಾರದು. ವೇದಗಳಲ್ಲಿ ಪರಮಾತ್ಮನಿಗೆ, **"ಆದಿತ್ಯವರ್ಣಂ ತಮಸಃ**

**ಪರಸ್ತಾತ್''** ಇತ್ಯಾದಿ ಸ್ಥಳದಲ್ಲಿ ಅಪ್ರಾಕೃತವಾದ ಶರೀರ ಉಂಟೆಂದು ಹೇಳಿದ್ದಾರೆ.

ಇಷ್ಟು ಬ್ರಹ್ಮಜ್ಞಾನದ ಮಹಿಮೆಯನ್ನು ಹೇಳಿ ಆ ಬ್ರಹ್ಮಜ್ಞಾನ ಸಾಧನವಾದ ನಿಷ್ಕಾಮಕರ್ಮವನ್ನು ಮಾಡೆಂದು ಶ್ರೀಕೃಷ್ಣನು ಅರ್ಜುನನಿಗೆ ತಿಳಿಸಿ ಈ ದ್ವಿತೀಯ ಅಧ್ಯಾಯವನ್ನು ಮುಗಿಸುತ್ತಾನೆ. (ಎಂಟನೆಯ ದಿನದ ಉಪನ್ಯಾಸವು ಮುಗಿಯಿತು)

***

# ಮೂರನೆಯ ಅಧ್ಯಾಯ

ಅರ್ಜುನನು ಶ್ರೀಕೃಷ್ಣ ಪರಮಾತ್ಮನನ್ನು ಕುರಿತು ಪ್ರಶ್ನೆ ಮಾಡುತ್ತಾನೆ: "ಎಲೋ ಶ್ರೀಕೃಷ್ಣನೇ! ಕಾಮ್ಯಕರ್ಮವನ್ನು ಬಿಟ್ಟು ಜ್ಞಾನೋಪಾಯವಾದ ನಿಷ್ಕಾಮ ಕರ್ಮವನ್ನು ಆಚರಿಸಬೇಕೆಂದು ಒಮ್ಮೆ ಹೇಳುತ್ತಿ. ಮತ್ತೊಮ್ಮೆ ಯುದ್ಧವನ್ನು ಮಾಡೆಂದು, ಕಾಮ್ಯಕರ್ಮವನ್ನು ವಿಧಾನ ಮಾಡುತ್ತೀ. ಯುದ್ಧವು ಕಾಮ್ಯಕರ್ಮವೆಂಬುವುದು "ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇ ಮಹೀಂ = ಯುದ್ಧದಲ್ಲಿ ನೀನು ಸತ್ತರೆ ಸ್ವರ್ಗವು ಫಲ, ಜಯಿಸಿದರೆ ರಾಜ್ಯಭೋಗ" ಎಂಬುದಾಗಿ ನೀನು ಫಲವನ್ನು ಹೇಳಿದ್ದರಿಂದ ತಿಳಿಯುತ್ತದೆ. ಆದರೆ ನಿನ್ನ ಅಭಿಪ್ರಾಯವು ಹೀಗಿರಬಹುದು. ಒಂದೇ ಕರ್ಮವು ಫಲಾಕಾಂಕ್ಷೆಯಿಂದ ಮಾಡಿದಾಗ ಕಾಮ್ಯವೆಂದು ಅನಿಸಿಕೊಂಡರೂ ಫಲಾಕಾಂಕ್ಷೆ ಇಲ್ಲದೆ ಮಾಡಿದಾಗ ಅದೇ ಕರ್ಮವು ನಿಷ್ಕಾಮವೆಂದು ಹೇಳಲ್ಪಡುವುದು. ಪ್ರಕೃತದಲ್ಲಿ ಯುದ್ಧವನ್ನು ಭಗವತ್ಪ್ರೀತ್ಯರ್ಥವಾಗಿ ಮಾಡಿದಾಗ ಯುದ್ಧವು ನಿಷ್ಕಾಮಕರ್ಮವಾಗುವುದು ಎಂದು ನಿನ್ನ ಅಭಿಪ್ರಾಯವಾದರೆ ಯುದ್ಧ ಎಂಬ ನಿಷ್ಕಾಮಕರ್ಮಕ್ಕಿಂತಲೂ ಸನ್ಯಾಸಿಗಳು ಅನುಷ್ಠಾನಮಾಡುವ ಶಮದಮಾದಿ ಧರ್ಮಗಳು ಶ್ರೇಷ್ಠ ನಿಷ್ಕಾಮಧರ್ಮವು. ಯುದ್ಧವು ಬಹಳ ಘೋರವಾದ, ಮತ್ತು ರಾಗದ್ವೇಷ ಮೂಲಕವಾದ ಕರ್ಮವಾದ್ದರಿಂದ ನಿಕೃಷ್ಟವಾಗಿದೆ. ಉತ್ತಮವಾದ ಧರ್ಮವನ್ನು ಅನುಷ್ಠಾನ ಮಾಡೆಂದು ಉಪದೇಶಿಸುವುದನ್ನು ಬಿಟ್ಟು ನಿಕೃಷ್ಟವಾದ ಯುದ್ಧವನ್ನು ಮಾಡೆಂದು ಯಾಕೆ ವಿಧಿಸುತ್ತೀ?"

ಇದಕ್ಕೆ ಶ್ರೀಕೃಷ್ಣನು ಸಮಾಧಾನವನ್ನು ಹೇಳುತ್ತಾನೆ: "ಎಲೋ ಅರ್ಜುನಾ! ಮೋಕ್ಷಸಾಧನವಾದ ಮಾರ್ಗವು ಎರಡು ಪ್ರಕಾರವಾಗಿದೆ. ಜ್ಞಾನಯೋಗ, ಮತ್ತು ಕರ್ಮಯೋಗ ಎಂಬುದಾಗಿ. ಜ್ಞಾನಯೋಗವೆಂದರೆ ತಾವು ಮಾಡುವ ಕರ್ಮಕ್ಕಿಂತಲೂ ಜ್ಞಾನವು ಹೆಚ್ಚಾಗಿರಬೇಕು. ಕರ್ಮಯೋಗವೆಂದರೆ ತಮ್ಮಲ್ಲಿರುವ ಜ್ಞಾನಕ್ಕಿಂತಲೂ ಕರ್ಮವು ಹೆಚ್ಚಾಗಿರಬೇಕು. ಹಾಲು ನೀರು

ಬೆರೆಸಿದಾಗ ಹಾಲು ಹೆಚ್ಚಾಗಿದ್ದರೆ ಅದನ್ನೆ ಹಾಲೆಂತೆಂದು, ನೀರು ಹೆಚ್ಚಿದ್ದರೆ ನೀರೆಂದೂ ಲೋಕದಲ್ಲಿ ವ್ಯವಹಾರ ಮಾಡುವಂತೆ ಜ್ಞಾನಯೋಗ, ಕರ್ಮಯೋಗವೆಂಬ ವ್ಯವಹಾರ. ಜ್ಞಾನಯೋಗಕ್ಕೆ ಅಧಿಕಾರಿಗಳು ಸನಕಾದಿ ಋಷಿಗಳು. ಕರ್ಮಯೋಗಕ್ಕೆ ಅಧಿಕಾರಿಗಳು ಇಂದ್ರಾದಿ ದೇವತೆಗಳು, ಜನಕ-ಪ್ರಿಯವ್ರತಾದಿ ಮಹಾರಾಜರುಗಳು, ಇಂದ್ರಾವತಾರನಾದ ನೀನು ಕೂಡ. ಆದ್ದರಿಂದ ಜ್ಞಾನಯೋಗಿಗಳಾದ ಸನಕಾದಿಗಳು ತಮಗೆ ಯೋಗ್ಯವಾದ ಜ್ಞಾನಯೋಗದಿಂದಲೇ ಮುಕ್ತಿಯನ್ನು ಹೊಂದುವಂತೆ, ಕರ್ಮಯೋಗಿಗಳಾಗಿರತಕ್ಕವರು ತಮಗೆ ಯೋಗ್ಯವಾದ ಕರ್ಮಯೋಗದಿಂದಲೇ ಮೋಕ್ಷವನ್ನು ಪಡೆಯಬೇಕು. ಆದ್ದರಿಂದ ಕರ್ಮಯೋಗಿಯಾದ ನೀನು ನಿನಗೆ ಉಚಿತವಾದ ಕರ್ಮಯೋಗವನ್ನೇ ಮಾಡಬೇಕು.

ಮೋಕ್ಷಕ್ಕೆ ನೈಷ್ಕರ್ಮ್ಯ ಎಂಬ ಹೆಸರು ಇರುವುದನ್ನು ನೋಡಿ, ನೈಷ್ಕರ್ಮ್ಯವೆಂದರೆ ಕರ್ಮ ಮಾಡದೇ ಇದ್ದವರಿಗೆ ಸಿಗತಕ್ಕದ್ದೆಂದು ಅರ್ಥ ಇಟ್ಟುಕೊಂಡು ಕರ್ಮ ಮಾಡುವುದಿಲ್ಲವೆಂದು ನೀನು ಹೇಳುವ ಸಂಭವವಿದೆ. ಆದರೆ ಈ ಅರ್ಥವು ನೈಷ್ಕರ್ಮ್ಯ ಶಬ್ದಕ್ಕೆ ಯುಕ್ತವಲ್ಲ. ಕಾಮ್ಯಕರ್ಮ ಮಾಡದೇ ಇದ್ದವರಿಗೆ ಸಿಗತಕ್ಕದ್ದು ಮೋಕ್ಷ ಎಂಬ ಅಭಿಪ್ರಾಯದಿಂದಲೇ ನೈಷ್ಕರ್ಮ್ಯವೆಂಬ ಹೆಸರು ಬಂತೆಂದು ಹೇಳುವುದು ಯೋಗ್ಯವಾಗಿದೆ. ಯಾಕೆಂದರೆ ಕರ್ಮ ಮಾಡದೇ ಇದ್ದವರಿಗೆ ಮೋಕ್ಷ ಸಿಗುವುದಾದರೆ, ಕರ್ಮ ಮಾಡದೇ ಇರುವವು ಮರ-ಗಿಡಗಳು. ಆ ಜನ್ಮಗಳು ಜೀವರಿಗೆ ಎಷ್ಟೋ ಸಲ ಬಂದಿದೆ. ಆದರೆ ಇನ್ನೂ ನಾವು ಸಂಸಾರದಲ್ಲಿಯೇ ಇದ್ದೇವೆ. ಆದುದರಿಂದ ಕರ್ಮ ಮಾಡದೇ ಇದ್ದ ಮಾತ್ರಕ್ಕೆ ಮೋಕ್ಷವು ಸಿಗಲಾರದು.

ಅಥವಾ, 'ಕರ್ಮವು ಸಂಸಾರಕ್ಕೆ ಬೀಜವಾದುದರಿಂದ ಅಂತಹ ಕರ್ಮವನ್ನೇ ನಾವು ಇಲ್ಲದಂತೆ ಮಾಡಿದರೆ ಸಂಸಾರ ವೃಕ್ಷವು ಸ್ವತಃ ನಾಶವಾಗುವುದು. ಅಂದರೆ ಇಷ್ಟರವರೆಗೆ ಮಾಡಿದ ಕರ್ಮದ ಫಲವನ್ನು ಭೋಗಿಸಿ, ಇನ್ನು ಮೇಲೆ ಕರ್ಮವನ್ನು ಮಾಡದೆ ಇದ್ದರೆ ಬೀಜವೇ ಇಲ್ಲದಂತಾಗಿ ಸಂಸಾರ ನಾಶವಾಗಿ ಮೋಕ್ಷವಾಗಬಹುದು' ಎಂದು ನೀನು ಶಂಕಿಸುವ ಸಂಭವವಿದೆ. ಆದರೆ

ಇದು ಸಾಧ್ಯವಿಲ್ಲ. ಇಷ್ಟರವರೆಗೆ ಸಂಸಾರದಲ್ಲಿ ಮಾಡಿದ ಕರ್ಮವು ಅನಂತವಾಗಿದೆ. ಆ ಕರ್ಮಗಳನ್ನು ಭೋಗಿಸುತ್ತಿರುವ ಕಾಲಕ್ಕೆ ಪುನಃ ಕರ್ಮಗಳನ್ನು ಮಾಡುತ್ತಾನೆ. ಪುರುಷನಿಗಾಗಲಿ ಸ್ತ್ರೀಯರಿಗಾಗಲಿ ಹದಿನಾಲ್ಕು ವರ್ಷ ವಯಸ್ಸಿನವರೆಗೆ ಕರ್ಮದ ಫಲವು ಅಲ್ಪವಾಗಿದ್ದರೂ ಅನಂತರ ಪ್ರತಿ ದಿವಸವೂ ಕಡಿಮೆ ಎಂದರೂ ಹತ್ತು ಜನ್ಮಕ್ಕೆ ಬೇಕಾಗುವಷ್ಟು ಕರ್ಮ ಮಾಡುತ್ತಾನೆ. ಈ ರೀತಿ ಕರ್ಮದ ಫಲವನ್ನು ಭೋಗಿಸುತ್ತಾ, ಪುನಃ ಕರ್ಮವನ್ನು ಮಾಡುತ್ತ ಇರತಕ್ಕವನು ಕರ್ಮವನ್ನು ಇಲ್ಲದಂತೆ ಮಾಡುವುದು ಹೇಗೆ?

ಸ್ವರ್ಗ ನರಕಾದಿಗಳಲ್ಲಿ ಕರ್ಮದ ಫಲವನ್ನು ಭೋಗಿಸುವಾಗ ಅದು ಕರ್ಮ ಭೂಮಿ ಆಗದಿದ್ದ ಪ್ರಯುಕ್ತ ಅಲ್ಲಿ ಪುನಃ ಬೇರೆ ಕರ್ಮಗಳನ್ನು ಮಾಡದಿದ್ದರೂ, ಅಲ್ಲಿ ಭೋಗಿಸಿ (ಒಂದು ಪಾತ್ರೆಯಲ್ಲಿ ಇದ್ದ ಎಣ್ಣೆಯನ್ನು ಇನ್ನೊಂದು ಪಾತ್ರೆಗೆ ಹಾಕುವಾಗ ಆ ಪಾತ್ರೆಯಲ್ಲಿ ಇನ್ನೂ ಉಳಿದಿರುವಂತೆ) ಸ್ವಲ್ಪ ಕರ್ಮ ಉಳಿದಿರುವಾಗ ಭೂಮಿಗೆ ಅವನು ಬರಬೇಕಾಗುತ್ತದೆ. ಇಲ್ಲಿ ಬಂದ ಮೇಲೆ ಪುನಃ ಕರ್ಮ ಮಾಡಿಯೇ ಮಾಡುತ್ತಾನೆ. ಆದ್ದರಿಂದ ಕರ್ಮರೂಪ ಬೀಜವನ್ನು ಭೋಗದಿಂದ ನಾಶಮಾಡಲು ಸಾಧ್ಯವಿಲ್ಲ.

ಅರ್ಜುನನು ಶಂಕಿಸುತ್ತಾನೆ: "ಸ್ವಾಮಿ! ನಿಷ್ಕಾಮಕರ್ಮಯೋಗವು ಫಲರಹಿತವಾದದ್ದು, ಆದುದರಿಂದ ನಿಷ್ಕಾಮ ಕರ್ಮದಂತೆ ಕರ್ಮ ಅಕರಣವು (ಕರ್ಮ ಮಾಡದೇ ಇರುವುದು) ಕೂಡ ಮೋಕ್ಷಸಾಧನವು ಏಕೆ ಆಗಬಾರದು? ಇದೇ ರೀತಿ ಸನ್ಯಾಸಾಶ್ರಮವು ಸ್ವರ್ಗಾದಿ ಫಲರಹಿತವಾದದ್ದು. ಅದು ಮೋಕ್ಷಸಾಧನವಾಗಿದೆ. ಅದರಂತೆ ಕರ್ಮ ಅಕರಣವು ಸ್ವರ್ಗಾದಿ ಫಲಕ್ಕೆ ಸಾಧನವಾಗದ್ದರಿಂದಲೇ ಮೋಕ್ಷಸಾಧನವಾಗಬೇಕಲ್ಲವೆ?"

ಶ್ರೀಕೃಷ್ಣಪರಮಾತ್ಮನು ಸಮಾಧಾನವನ್ನು ಹೇಳುತ್ತಾನೆ: "ಎಲೋ ಅರ್ಜುನಾ! ನಿಷ್ಕಾಮಕರ್ಮವು ನಿಷ್ಫಲವೆಂದು ತಿಳಿಯಬೇಡ. ಆದರಿಂದ ಚಿತ್ತಶುದ್ಧಿಯಾಗಿ ಬ್ರಹ್ಮಜ್ಞಾನ ಉಂಟಾಗುವುದು. ಬ್ರಹ್ಮಜ್ಞಾನದಿಂದ ಮೋಕ್ಷ-ವಾಗುವುದು. ಸನ್ಯಾಸಾಶ್ರಮವು ಕೂಡ ಎಲ್ಲ ಬಾಹ್ಯ ವ್ಯಾಪಾರವನ್ನು ಪರಿತ್ಯಾಗ ಮಾಡಿ, ಮನಸ್ಸನ್ನು ಅಚಲವಾಗಿ ಪರಮಾತ್ಮನಲ್ಲಿಟ್ಟು, ಪರಮಾತ್ಮನ ವಿಶೇಷವಾದ

ಅನುಗ್ರಹಕ್ಕೆ ಸಾಧನವಾಗಿದೆ. ಹಾಗೇ ಮೋಕ್ಷಸಾಧನವೂ ಆಗಿದೆ. ಈ ಎರಡು ದೃಷ್ಟಾಂತಗಳನ್ನು ನೋಡಿದರೆ ಕರ್ಮ ಅಕರಣವನ್ನು ಮೋಕ್ಷಸಾಧನವೆಂದು ಹೇಳಲು ಸಾಧ್ಯವಿಲ್ಲ. ಯಾಕೆಂದರೆ ಕರ್ಮ ಅಕರಣದಿಂದ ಸ್ವರ್ಗಾದಿಗಳು ಹೇಗೆ ಇಲ್ಲವೋ, ಚಿತ್ತ ಶುದ್ಧಿಯಾಗಲಿ ಭಗವದನುಗ್ರಹ ವಿಶೇಷವಾಗಲಿ ಆಗುವ ಸಂಭವವಿಲ್ಲ. ಆದುದರಿಂದ ನಿಷ್ಕಾಮಕರ್ಮ, ಸನ್ನ್ಯಾಸಾಶ್ರಮ – ಇವುಗಳಿಗೂ ಕರ್ಮ ಅಕರಣಕ್ಕೂ ಬಹಳ ವ್ಯತ್ಯಾಸ ಇರುವುದರಿಂದ, ಅವುಗಳಂತೆ ಕರ್ಮ ಅಕರಣವನ್ನು ಮೋಕ್ಷಸಾಧನವೆಂದು ಹೇಳುವುದು ಸರಿಯಲ್ಲ.

"**ಕರ್ಮಣಾ ಬಧ್ಯತೇ ಜಂತುಃ** = ಕರ್ಮದಿಂದ ಜೀವನು ಸಂಸಾರಬಂಧ ಉಳ್ಳವನಾಗುತ್ತಾನೆ" ಎಂದು ನೀನು ಶಂಕಿಸುವುದಾದರೆ, ಕರ್ಮವನ್ನು ಸರ್ವಥಾ ಬಿಟ್ಟುಬಿಡಲು ಸಾಧ್ಯವೇ ಇಲ್ಲದ ಕಾರಣ ಈ ವಾಕ್ಯಕ್ಕೆ ಬೇರೆ ಅರ್ಥವನ್ನೇ ಮಾಡಬೇಕು. ಯಾಕೆಂದರೆ ಜೀವನು ಒಂದು ಕ್ಷಣದಲ್ಲಿಯೂ ಸಹ ಕರ್ಮವನ್ನು ಮಾಡದೇ ಇರುವುದಿಲ್ಲ. ಪ್ರಯತ್ನಪಟ್ಟು ಬಾಹ್ಯ ವ್ಯಾಪಾರವನ್ನು ನಿಲ್ಲಿಸಿದ್ದರೂ ಶ್ವಾಸೋಚ್ಛ್ವಾಸಗಳಾಗಲೀ, ಅಥವಾ ಮನಸ್ಸಿನ ಅನೇಕ ವಿಚಾರಗಳಾಗಲಿ ಯಾವುದಾದರೊಂದು ಕಾರ್ಯ ನಡೆದೇ ನಡೆಯುತ್ತದೆ. ಈ ಜೀವನು ಪರಮಾತ್ಮನ ಅಧೀನನಾದುದರಿಂದ, ಸತ್ವಾದಿಗುಣ ನಿಮಿತ್ತದಿಂದ ಈಶ್ವರನ ಇಚ್ಛೆಗೆ ಅನುಸಾರವಾಗಿ ಕರ್ಮವನ್ನು ಮಾಡದೇ ಇರಲು ಸಮರ್ಥನಾಗುವುದಿಲ್ಲ.

'ಯಜ್ಞಾದಿ ಕರ್ಮಗಳನ್ನು ಬಿಡುತ್ತೇನೆ, ಇತರ ಕರ್ಮಗಳನ್ನು ಮಾಡುತ್ತೇನೆ' ಎಂದು ನೀನು ಶಂಕಿಸಬಹುದು. ಆದರೆ ಮೋಕ್ಷಕ್ಕಾಗಲಿ, ಬಂಧಕ್ಕಾಗಲಿ ಮನಸ್ಸು ಮುಖ್ಯ ಕಾರಣವಾಗಿದೆ. ಒಬ್ಬನು ವಿಷಯಗಳ ದೆಶೆಯಿಂದ ಇಂದ್ರಿಯಗಳನ್ನು ಆಕರ್ಷಣ ಮಾಡಿ ಯೋಗಿಯಂತೆ ಸುಮ್ಮನೆ ಕುಳಿತಿದ್ದು ಮನಸ್ಸಿನಲ್ಲಿ ಮಾತ್ರ ವಿಷಯಗಳನ್ನು ಚಿಂತಿಸುತ್ತಿದರೆ, ಅಂತಹ ಮೂಢಾತ್ಮನನ್ನು, ಜನರು ಡಾಂಭಿಕನೆಂದು ಕರೆಯುತ್ತಾರೆ. ಒಬ್ಬ ಪುರುಷನು ಮನಸ್ಸನ್ನು ನಿಗ್ರಹಿಸಿ, ವರ್ಣಾಶ್ರಮ ಕರ್ಮಗಳನ್ನು ಅನುಷ್ಠಾನ ಮಾಡುತ್ತಿದ್ದರೆ, ಅವನನ್ನು ಶ್ರೇಷ್ಠ ಪುರುಷನೆಂದು ಕರೆಯುತ್ತಾರೆ. ಆದ್ದರಿಂದ ಮನಃಶುದ್ಧಿಯು, ಮನೋನಿಗ್ರಹವು

ಮೋಕ್ಷಕ್ಕೆ ಅವಶ್ಯಕವಾದದ್ದು. ಇಂತಹ ಮನಃಶುದ್ಧಿಯನ್ನು ಸಂಪಾದಿಸಲಿಕ್ಕೆ ಸ್ವಾಶ್ರಮೋಚಿತ ಕರ್ಮರೂಪವಾದ ಯಜ್ಞವನ್ನು ಅನುಷ್ಠಾನ ಮಡುವದು ಒಂದೇ ಉಪಾಯ ಹೊರತು ಬೇರೆ ಉಪಾಯವಿಲ್ಲ. ನೀನು ಯಜ್ಞಾದಿ ಕರ್ಮಗಳನ್ನು ಬಿಟ್ಟರೆ, ನಿನ್ನ ಜೀವನದ ನಿರ್ವಾಹವೇ ಅಶಕ್ಯವಾಗಬಹುದು. ನಿನ್ನ ಜೀವನ-ಕ್ಕೋಸ್ಕರವಾಗಿ ಅನ್ಯಾಯಾರ್ಜಿತ ಧನವನ್ನು ತಂದರೆ ಪಾಪಕರ್ಮವನ್ನು ಮಾಡಿದಂತಾಯಿತು. ನ್ಯಾಯಾರ್ಜಿತ ಧನವನ್ನು ತಂದು ಜೀವನ ಮಾಡಿದರೂ ಆಹಾರ ಪದಾರ್ಥವನ್ನು ಬೇಯಿಸುವಾಗ ಅನೇಕ ಪ್ರಾಣಿಗಳ ಹಿಂಸೆ ಪ್ರಾಪ್ತವಾಗುವುದರಿಂದ ಪಾಪಕರ್ಮವು ಸಂಭವಿಸದೇ ಇರದು. ಈ ಪಾಪಕರ್ಮದ ಪ್ರಾಯಶ್ಚಿತ್ತ ರೂಪವಾಗಿ ವೈಶ್ವದೇವಾದಿ ಯಜ್ಞಗಳನ್ನು ನೀನು ಮಾಡಿಯೇ ತೀರಬೇಕಾಗುತ್ತದೆ.

ಆದ್ದರಿಂದ **"ಕರ್ಮಣಾ ಬಧ್ಯತೇ ಜಂತುಃ"** ಅಂದರೆ 'ಪರಮಾತ್ಮನ ಮತ್ತು ಅವನ ಭಕ್ತರಾದ ದೇವತೆಗಳ ಆರಾಧನ ರೂಪವಾಗಿ ಮಾಡತಕ್ಕ ಕರ್ಮ ಬಿಟ್ಟು ಉಳಿದ ಕರ್ಮವೇ ಬಂಧಕ' ಎಂದು ಅರ್ಥ ಮಾಡಬೇಕು. ಆದ್ದರಿಂದ ಭಗವದಾರಾಧನ ರೂಪವಾದ ಯಜ್ಞಾದಿ ಕರ್ಮವನ್ನು ಮಾಡು."

"ಸೃಷ್ಟ್ಯಾದಿಯಲ್ಲಿ ಪರಮಾತ್ಮನು ಪ್ರಜೆಗಳನ್ನು ಅವರವರ ವರ್ಣಾಶ್ರಮೋ-ಚಿತವಾದ ಕರ್ಮವೆಂಬ ಯಜ್ಞದಿಂದ ಸಹಿತರಾಗಿ ಸೃಷ್ಟಿ ಮಾಡಿ ಅವರಿಗೆ ಈ ತರಹದ ಉಪದೇಶ ಮಾಡಿದನು:

'ಎಲೋ ಪ್ರಜೆಗಳಿರಾ! ನಿಮ್ಮ ಮನೋಭೀಷ್ಟಗಳನ್ನು, ಈ ಯಜ್ಞಾನುಷ್ಠಾನದಿಂದ ಸಾಧಿಸಿಕೊಳ್ಳಿರಿ. ಆ ದೇವತೆಗಳು ನಿಮ್ಮ ಯಜ್ಞದಿಂದ ಸಂತುಷ್ಟರಾಗಿ ನಿಮ್ಮ ಮನೋಭೀಷ್ಟವನ್ನು ಪೂರೈಸುತ್ತಾರೆ. ಅವರು ನಿಮಗೆ ಕೊಟ್ಟ ಭೋಗ್ಯ ಪದಾರ್ಥವನ್ನು ಆ ದೇವತೆಗಳಿಗೆ ಸಮರ್ಪಿಸಿ ಆ ಯಜ್ಞಶಿಷ್ಟವಾದದ್ದನ್ನು ಭೋಜನ ಮಾಡಿರಿ. ಅವರು ತಮ್ಮ ಆರಾಧನೆ-ಗೋಸ್ಕರವಾಗಿ ಕೊಟ್ಟ ವಸ್ತುವನ್ನು, ಅವರಿಗೆ ಸಮರ್ಪಿಸದೆ ಭೋಗಿಸಿದರೆ ಅವನು ಕಳ್ಳನಾಗುವನು. ರಾಜನು ಪ್ರಜೆಗಳಿಗೆ ಭೂಮಿಯನ್ನು ಕೊಡುತ್ತಾನೆ. ಆ ಭೂಮಿಗೆ

ಪ್ರತಿ ವರುಷ ಕೊಡತಕ್ಕ ತೆರಿಗೆ ಹಣವನ್ನು ಸಲ್ಲಿಸದೆ ಭೋಗಿಸಿದರೆ, ಭೋಗಿಸಿದವನು ಕಳ್ಳನೆಂದು ಕರಸಿಕೊಳ್ಳಲ್ಪಡುತ್ತಾನೆ. ಅವನು ಶಿಕ್ಷೆಗೆ ಅರ್ಹನಾಗುತ್ತಾನೆ. ಹಾಗೆ ದೇವತಾರಾಧನೆ ಮಾಡದೇ ಭೋಗಿಸತಕ್ಕವನು, ಕಳ್ಳನೆಂದು ಅನಿಸಿಕೊಂಡು, ಆ ವಸ್ತುಗಳನ್ನು ಭೋಗಿಸಿದ್ದರಿಂದ ಮಹಾ ಪಾಪವನ್ನು ಸಂಪಾದಿಸುತ್ತಾನೆ. ಯಜ್ಞಶಿಷ್ಟವಾದ ಅಮೃತವನ್ನು ಭೋಗಿಸತಕ್ಕವರು ಸಮಸ್ತ ಪಾಪವನ್ನು ಪರಿಹಾರ ಮಾಡಿಕೊಳ್ಳುತ್ತಾರೆ.'

"ಆದುದರಿಂದ ಎಲೋ ಅರ್ಜುನ! ದೇವತಾರಾಧನರೂಪ ಯಜ್ಞಾದಿ ಕರ್ಮಗಳನ್ನು ಅವಶ್ಯ ಮಾಡಬೇಕು. ಸಮಸ್ತ ಪ್ರಾಣಿಗಳಿಗೆ ಅಭಯದಾನ, ಶಾಸ್ತ್ರಾಧ್ಯಯನ, ಶಾಸ್ತ್ರ ಪ್ರವಚನ ಮತ್ತು ಕೃಚ್ಛ್ರಚಾಂದ್ರಾಯಣಾದಿ ತಪಸ್ಸು – ಈ ಮೂರು ಸನ್ನ್ಯಾಸಿಗಳು ಅವಶ್ಯ ಮಾಡತಕ್ಕದ್ದು. ಗೃಹಸ್ಥಾಶ್ರಮಿಗಳ ಪಂಚ ಯಜ್ಞಾದಿ ಕರ್ಮಗಳು ಯಾವುವೆಂದರೆ ಬ್ರಹ್ಮಯಜ್ಞ, ಪಿತೃಯಜ್ಞ, ಮನುಷ್ಯ-ಯಜ್ಞ, ವೈಶ್ವದೇವ ಮತ್ತು ಭೂತಯಜ್ಞ. ವೈಶ್ವದೇವದಿಂದ ದೇವತೆಗಳ ಪ್ರೀತಿ, ಶ್ರಾದ್ಧ-ತರ್ಪಣಾದಿ ಪಿತೃಯಜ್ಞದಿಂದ ಪಿತೃಗಳ ಪ್ರೀತಿ, ಬ್ರಹ್ಮಯಜ್ಞದಿಂದ ಋಷಿಗಳ ಪ್ರೀತಿ, ಅತಿಥಿ ಅಭ್ಯಾಗತರ ಸತ್ಕಾರರೂಪ ಮನುಷ್ಯ ಯಜ್ಞದಿಂದ ಮನುಷ್ಯರ ಪ್ರೀತಿ, ಬಲಿಹರಣಾದಿ ಭೂತಯಜ್ಞದಿಂದ ಇತರ ಪ್ರಾಣಿಗಳ ಪ್ರೀತಿಯನ್ನು ಸಂಪಾದಿಸಿದಂತಾಗುತ್ತದೆ. ಅಲ್ಲದೇ ಅನ್ನಾದಿ ದಾನವನ್ನು ಶಾಸ್ತ್ರಾಭ್ಯಾಸವನ್ನು ಮಾಡಬೇಕು. ಬ್ರಹ್ಮಚಾರಿಯು ಭಿಕ್ಷಾಟನದಿಂದ ವೇದಾಧ್ಯಯನ ಮಾಡುತ್ತ, ಗುರುಕುಲದಲ್ಲಿ ವಾಸಮಾಡಿ ಗುರುಸೇವೆಯನ್ನು ಮಾಡಬೇಕು. ವಾನಪ್ರಸ್ಥನು ಅರಣ್ಯದಲ್ಲಿ ವಾಸಮಾಡಿ ಮಳೆ, ಬಿಸಿಲು ಮುಂತಾದುವನ್ನು ಸಹನ ಮಾಡಿಕೊಂಡು ಕಂದಮೂಲ-ಫಲಗಳನ್ನು ಭೋಜನ ಮಾಡುತ್ತ, ತಾನು ತಿನ್ನಬೇಕಾದ್ದ ವಸ್ತುಗಳ ಭಾಗವನ್ನು ಇತರರಿಗೆ ದಾನ ಮಾಡುತ್ತ ತಪಸ್ಸು ಮಾಡುತ್ತಿರಬೇಕು. ಈ ರೀತಿ ಕರ್ಮಾಚರಣೆಯನ್ನು ಎಲ್ಲರೂ ಮಾಡಬೇಕು. ಮಾಡದಿದ್ದರೆ, ಈ ಜಗತ್ತನ್ನೇ ನಾಶ ಮಾಡಿದ ಪಾಪವು ಅವರಿಗೆ ಉಂಟಾಗುವುದು.

ಅದು ಹೇಗೆಂದರೆ, ಈ ಜಗಚ್ಚಕ್ರವು ನಡೆಯುವ ಕ್ರಮ ಹೀಗಿದೆ: ಅನ್ನದಿಂದ ಪ್ರಾಣಿಗಳ ಸೃಷ್ಟಿಯಾಗುತ್ತದೆ. ಪ್ರಾಣಿಗಳು ವೇದವನ್ನು ಅಧ್ಯಯನ ಮಾಡುತ್ತಾರೆ. ಅದರಿಂದ ಬ್ರಹ್ಮಜ್ಞಾನವು ಉತ್ಪನ್ನವಾಗುತ್ತದೆ. ಯಥಾವತ್ತಾಗಿ ತಿಳಿಯಲ್ಪಟ್ಟ ಪರಬ್ರಹ್ಮನು ಆ ಜ್ಞಾನದಿಂದ ಪ್ರಸನ್ನನಾಗಿ ನಮ್ಮಶರೀರದಲ್ಲಿ ಸತ್ಕ್ರಿಯೆಗಳನ್ನು ಮಾಡಿಸುತ್ತಾನೆ. ಅದರಿಂದ ಯಜ್ಞಾದಿ ಕರ್ಮಗಳು ಆಗುವವು. ಯಜ್ಞಾದಿಕರ್ಮಗಳಿಂದ ಪ್ರಸನ್ನರಾದ ದೇವತೆಗಳು ಮೇಘವನ್ನು ಸೃಷ್ಟಿಮಾಡಿ ಮಳೆ ಸುರಿಸಿ ಅನ್ನವನ್ನು ಸೃಷ್ಟಿ ಮಾಡುವರು. ಅನ್ನದಿಂದ ಪ್ರಾಣಿಗಳ ಉತ್ಪತ್ತಿ.

ಈ ತರಹನಾದ ಜಗಚ್ಚಕ್ರದಲ್ಲಿ ಯಜ್ಞಾದಿ ಕರ್ಮವು ಸೇರಿದ್ದರಿಂದ, ಯಜ್ಞಾದಿ ಕರ್ಮಗಳನ್ನು ಮಾಡದಿದ್ದರೆ ಜಗತ್ತೇ ನಡೆಯಲಾರದು. ಆದುದರಿಂದ ಜಗತ್ತಿನ ಸ್ಥಿತಿಗೆ ಕಾರಣವಾದ ಯಜ್ಞಾದಿ ಕರ್ಮವು ತನಗೆ ಮಾತ್ರವಲ್ಲದೆ ಇಡೀ ಜಗತ್ತಿಗೇ ಉಪಕಾರವಾದ ಕೆಲಸ. ಆದ್ದರಿಂದ ಅವಶ್ಯ ಇದನ್ನು ಮಾಡಬೇಕು. ಮಾಡದಿದ್ದವನ ಆಯುಷ್ಯವು ಪಾಪಕ್ಕೆ ಸಾಧನವಾದದ್ದರಿಂದ ಅವನ ಜೀವನವು ವ್ಯರ್ಥ" ಎಂದು ಶ್ರೀಕೃಷ್ಣ ಪರಮಾತ್ಮನು ಅರ್ಜುನನಿಗೆ ಉಪದೇಶ ಮಾಡಿದನು.

ಇದರಿಂದ ಕೆಲವರ ಶಂಕೆಯು ಪರಿಹೃತವಾಯಿತು. ಏನೆಂದರೆ, ಆಧುನಿಕರು ಕೆಲವರು "ಯಾವ ಲೊಕೋಪಕಾರವೂ ಇಲ್ಲದ ಯಜ್ಞಾದಿ-ಕರ್ಮದಿಂದ ಏನು ಪ್ರಯೋಜನ? ಅಂತಹ ವ್ಯರ್ಥವಾದ ಕಾರ್ಯವನ್ನು ಮಾಡಬಾರದು. ಬೇರೆ ಏನಾದರೂ ಸಮಾಜ ಸೇವೆಯನ್ನು ಮಾಡಬೇಕು" ಎಂದು ಹೇಳುತ್ತಿದ್ದಾರೆ. ಇಲ್ಲಿ ಶ್ರೀಕೃಷ್ಣನು "ವರ್ಣಾಶ್ರಮೋಚಿತ ಕರ್ಮಾನುಷ್ಠಾನವು ಆತ್ಮೋದ್ಧಾರ ಮತ್ತು ಜಗತ್ತಿನ ಸ್ಥಿತಿಗೆ ಅಂದರೆ ಪ್ರಾಣಿಗಳ ಜೀವನಕ್ಕೆ ಮುಖ್ಯ ಸಾಧನವಾಗಿದೆ" ಎಂದು ಹೇಳಿದ್ದರಿಂದ ಯಜ್ಞಾದಿಕರ್ಮಗಳ ವಿಷಯದಲ್ಲಿ ಆಕ್ಷೇಪಕ್ಕೆ ಅವಕಾಶವಿಲ್ಲ.

ಆದರೆ ಆಧುನಿಕರು ಇಷ್ಟು ಆಕ್ಷೇಪಿಸಬಹುದು: 'ಯಜ್ಞಾದಿಕರ್ಮಗಳಿಂದ ಮಳೆಯು ಬರುತ್ತದೆಂದು ಹೇಳಿದರೆ ನಾವು ಒಪ್ಪಲಾರೆವು. ಈಗ ನಾವು ಯಜ್ಞ

ಮಾಡಿ ನೋಡುವ. ಮಳೆಯು ಬರುವುದೇ ಇಲ್ಲ. ಒಮ್ಮೊಮ್ಮೆ ಯಜ್ಞ ಮಾಡದಿದ್ದಾಗಲೂ ಮಳೆ ಬರುತ್ತದೆ. ಆದ್ದರಿಂದ ಯಜ್ಞವು ಮಳೆಗೆ ಸಾಧನ-ವೆಂಬುದು ಹೇಗೆ ಕೂಡುತ್ತದೆ?' ಎಂದು. ಆ ವಿಷಯದಲ್ಲಿ ಶ್ರೀಕೃಷ್ಣನ ಅಭಿಪ್ರಾಯವನ್ನು ಈ ರೀತಿ ತಿಳಿಯಬೇಕು: ವೈದ್ಯಶಾಸ್ತ್ರದ ಪ್ರಕಾರ ವೈದ್ಯ-ಶಾಸ್ತ್ರದಲ್ಲಿ ಹೇಳಿದಂತೆ ಆಹಾರವನ್ನು ಸೇವಿಸಿದರೆ ಆರೋಗ್ಯವು ಉಂಟಾಗುತ್ತದೆ. ಇಲ್ಲವಾದರೆ ಇಲ್ಲ. ಇದು ಒಪ್ಪತಕ್ಕ ವಿಷಯವೋ ಹೇಗೆ? ವೈದ್ಯಶಾಸ್ತ್ರದಲ್ಲಿ ಹೇಳಿದಂತೆ ಆಹಾರವನ್ನು ಅನುಸರಿಸದೆ ಇದ್ದರೂ ಆರೋಗ್ಯಶಾಲಿಗಳಾಗಿದ್ದಾರೆ. ವೈದ್ಯಶಾಸ್ತ್ರದಲ್ಲಿ ಹೇಳಿದಂತೆ ಅನುಸರಿಸಿದ ಎಷ್ಟೋ ಜನರು ಅನಾರೋಗ್ಯ-ಶಾಲಿಗಳಾಗಿದ್ದಾರೆ. ಇದು ಪ್ರತ್ಯಕ್ಷ ಸಿದ್ಧವಾದರೂ ಇದಕ್ಕೇನು ಹೇಳಬೇಕು? ವೈದ್ಯಶಾಸ್ತ್ರದಲ್ಲಿ ಹೇಳಿದ ಪ್ರಕಾರ ಆಹಾರಾದಿಗಳನ್ನು ಅನುಸರಿಸಿದವರಿಗೆ ಈಗಿನ ಆರೋಗ್ಯಕ್ಕಿಂತಲೂ ಹೆಚ್ಚಿನ ಆರೋಗ್ಯ, ದೇಹದಲ್ಲಿ ಹೆಚ್ಚು ಬಲ, ಹೆಚ್ಚು ಆಯುಷ್ಯ, ಮನಸ್ಸಿನ ಹೆಚ್ಚಿನ ಏಕಾಗ್ರಾತೆಯು ಬರಬಹುದು. ವೈದ್ಯಶಾಸ್ತ್ರವನ್ನು ಅನುಸರಿಸಿದರೂ ದುರ್ಬಲರಾಗಲು ಅವರ ತಂದೆ ತಾಯಿಗಳ ದೋಷದಿಂದ ಬಂದ ಸ್ವಾಭಾವಿಕ ದೋಷವು ಕಾರಣ ಇತ್ಯಾದಿ ಸಮಾಧಾನಗಳನ್ನು ಊಹಿಸುವುದಾದರೆ, ಪ್ರಕೃತದಲ್ಲಿಯೂ ಯಜ್ಞಾದಿ ಕರ್ಮಗಳನ್ನು ಸರಿಯಾಗಿ ಮಾಡಿದಾಗ, ರಾಮಾ-ವತಾರದಲ್ಲಿನಷ್ಟು ಸುಭಿಕ್ಷೆಯು ಶಾಂತಿಯು ಬರಲಿಕ್ಕೆ ಉಂಟು. ಯಜ್ಞಾದಿ ಕರ್ಮಗಳನ್ನು ಮಾಡದಿದ್ದರೆ ಈ ಕಲಿಕಾಲದಲ್ಲಿ ತೋರುವಂತೆ ಅನೇಕ ಗಂಡಾಂತರಗಳು, ಅತಿವೃಷ್ಟಿ, ಅನಾವೃಷ್ಟಿಗಳು ಪ್ರಜೆಗಳಿಗೆ ಆಗುವುವು. ಒಮ್ಮೊಮ್ಮೆ ಯಜ್ಞಗಳನ್ನು ಮಾಡಿದರೂ ಮಳೆ ಬಾರದಿರಲು ಕಾರಣವೇನೆಂದರೆ ಯಜ್ಞ ಮಾಡಿದ ರೀತಿಯು ಸರಿಯಾಗದಿದ್ದ ಪ್ರಯುಕ್ತವಾಗಲಿ ಅವರವರ ಪಾಪ-ಕರ್ಮದಿಂದಾಗಾಲಿ ಕೂಡುತ್ತದೆ ಎಂದು ಶ್ರೀಕೃಷ್ಣನ ಅಭಿಪ್ರಾಯವು. ಅಂತು ಯಜ್ಞಾದಿ ಕರ್ಮಗಳು, ವೈದ್ಯಶಾಸ್ತ್ರವು ಪ್ರಾಣಿಗಳ ಆರೋಗ್ಯಕ್ಕೆ ಸಾಧನವಾದಂತೆ, ಪ್ರಾಣಿಗಳ ಸ್ಥಿತಿಗೆ ಸಾಧನವಾಗಿದೆ ಎಂಬುದರಲ್ಲಿ ಸಂದೇಹವಿಲ್ಲ.

ಶ್ರೀಕೃಷ್ಣ ಪರಮಾತ್ಮನು ಎಷ್ಟುಮಾತ್ರಕ್ಕೂ ಸುಳ್ಳು ಹೇಳತಕ್ಕವನಲ್ಲ. ಅವನ ಉಪದೇಶದಂತೆ, ಕೃತ ಯುಗಾದಿಗಳಲ್ಲಿಅನೇಕ ಮಹಾಪುರುಷರುಗಳು

ಅನುಷ್ಠಾನ ಮಾಡಿ ಆ ಫಲವನ್ನು ಅನುಭವಿಸಿದ್ದಾರೆ ಎಂಬುದಕ್ಕೆ ಆಧಾರವಿದೆ. ಆದುದರಿಂದ ಅಲ್ಪ ಬುದ್ಧಿಗಳಾದ ಆಧುನಿಕರು ಶ್ರೀಕೃಷ್ಣನ ಉಪದೇಶವನ್ನು ಅಲ್ಲಗಳೆಯಲು ಅಸಮರ್ಥರಾಗಿದ್ದಾರೆ.

ಇನ್ನು ಅರ್ಜುನನು ಶ್ರೀಕೃಷ್ಣ ಪರಮಾತ್ಮನನ್ನು ಪ್ರಶ್ನೆ ಮಾಡುತ್ತಾನೆ: "ಎಲ್ಲರೂ ತಮ್ಮ ತಮ್ಮ ಕರ್ತವ್ಯ ಕರ್ಮವನ್ನು ಮಾಡಲೇಬೇಕಾದರೆ ಬ್ರಹ್ಮ ಸಾಕ್ಷಾತ್ಕಾರವಾದವನು ಅಸಂಪ್ರಜ್ಞಾತ ಸಮಾಧಿಯಲ್ಲಿರಬಾರದೆಂದು ಆಯಿತು. ಯಾಕೆಂದರೆ ಅಸಂಪ್ರಜ್ಞಾತ ಸಮಾಧಿಸ್ಥಯೋಗಿಗೆ ಹಗಲು ರಾತ್ರಿ ತಿಳಿಯದೇ ಅವನು ಯಾವ ಕರ್ಮವನ್ನೂ ಮಾಡದೇ ಇರುತ್ತಾನೆ. ಅದುದರಿಂದ ಅಸಂಪ್ರಜ್ಞಾತ ಸಮಾಧಿಯನ್ನು ಅವನು ಮಾಡಬಾರದೆಂದಾಯಿತು" ಎಂದು ಶಂಕಿಸಿದರೆ, ಶ್ರೀಕೃಷ್ಣ ಪರಮಾತ್ಮನು ಸಮಾಧಾನವನ್ನು ಹೇಳುತ್ತಾನೆ:

"ಆ ಅಸಂಪ್ರಜ್ಞಾತ ಸಮಾಧಿಸ್ಥ ಯೋಗಿಯು ಪರಮಾತ್ಮನ ರೂಪವನ್ನು ದರ್ಶನ ಮಾಡುತ್ತ ಆನಂದ ಸಮುದ್ರದಲ್ಲಿ ಮಗ್ನನಾದುದರಿಂದ, ಆ ಕಾಲದಲ್ಲಿ ಇನ್ನು ಯಾವ ಕರ್ಮವು ಅನಾವಶ್ಯಕವಾಗಿದೆ. ಯಾವ ಕರ್ಮವನ್ನು ಮಾಡಿದರೂ ಇಂತಹ ಆನಂದವು ಅವನಿಗೆ ಸಿಗಲಾರದು. ಅವನು ಸಂಧ್ಯಾವಂದನಾದಿ ಕರ್ಮಗಳನ್ನು ಅನುಷ್ಠಾನ ಮಾಡದಿದ್ದರೂ, ತನ್ನ ಗುರುಗಳು ಅಲ್ಲಿಗೆ ಬಂದಾಗ ಅವರಿಗೆ ಪೂಜೆ ಮಾಡದಿದ್ದರೂ, ಆ ಯೋಗಿಗೆ ದೋಷವು ಬರುವುದಿಲ್ಲ. ಆದುದರಿಂದ ಆ ಕಾಲದಲ್ಲಿ ಅವನಿಗೆ ಕರ್ಮವನ್ನು ಮಾಡಬೇಕಾಗಿಲ್ಲ. ಆ ಸಮಾಧಿಯು ಮುಗಿದ ಮೇಲೆ ಅವನು ತನ್ನ ಕರ್ಮವನ್ನು ಮಾಡಲೇಬೇಕು."

ಕೆಲವರು ಬ್ರಹ್ಮಜ್ಞಾನಿಗೆ ಎಂದೆಂದೂ ಕರ್ಮವೇ ಬೇಡವೆಂದು ಶ್ರೀಕೃಷ್ಣನ ಮಾತಿಗೆ ಅರ್ಥ ಮಾಡುತ್ತಾರೆ. ಅದು ಸರಿಯಲ್ಲ. ಊಟ ಮಾಡತಕ್ಕವನು ಮಾತಾಡಬಾರದು ಎಂದು ಹೇಳಿದರೆ ಯಾವಾಗಲೂ ಮಾತಾಡಬಾರದೆಂದು ಅರ್ಥವಾಗುವುದಿಲ್ಲ. ಊಟ ಮಾಡುವ ಕಾಲಕ್ಕೆ ಅವನು ಮಾತಾಡಬಾರದೆಂದೇ ಅರ್ಥವು. ಅದೇ ರೀತಿ ಅಸಂಪ್ರಜ್ಞಾತ ಸಮಾಧಿಸ್ಥನು ಕರ್ಮ ಮಾಡುವುದು

ಬೇಡವೆಂದರೆ ಅವನು ಯಾವಾಗಲೂ ಕರ್ಮ ಮಾಡಬಾರದೆಂದು ಅರ್ಥವಲ್ಲ. ಸಮಾಧಿಯಲ್ಲಿದ್ದಾಗ ಕರ್ಮ ಮಾಡಬೇಕಿಲ್ಲ ಎಂದಷ್ಟೇ ಅರ್ಥ.

ಶ್ರೀಕೃಷ್ಣ ಪರಮಾತ್ಮನು ಹೇಳುತ್ತಾನೆ: "ಎಲೋ ಅರ್ಜುನಾ! ನೀನು ಬ್ರಹ್ಮ ಸಾಕ್ಷಾತ್ಕಾರ ಉಳ್ಳವನಾದರೂ ಈಗ ಅಸಂಪ್ರಜ್ಞಾತಸಮಾಧಿಸ್ಥನಲ್ಲದ ಕಾರಣ ಮುಕ್ತಿಗಾಗಿ ನೀನು ಕರ್ಮ ಮಾಡಬೇಕು. ನಿನಗೆ ಜ್ಞಾನದಿಂದಲೇ ಮುಕ್ತಿಯು ಸಿದ್ಧವಾಗಿದ್ದರೂ, ಕರ್ಮದಿಂದ ಮುಕ್ತಿಯಲ್ಲಿ ವಿಶೇಷ ಆನಂದವು ಪ್ರಾಪ್ತಿಯಾಗುವುದು. ಆದುದರಿಂದಲೇ ಮಹಾಜ್ಞಾನಿಗಳಾದ ಜನಕ-ಪ್ರಿಯವ್ರತಾದಿಗಳು ಕರ್ಮವನ್ನು ಅನುಷ್ಠಾನ ಮಾಡಿದರು. ಆದುದರಿಂದ ಮೋಕ್ಷದಲ್ಲಿ ಅವರು ಅತಿಶಯ ಆನಂದವನ್ನು ಹೊಂದುತ್ತಾರೆ.

ಪ್ರಿಯವ್ರತ ಮಹಾರಾಜನು ನಿನ್ನಂತೆಯೇ ರಾಜ್ಯವನ್ನು ಬಿಟ್ಟು, ಕೇವಲ ಬ್ರಹ್ಮನಿಷ್ಠನಾಗಿ ಇರಲು ಉದ್ಯುಕ್ತನಾದಾಗ ಬ್ರಹ್ಮದೇವರು ಸತ್ಯಲೋಕದಿಂದ ಕೆಳಗಿಳಿದು, 'ಎಲೋ ಪ್ರಿಯವ್ರತನೇ! ಬ್ರಹ್ಮಾದಿ ದೇವತೆಗಳಾದ ನಾವು ಕೂಡಾ ಪರಮಾತ್ಮನ ಅಧೀನರಾಗಿದ್ದೇವೆ. ಅವನ ಇಚ್ಛೆಯನ್ನು ಅನುಸರಿಸಿ ಕರ್ಮವನ್ನು ಮಾಡುತ್ತಿದ್ದೇವೆ. ನೀನು ಕೂಡ ಆ ಈಶ್ವರನ ಇಚ್ಛೆಯ ಪ್ರಕಾರ, ಗೃಹಸ್ಥಾಶ್ರಮವನ್ನು ಹೊಂದಿ ರಾಜ್ಯ ಪರಿಪಾಲನವನ್ನು ಮಾಡಬೇಕು. ಇಂದ್ರಿಯ ನಿಗ್ರಹ ಉಳ್ಳವರಿಗೆ ಗೃಹಸ್ಥಾಶ್ರಮವು ಏನೂ ಕೆಟ್ಟದು ಮಾಡುವುದಿಲ್ಲ' ಇತ್ಯಾದಿ ಉಪದೇಶವನ್ನು ಮಾಡಿ ಮಹಾಜ್ಞಾನಿಯಾದ ಪ್ರಿಯವ್ರತನನ್ನು ಕರ್ಮನಿಷ್ಠನನ್ನಾಗಿ ಮಾಡಿದರು. ಅದರಂತೆ ನೀನು ಕರ್ಮಾನುಷ್ಠಾನ ಮಾಡು. ಕರ್ಮಾನುಷ್ಠಾನುದಿಂದ ನಿನಗಷ್ಟೇ ಪ್ರಯೋಜನವಲ್ಲದೇ ಲೋಕಕ್ಕೂ ನೀನು ಆದರ್ಶನಾಗಿ ಲೋಕದ ಜನರು ನಿನ್ನಂತೆ ಕರ್ಮನಿಷ್ಠರಾಗಿ, ಅದರಿಂದ ಅವರ ಉದ್ಧಾರವಾಗಿ, ಅದರಿಂದ ಪರಮಾತ್ಮನು ನಿನಗೆ ವಿಶೇಷವಾಗಿ ಸಂತುಷ್ಟನಾಗುವನು. ಆದುದರಿಂದ ನೀನು ಕರ್ಮ ಮಾಡಬೇಕು.'' (ಒಂಭತ್ತನೇ ದಿನದ ಉಪನ್ಯಾಸವು ಮುಗಿಯಿತು.)

***

ಶ್ರೀಕೃಷ್ಣ ಪರಮಾತ್ಮನು ಅರ್ಜುನನನ್ನು ಕುರಿತು ಉಪದೇಶ ಮಾಡುತ್ತಾನೆ: "ಶ್ರೇಷ್ಠ ಪುರುಷನು ಯಾವುದನ್ನು ಆಚರಿಸುತ್ತಾನೋ ಮತ್ತು ವಿರುದ್ಧವಾಗಿ ತೋರುವ ಪ್ರಮಾಣಗಳಲ್ಲಿ ಯಾವ ಪ್ರಮಾಣ ಅನುಸಾರವಾಗಿ ಆಚರಿಸುತ್ತಾನೋ ಆ ರೀತಿ ಲೋಕವು ಆಚರಿಸುತ್ತದೆ. ಆದ್ದರಿಂದಲೇ ನಾನೂ ಕೂಡ ಕರ್ಮ ಮಾಡಿ ಜಗತ್ತಿಗೆ ತೋರಿಸಿಕೊಡುತ್ತಿರುವುದು. ಯದ್ಯಪಿ ನನಗೆ ಕರ್ಮದಿಂದ ಏನೂ ಪ್ರಯೋಜನ-ವಿಲ್ಲ. ನಾನು ಹೊಂದದೇ ಇರುವುದು ಏನೂ ಇಲ್ಲ. ಆದರೂ ಲೋಕಕ್ಕೋ-ಸ್ಕರವಾಗಿ ಕರ್ಮ ಮಾಡುತ್ತಿದ್ದೇನೆ. ನಾನು ಕರ್ಮ ಮಾಡದೇ ಇದ್ದರೆ, ಜನರು ಕರ್ಮ ಮಾಡುವುದು ಅನಾವಶ್ಯಕವೆಂದು ತಿಳಿದು ಕರ್ಮ ಮಾಡದೆ ಇದ್ದವರಾಗಿ ನಷ್ಟರಾಗಬೇಕಾಗುವುದು. ಅಂದರೆ ನರಕಾದ್ಯನರ್ಥ ಅನುಭವಿಸಬೇಕಾಗುವುದು. ಇಷ್ಟೇ ಅಲ್ಲದೆ ಅವರವರ ಕರ್ಮವನ್ನು ಅವರವರು ಮಾಡದೆ ಇದ್ದರೆ ಕರ್ಮವಿಭಾಗ ನಿಮಿತ್ತಕವಾದ ವರ್ಣವಿಭಾಗವು ಇಲ್ಲದಂತಾಗಿ ವರ್ಣ ಸಾಂಕರ್ಯವಾಗಿ ಪ್ರಜೆಗಳ ನಾಶವಾದೀತು. ಆದುದರಿಂದ ನಾನು ಕರ್ಮ ಮಾಡುತ್ತಿದ್ದೇನೆ. ಅದೇ ರೀತಿ ನೀನೂ ಕೂಡ ಲೋಕದ ಉದ್ಧಾರಕ್ಕೋಸ್ಕರ ಕರ್ಮ ಮಾಡು."

ಕೃಷ್ಣನ ಈ ಉಪದೇಶವನ್ನು ವಿಚಾರ ಮಾಡಿದರೆ, ಒಂದು ಸಂಶಯವು ಪರಿಹಾರವಾಗುವುದು. ಅದೇನೆಂದರೆ ಶ್ರೀಕೃಷ್ಣನು ಕೈಲಾಸ ಯಾತ್ರೆ ಮಾಡಿ ರುದ್ರದೇವರನ್ನು ಕುರಿತು ತಪಸ್ಸು ಮಾಡಿದನೆಂದು ಪುರಾಣಗಳಲ್ಲಿ ಉಲ್ಲೇಖವಿದೆ. ಹಾಗಾದರೆ ಕೃಷ್ಣನ ದೆಸೆಯಿಂದ ರುದ್ರದೇವರು ಉತ್ತಮರೋ? ಎಂಬ ಪ್ರಶ್ನೆಯು ಬರುತ್ತದೆ. ಆದರೆ, ಇಲ್ಲಿ ಹೇಳಿದ್ದನ್ನು ವಿಚಾರ ಮಾಡಬೇಕು. ಕೃಷ್ಣನು ಇಲ್ಲಿ ಹೇಳಿರುವುದು 'ನನಗೆ ಕರ್ಮದಿಂದ ಯಾವ ಪ್ರಯೋಜನವಿಲ್ಲ. ಎಲ್ಲವನ್ನೂ ಹೊಂದಿಯಾಗಿದೆ. ಜಗತ್ತಿಗೋಸ್ಕರ ನಾನು ಕರ್ಮವನ್ನು ಮಾಡಿ ತೋರಿಸುತ್ತೇನೆ' ಎಂದು. ಆದುದರಿಂದ ಕೈಲಾಸ ಯಾತ್ರೆಯು ಮೊದಲಾದುದು ಲೋಕಸಂಗ್ರಹಕ್ಕಾಗಿ ಎಂದು ಸ್ಪಷ್ಟವಾಯಿತು.

ಇನ್ನೊಂದು ಸಂಶಯವೂ ಕೃಷ್ಣನ ಈ ಉಪದೇಶದಿಂದ ಪರಿಹಾರವಾಯಿತು. ಅದೇನೆಂದರೆ, 'ವರ್ಣಸಾಂಕರ್ಯವು ಕೃಷ್ಣನಿಗೆ ಸಮ್ಮತ-ವಲ್ಲವೆಂದು ಗೀತೆಯಲ್ಲಿ ಎಲ್ಲಿ ಹೇಳಿದೆ?' ಎಂದು ಕೆಲವರು ಗೀತೆಯನ್ನು ಸರಿಯಾಗಿ ಪರಿಶೀಲಿಸದೆ ಆಕ್ಷೇಪ ಮಾಡುತ್ತಾರೆ. ಆದರೆ ಈ ಗೀತಾವಾಕ್ಯವು **"ಸಂಕರಸ್ಯ ಚ ಕರ್ತಾ ಸ್ಯಾಮ್ ಉಪಹನ್ಯಾಮಿಮಾಃ ಪ್ರಜಾಃ"** ಎಂದು 'ಪ್ರಜೆಗಳ ನಾಶಕ್ಕೆ ಹೇತುವಾದದ್ದು ವರ್ಣಸಂಕರ' ಎಂದು ಶ್ರೀಕೃಷ್ಣನ ಸಿದ್ಧಾಂತವೆಂದು ತಿಳಿಸುತ್ತಿದೆ. ಆದರೆ ಆಧುನಿಕ ಜನರು 'ವರ್ಣವಿಭಾಗವು ಕಲಹಕ್ಕೆ ಕಾರಣವಾಗಿ, ಜಗತ್ತಿನ ನಾಶಕ್ಕೆ ಕಾರಣವಾಗಿದೆ. ವರ್ಣಸಾಂಕರ್ಯವೇ ಜಗತ್ತಿನ ಅಭ್ಯುದಯಕ್ಕೆ ಕಾರಣ' ಎಂದು ಕೃಷ್ಣನ ಸಿದ್ಧಾಂತಕ್ಕೆ ವಿರುದ್ಧವಾಗಿ ಹೇಳುತ್ತಿದ್ದಾರೆ. ಆದರೆ, ಇವರ ವಿಚಾರವು ಬಹಳ ದುರ್ಬಲವಾದದ್ದು. ಸರ್ವಜ್ಞಮೂರ್ತಿಯಾದ ಶ್ರೀಕೃಷ್ಣ ಪರಮಾತ್ಮನ ಸಿದ್ಧಾಂತವೇ ಸಕಲ ವಿದ್ವನ್ಮಾನ್ಯವಾದದ್ದು.

ವರ್ಣ ವಿಭಾಗದಿಂದ ಸ್ವಲ್ಪ ಕಲಹದ ಪ್ರಸಕ್ತಿ ಇದ್ದರೂ, ಅದನ್ನು ಪರಿಹರಿಸಲಿಕ್ಕೆ ಉಪಾಯವಿದೆ. ಅದು ಹೇಗೆಂದರೆ, ವರ್ಣವಿಭಾಗವು ಅವರವರ ಸ್ವಾಭಾವಿಕ ಗುಣನಿಮಿತ್ತಕವಾಗಿಯೂ ಇದೆ. ಅಂದರೆ ಶಮದಮಾದಿಗುಣವುಳ್ಳವನು ಬ್ರಾಹ್ಮಣನು. ಶೌರ್ಯ, ಧೈರ್ಯ, ಬಾಹುಬಲಾದಿ ಉಳ್ಳವನು ಕ್ಷತ್ರಿಯನು ಇತ್ಯಾದಿ ರೀತಿಯಾಗಿ ವ್ಯವಸ್ಥೆ ಮಾಡಲಾಗಿದೆ. ಆವಾವ ವರ್ಣದವರು ತಮ್ಮ ಸ್ವಾಭಾವಿಕ ಗುಣಾನುಸಾರಿಯಾದ ಕರ್ಮವನ್ನು ಮಾಡುವುದು ಯೋಗ್ಯವಾಗಿದೆ. ಆ ಗುಣಗಳ ತಾರತಮ್ಯದಿಂದಲೇ ಉಚ್ಚ ನೀಚ ಭಾವವು ಯೋಗ್ಯವಾಗಿದೆ. ನಾನಾ ಶಿಷ್ಯರುಗಳಲ್ಲಿ ಜ್ಞಾನಾದಿ ಗುಣಗಳು ಹೆಚ್ಚಿರತಕ್ಕ ಶಿಷ್ಯನಿಗೆ ಮಾನ್ಯತೆ ಇದ್ದಂತೆ ಶಮದಮಾದಿ ಶ್ರೇಷ್ಠ ಗುಣಗಳುಳ್ಳ ಬ್ರಾಹ್ಮಣನಿಗೆ ಪೂಜ್ಯತಾ ಎಂಬ ವ್ಯವಸ್ಥೆಯು ಯುಕ್ತವಾದದ್ದು. ಬ್ರಾಹ್ಮಣನಕ್ಕಿಂತಲೂ ಶೂದ್ರನಿಗೆ ಶಮದಮಾದಿಗುಣಗಳು ಅಧಿಕವಾಗಿದ್ದರೆ, ಬ್ರಾಹ್ಮಣನಕ್ಕಿಂತ ಶೂದ್ರನೇ ಮಾನ್ಯನಾಗುತ್ತಾನೆಂದು ಶಾಸ್ತ್ರದ ನಿರ್ಣಯವಿದೆ. ಆದುದರಿಂದ ಈ ವ್ಯವಸ್ಥೆಯನ್ನು ಸರಿಯಾಗಿ ತಿಳಿದುಕೊಂಡವರು ಪರಸ್ಪರ ಕಲಹವನ್ನು ಮಾಡಲಾರರು. ಗುರುವಿಗೆ ಅಷ್ಟು ಮಾನ್ಯತೆ ಏಕೆ ಎಂದು

ಶಿಷ್ಯನು ಹೇಗೆ ಕಲಹ ಮಾಡುವುದಿಲ್ಲವೋ ಹಾಗೆ ಎಲ್ಲ ವರ್ಣಗಳಿಗೂ ಗುರುಸ್ಥಾನದಲ್ಲಿರತಕ್ಕ ಬ್ರಾಹ್ಮಣನು ಎಲ್ಲರಿಂದಲೂ ಮಾನ್ಯನೇ ಆಗುವನು. ಆದುದರಿಂದ ವರ್ಣ ವಿಭಾಗವು ಕಲಹಕ್ಕೆ ಕಾರಣವಾಗಲಾರದು.

ವರ್ಣವಿಭಾಗವಿಲ್ಲದೆ ವರ್ಣ ಸಾಂಕರ್ಯವಾದರೆ ಜಗತ್ತಿಗೆ ಬಹಳ ಅನರ್ಥವಿದೆ. ಎಲ್ಲ ಅನರ್ಥಗಳನ್ನು ಈಗ ಹೇಳಲು ಸಾಧ್ಯವಿಲ್ಲದಿದ್ದರೂ ಒಂದೆರಡು ಅನರ್ಥಗಳನ್ನು ಈಗ ಸೂಚಿಸುತ್ತೇವೆ. ಏನೆಂದರೆ ವರ್ಣವಿಭಾಗವಿಲ್ಲದೇ ಇಂತಹವರು ಇಂತಹ ಕರ್ಮವನ್ನು ಮಾಡಬೇಕೆಂಬ ವ್ಯವಸ್ಥೆ ಇಲ್ಲದಂತಾಗಿ ಅಜ್ಞಾನಿಗಳಾದ ಬಹು ಜನರು ತಮ್ಮ ಯೋಗ್ಯತೆಯನ್ನು ತಿಳಿಯದೆ, ತಮಗೆ ಅನುಚಿತಗಳಾದ ಮೇಲ್ಮಟ್ಟದ ಕರ್ಮಗಳನ್ನು ಆರಂಭಿಸಿ ಅಧಃಪತನವಾಗುವ ಸಂಭವವಿದೆ. ಅಲ್ಲದೇ ಮೇಲ್ಮಟ್ಟದ ಜನರ ಯೋಗ್ಯತೆಗೆ ಸರಿಯಾದ ಶಿಕ್ಷಣಾದಿಗಳು ಇಲ್ಲದಂತಾಗುವ ಸಂಭವವಿದೆ. ಅದು ಹೇಗೆಂದರೆ ಸ್ಕೂಲು ಕಾಲೇಜುಗಳಲ್ಲಿ ಬಹಳ ನಿಮ್ನವರ್ಗದವರು ಉತ್ತಮ ವರ್ಗದವರು ಅಂದರೆ ಬುದ್ಧಿಶಾಲಿಗಳು ಒಟ್ಟಿಗೆ ಸೇರಿ ವಿದ್ಯಾಭ್ಯಾಸ ಮಾಡುವ ಪ್ರಸಂಗವು ವರ್ಣ ಸಾಂಕರ್ಯದಿಂದ ಉಂಟಾಗುತ್ತದೆ. ಆ ನಿಮ್ನವರ್ಗದವರ ಸಂಖ್ಯೆ ಹೆಚ್ಚು ಇರುವ ಪ್ರಯುಕ್ತ ನಿಮ್ನವರ್ಗದವರ ಬಹುಸಂಖ್ಯೆಗನುಸರಿಸಿ ಅವರು ತಿಳಿಯಲಿಕ್ಕೆ ಯೋಗ್ಯವಾದ ವಿದ್ಯಾಭ್ಯಾಸವನ್ನು ಆ ಕಾಲೇಜಿನಲ್ಲಿ ವ್ಯವಸ್ಥೆ ಮಾಡುವಾಗ ಅಲ್ಪಸಂಖ್ಯೆಗಳುಳ್ಳ ಸೂಕ್ಷ್ಮ ಬುದ್ಧಿಶಾಲಿಗಳಿಗೂ ಆ ಅತ್ಯಲ್ಪ ಶಿಕ್ಷಣವು ಒದಗಿ ಅವರ ಬುದ್ಧಿಗನುಸಾರವಾದ ಶಿಕ್ಷಣವು ಇಲ್ಲದಂತಾಗಿ ಮತ್ತು ಆ ನಿಮ್ನವರ್ಗದವರ ಸಂಸರ್ಗ ಸಹಭೋಜನಾದಿಗಳಿಂದ ಅವರ ಕೆಟ್ಟ ನಡತೆಗಳು ಇವರಲ್ಲಿ ಬಂದುಸೇರಿ ಉಚ್ಚ ವರ್ಣದವರಿಗೆ ಅಧಃಪತನವಾಗುವ ಸಂಭವವಿದೆ. ಅಲ್ಲದೇ, ಎಲ್ಲರೂ ವಿದ್ಯೆಯೇ ಶ್ರೇಷ್ಠವೆಂದು ತಿಳಿದು ವಿದ್ಯಾಭ್ಯಾಸದಲ್ಲೇ ನಿರತರಾದಾಗ ತಮ್ಮ ತಮ್ಮ ಪೂರ್ವ ಪರಂಪರೆಯಿಂದ ಬಂದ ಕೃಷ್ಯಾದಿ ಕರ್ಮಗಳ ಅಭ್ಯಾಸ ತಪ್ಪಿ ಹೋಗಿ ಆ ಕೃಷ್ಯಾದಿ ಕರ್ಮಗಳನ್ನು ಮಾಡಲು ಅಶಕ್ತರಾಗಿ ಅದರಿಂದ ಕೃಷ್ಯಾದಿ ಕರ್ಮಗಳ ಲೋಪವಾಗಿ ಜಗತ್ತಿಗೆ ಬಹಳ ಅಶಾಂತತೆಯು ಬೆಳೆಯುವ ಸಂಭವವಿದೆ. ಹೀಗೆ ಬಹು ದೋಷಗಳುಳ್ಳದ್ದು ವರ್ಣಸಾಂಕರ್ಯವು. ಆ ವರ್ಣ ಸಾಂಕರ್ಯದಿಂದ

ಬರತಕ್ಕ ದೋಷಗಳು ಸರ್ವಜ್ಞಮೂರ್ತಿಯಾದ ಶ್ರೀಕೃಷ್ಣ ಪರಮಾತ್ಮನಿಗೆ ಗೋಚರವಾದದ್ದು. ನಮ್ಮಂತಹ ಅಲ್ಪಜ್ಞರಿಗೆ ಅಗೋಚರವಾದದ್ದು.

ಅರ್ಜುನನು ಪ್ರಶ್ನೆ ಮಾಡುತ್ತಾನೆ: "ಅಜ್ಞಾನಿಗಳು ಕರ್ಮ ಮಾಡುವಂತೆ, ಜ್ಞಾನಿಗಳು ಕರ್ಮ ಮಾಡಬೇಕೆಂದು ನೀನು ಹೇಳಿದರೆ ಜ್ಞಾನಿಗಳಿಗೂ ಅಜ್ಞಾನಿಗಳಿಗೂ ಏನು ವಿಶೇಷ?"

ಶ್ರೀಕೃಷ್ಣ ಪರಮಾತ್ಮನು ಉಪದೇಶ ಮಾಡುತ್ತಾನೆ: "ಅಜ್ಞಾನಿಗಳಂತೆ ಫಲಾಸಕ್ತಿ ಪೂರ್ವಕವಾಗಿ ನಾವೇ ಕರ್ಮವನ್ನು ಮಾಡುತ್ತೇವೆಂಬ ಕರ್ತೃತ್ವಾಭಿಮಾನಿಗಳಾಗಿ ಜ್ಞಾನಿಗಳು ಕರ್ಮ ಮಾಡುವುದಿಲ್ಲ. ಅವರು ಫಲಾಸಕ್ತಿಯನ್ನು ಬಿಟ್ಟು, 'ಪ್ರಕೃತಿಯ ಗುಣಗಳಾದ ಸತ್ವ, ರಜಸ್ಸು ಮತ್ತು ತಮಸ್ಸು ಹಾಗೂ ಜೀವ ಸ್ವಭಾವದ ಗುಣಗಳಾದ ಯಥಾರ್ಥಜ್ಞಾನ ಮಿಶ್ರಜ್ಞಾನ ಮತ್ತು ವಿಪರೀತಜ್ಞಾನ- ಇವುಗಳಿಂದ ಎಲ್ಲ ಕರ್ಮಗಳೂ ಆಗುತ್ತವೆ. ಹೀಗಿರುವಾಗ ನಾನೇ ಕರ್ತೃವೆಂದು ತಿಳಿಯುವುದು ತಪ್ಪಾಗುತ್ತದೆ. ಅಜ್ಞಾನಿಗಳು ಹಾಗೇ ತಿಳಿಯುತ್ತಾರೆ. ಅದು ಅಹಂಕಾರ' ಎಂದು ತಿಳಿದುಕೊಂಡು ಯಥಾರ್ಥಜ್ಞಾನ-ಪೂರ್ವಕವಾಗಿ ಕರ್ಮ ಮಾಡುತ್ತಾರೆ. ಆ ರೀತಿ ಅಜ್ಞಾನಿಗಳು ಮಾಡುವುದಿಲ್ಲ. ಅದೇ ಜ್ಞಾನಿಗಳಿಗೂ ಅಜ್ಞಾನಿಗಳಿಗೂ ಇರತಕ್ಕ ವಿಶೇಷ.

ಜ್ಞಾನಿಯಾದಂಥವನು ಅಜ್ಞಾನಿಗಳಿಗೆ ಬುದ್ಧಿಭೇದವನ್ನು ಉಂಟುಮಾಡಬಾರದು. ಅಂದರೆ ಕರ್ಮಾಸಕ್ತರಾದ ಅಜ್ಞಾನಿಗಳಿಗೆ ಕರ್ಮ ಅನಾವಶ್ಯಕವೆಂಬ ಜ್ಞಾನವು ಬರಬಾರದು. ಅದಕ್ಕಾಗಿ ಜ್ಞಾನಿಯು ಕರ್ಮ ಮಾಡಿಯೇ ತೀರಬೇಕು.

ಆದುದರಿಂದ ಎಲೋ ಅರ್ಜುನ! ನೀನು ಸರ್ವೋತ್ತಮನಾದ ಪರಮಾತ್ಮನನ್ನು ಮನಸ್ಸಿನಲ್ಲಿ ಸ್ಮರಿಸುತ್ತಾ, ಎಲ್ಲ ಕರ್ಮಗಳನ್ನು ಅವನಲ್ಲಿ ಅರ್ಪಿಸುತ್ತಾ ನಿರಹಂಕಾರಿಯಾಗಿ ಫಲಾಶಾರಹಿತನಾಗಿ ಯುದ್ಧಕರ್ಮವನ್ನು ಮಾಡು. ಈ ನನ್ನ ಸಿದ್ಧಾಂತವನ್ನು ಯಾವ ಮಾನವರು ದ್ವೇಷಾಸೂಯಾದಿಗಳನ್ನು ಬಿಟ್ಟು ಶ್ರದ್ಧೆಯಿಂದ ಅನುಸರಿಸಿ ಕರ್ಮಾನುಷ್ಠಾನ ಮಾಡುತ್ತಾರೋ ಅವರು

ಕರ್ಮಬಂಧದಿಂದ ಬಿಡುಗಡೆ ಹೊಂದುತ್ತಾರೆ. ಯಾರು ನನ್ನ ಮತವನ್ನನುಸರಿಸದೆ, 'ಕೃಷ್ಣನು ಕರ್ಮವನ್ನುಪದೇಶಿಸುವ ಮೂಲಕ ಕರ್ಮಾನುಷ್ಠಾನದಿಂದ ಉಂಟಾಗುವ ಕ್ಲೇಶವು ಬರುವಂತೆ ಮಾಡುತ್ತಾನೆ' ಎಂದು ನನ್ನ ಮೇಲೆ ದೋಷಾರೋಪವನ್ನು ಮಾಡಿ ಕರ್ಮಾನುಷ್ಠಾನವನ್ನು ಮಾಡುವುದಿಲ್ಲವೋ ಅವರು ಸಮಸ್ತ ಜ್ಞಾನದಿಂದ ಭ್ರಷ್ಟರಾಗಿ ನರಕಾದ್ಯನರ್ಥಭಾಗಿಗಳಾಗುತ್ತಾರೆ.

ಅಂತಹ ಅಜ್ಞಾನಿಗಳಿಗೆ ಜ್ಞಾನಿಯಾಗಿರತಕ್ಕವನು ಸರಿಯಾದ ಮಾರ್ಗವನ್ನು ಉಪದೇಶ ಮಾಡಲೇಬಾರದು. ಮಾಡಿದರೆ ಅದು ವ್ಯರ್ಥವಾಗಬಹುದು. ಸರ್ಪಕ್ಕೆ ಹಾಲು ಕುಡಿಸಿದರೆ ಅದು ವಿಷವನ್ನು ಕಾರುವಂತೆ ಉಪದೇಶಕ್ಕೆ ವಿಪರೀತ ಅರ್ಥ ಕಲ್ಪಿಸಿ ಶಾಸ್ತ್ರದ ಮೇಲೆ ದೋಷವನ್ನೇ ಆರೋಪಿಸುವರು. ಆದ್ದರಿಂದ ಅಂಥವನಿಗೆ ಉಪದೇಶ ಮಾಡುವುದು ಅನರ್ಥಫಲಪ್ರದವಾದದ್ದು. ಅವರಿಗೆ ಎಷ್ಟು ಉಪದೇಶ ಮಾಡಿದರೂ ತಮ್ಮ ಸ್ವಭಾವವನ್ನು ಬಿಡುವಂತಿಲ್ಲ.

ಅರ್ಜುನ! 'ಎಷ್ಟೋ ಯೋಗ್ಯ ಜೀವರು ಕೂಡ ದೊಡ್ಡವರಿಂದ ಉಪದೇಶ ತೆಗೆದುಕೊಂಡರೂ ಆ ಉಪದೇಶಾನುಸಾರ ಅನುಷ್ಠಾನ ಮಾಡದಿರುವುದು ಕಂಡಿದೆ. ಅದಕ್ಕೇನು ಕಾರಣ?' ಎಂದು ನೀನು ಪ್ರಶ್ನೆ ಮಾಡಬಹುದು. ಬಹು ಜನ್ಮಗಳಿಂದ ಸಂಪಾದನಾ ಮಾಡಿದ ವಾಸನಾ ಬಲದಿಂದ ಆ ರೀತಿ ಆಗುವುದು. ಹಿಂದಿನ ಜನ್ಮದ ಸಂಸ್ಕಾರಕ್ಕೆ ಸಜ್ಜನರು ಪ್ರಾಯಶಃ ಅಧೀನರಾಗಿರುತ್ತಾರೆ. ಮಹಾಪ್ರಯತ್ನದಿಂದ ಆ ಸಂಸ್ಕಾರವನ್ನು ನಿಗ್ರಹ ಮಾಡಿ ಆ ಸಜ್ಜನರು ಮುಂದಕ್ಕೆ ಬರುತ್ತಾರೆ. ಅಂತಹ ಸಜ್ಜನರಿಗೆ ಉಪದೇಶ ಕೊಟ್ಟದ್ದು ಸಾರ್ಥಕವಾಗುತ್ತದೆ."

ಅರ್ಜುನನು ಪ್ರಶ್ನೆ ಮಾಡುತ್ತಾನೆ: "ಈ ಪುರುಷನಿಗೆ ಪಾಪ ಮಾಡಬಾರದೆಂದು ಇಚ್ಛೆ ಇದ್ದರೂ ಪಾಪವನ್ನು ಮಾಡುತ್ತಾನೆ. ಯಾವುದಕ್ಕೋ ಒಂದಕ್ಕೆ ಅಧೀನನಾಗಿದ್ದಾನೆ. ಅದಕ್ಕೆ ಕಾರಣ ಕಾಮಕ್ರೋಧಾದಿಗಳೇ ಆಗಿರಬೇಕು. ಆ ಕಾಮಕ್ರೋಧಾದಿಗಳಲ್ಲಿ ಪ್ರಬಲವಾದದ್ದು ಯಾವುದು?".

ಅದಕ್ಕೆ ಶ್ರೀಕೃಷ್ಣ ಪರಮಾತ್ಮನು, "ಕಾಮವೇ ಪ್ರಬಲವಾದ ಶತ್ರುವೆಂದು ತಿಳಿ. ಮಹಾಸಾಧನವಾದ ಕ್ರೋಧವೂ ಕೂಡ ಆ ಕಾಮದಿಂದಲೇ ಉಂಟಾಗುತ್ತದೆ. ಆ ಕಾಮವನ್ನು ತೃಪ್ತಿಪಡಿಸಿ ಶಾಂತ ಮಾಡಲು ಸಾಧ್ಯವಿಲ್ಲ. ವಿಷಯಭೋಗ ಮಾಡುವುದು ಬೆಂಕಿಗೆ ತುಪ್ಪ ಹಾಕಿದಂತೆ. ವಿಷಯಭೋಗ ಮಾಡುತ್ತಾ ಮಾಡುತ್ತಾ ಕಾಮಾಗ್ನಿಯು ಪ್ರಜ್ವಲಿತವಾಗುವುದು. ಕಾಮದಿಂದ ಮನುಷ್ಯನು ಮಹಾಪಾಪವನ್ನು ಮಾಡುತ್ತಾನೆ.

ಈ ಕಾಮವು ಈಶ್ವರನಿಗೆ, ಜೀವನಿಗೆ ಮತ್ತು ಅಂತಃಕರಣಕ್ಕೆ ಆವರಕವಾಗಿದೆ. ಪ್ರಕಾಶರೂಪವಾದ ವಹ್ನಿಗೆ ಧೂಮವು ಆವರಕವಾದಂತೆ ಪ್ರಕಾಶರೂಪವಾದ ಸರ್ವಜ್ಞಮೂರ್ತಿಯಾದ ಪರಮಾತ್ಮನಿಗೆ ಕಾಮವು ಆವರಕವಾಗುತ್ತದೆ. ಅಂದರೆ ನಮಗೆ ಅವನ ಜ್ಞಾನ ಬರಲಿಕ್ಕೆ ಪ್ರತಿಬಂಧಕವಾಗುತ್ತದೆ. ಕನ್ನಡಿಯಲ್ಲಿದ್ದ ಮಲವು ನಮ್ಮ ಮುಖದ ಅಭಿವ್ಯಕ್ತಿಗೆ ಪ್ರತಿಬಂಧಕವಾಗುವಂತೆ ಮನಸ್ಸಿನಲ್ಲಿದ್ದ ಕಾಮವು ಮನಸ್ಸಿನಿಂದ ಜೀವೇಶ್ವರ ಸ್ವರೂಪವನ್ನು ತಿಳಿದುಕೊಳ್ಳಲು ಪ್ರತಿಬಂಧಕ ಮಾಡುತ್ತದೆ. ಗರ್ಭವೇಷ್ಟನ ಚರ್ಮವು ಗರ್ಭಸ್ಥ ಶಿಶುವಿಗೆ ಆವರಕವಾಗಿ ಶಿಶುವಿನ ಚಲನಾದಿಗಳಿಗೆ ಪ್ರತಿಬಂಧಕವಾಗುವಂತೆ ಜೀವನಿಗೆ ಆವರಕವಾಗಿರುವ ಕರ್ಮವು ಜೀವನು ಸತ್ಕರ್ಮವನ್ನು ಮಾಡಲಿಕ್ಕೆ ಬಿಡುವುದಿಲ್ಲ.

ಇದಕ್ಕೆ ಇನ್ನೊಂದು ಅರ್ಥವೂ ಇದೆ. ಉತ್ತಮ ಜೀವರಿಗೆ ಕಾಮವು ಸ್ವಲ್ಪ ಮಟ್ಟಿಗೆ ಆವರಕವಾಗಿದೆ. ಅದಕ್ಕೆ ದೃಷ್ಟಾಂತ ವಹ್ನಿಗೆ ಧೂಮವು ಸ್ವಲ್ಪವೇ ಆವರಕವಾಗಿರುವುದು. ಮಧ್ಯಮ ಜೀವರಾಶಿಗೆ ಕಾಮವು ಇನ್ನೂ ಅಧಿಕವಾಗಿ ಪ್ರತಿಬಂಧಕವಾಗಿದೆ. ಕನ್ನಡಿಯಲ್ಲಿರತಕ್ಕ ಮಲವು ಮುಖದ ಅಭಿವ್ಯಕ್ತಿಗೆ ಪ್ರತಿಬಂಧಕವಾಗುವಂತೆ. ಅಧಮ ಜೀವರಿಗೆ ಕಾಮವು ಅತ್ಯಂತವಾಗಿ ಆವರಕವಾಗುತ್ತದೆ. ಗರ್ಭಸ್ಥ ಶಿಶುವಿಗೆ ಗರ್ಭವೇಷ್ಟನ ಚರ್ಮವು ಸಂಪೂರ್ಣ ಆವರಕವಾಗುವಂತೆ.

ಶಾಸ್ತ್ರದಿಂದ ಜ್ಞಾನ ಸಂಪಾದನ ಮಾಡಿರುವವನಿಗೂ ಕಾಮವೆಂಬ ಶತ್ರುವು ಒಳಗೆ ಪ್ರವೇಶವಾದರೆ ಆ ಜ್ಞಾನದೀಪವನ್ನು ನಾಶಗೊಳಿಸಿ ಜೀವನಿಗೆ

ಅಧಃಪಾತವನ್ನು ಉಂಟುಮಾಡುತ್ತದೆ. ಅದು ಹೇಗೆಂದರೆ ಒಬ್ಬ ಕಳ್ಳನು ಮನೆಯ ಬಾಗಿಲನ್ನು ತೆರೆದಿದ್ದಾಗ ಮನೆಯೊಳಗೆ ಪ್ರವೇಶ ಮಾಡಿ ಮನೆಯೊಳಗಿರತಕ್ಕ ದೀಪವನ್ನು ಮೊದಲು ನಾಶ ಮಾಡಿ ಅಲ್ಲಿರತಕ್ಕ ಎಲ್ಲ ವಸ್ತುಗಳನ್ನೂ ಅಪಹರಿಸಿ ಯಜಮಾನನನ್ನು ಕೊಂದು ಹಾಕುವಂತೆ ಈ ದೇಹವೆಂಬ ಮನೆಗೆ ಇಂದ್ರಿಯಗಳು ಎಂಬ ಬಾಗಿಲು ತೆರೆದಿಟ್ಟಾಗ ಅಂದರೆ ಅವುಗಳು ವಿಷಯ ಸಂಸ್ಪೃಷ್ಟಗಳಾದಾಗ ಕಾಮನೆಂಬ ಚೋರನು ಮನಸ್ಸಿನಲ್ಲಿ ಪ್ರವೇಶ ಮಾಡಿ ಅಲ್ಲಿರತಕ್ಕ ಶಾಸ್ತ್ರಜ್ಞಾನ ಎಂಬ ದೀಪವನ್ನು ನಾಶ ಮಾಡಿ ಜೀವನ ಸರ್ವಗುಣಗಳನ್ನು ಅಪಹರಿಸಿ ಜೀವನನ್ನು ನರಕಾದ್ಯನರ್ಥಕ್ಕೆ ಭಾಗಿಯನ್ನಾಗಿ ಮಾಡುತ್ತಾನೆ.

ಆದುದರಿಂದ ಕಾಮವು ಪ್ರಬಲವಾದ ಶತ್ರುವು. ಬೆಂಕಿಯಂತೆ ತಾಪವನ್ನು ಕೊಡತಕ್ಕದ್ದು. ಪೃಥ್ವಿಯಲ್ಲಿ ಎಷ್ಟು ವ್ರೀಹಿಗಳು, ಹಿರಣ್ಯ, ಪಶುಗಳು, ಸ್ತ್ರೀಯರು ಇವೆಯೋ ಅಷ್ಟೂ ಒಬ್ಬ ಪುರುಷನ ತಾಪದ ತೃಪ್ತಿಗೆ ಪರ್ಯಾಪ್ತಗಳಾಗಲಾರವು. ಅಂತಹ ಕಾಮವೆಂಬ ಶತ್ರುವನ್ನು ಮೊದಲು ಜಯಿಸಿ ಈ ದೇಹವೆಂಬ ಮನೆಯ ಬಾಗಿಲಿನಂತೆ ಇರತಕ್ಕ ಇಂದ್ರಿಯಗಳನ್ನು ಮುಚ್ಚಿಬಿಡು. ಅಂದರೆ ವಿಷಯದ ಕಡೆ ಹೋಗದಂತೆ ಮಾಡು.

ಇನ್ನು, ಕಾಮವೆಂಬ ಶತ್ರುವಿನ ಆವಾಸ ಸ್ಥಾನವನ್ನು ಹೇಳುತ್ತೇನೆ, ತಿಳಿದುಕೋ. ಶತ್ರುವಿನಿಂದ ಕೂಡಿ ಯುದ್ಧ ಮಾಡತಕ್ಕವನು ಮೊದಲು ಶತ್ರುವು ಇರತಕ್ಕ ಸ್ಥಾನ ಯಾವುದೆಂದು ತಿಳಿದುಕೊಳ್ಳಬೇಕು. ಹಾಗೆಯೇ ಕಾಮವೆಂಬ ಶತ್ರುವಿನ ನಾಶಕ್ಕೆ ಅದರ ವಾಸಸ್ಥಾನಗಳನ್ನು ತಿಳಿಯಬೇಕು. ಇಂದ್ರಿಯಗಳು, ಮನಸ್ಸು, ಮೊದಲಾದವೇ ಆ ವಾಸಸ್ಥಾನಗಳು. ಅಂದರೆ ಇಂದ್ರಿಯಗಳಿಂದ ವಿಷಯಗಳನ್ನು ಸಂಬಂಧ ಮಾಡಿದಾಗ, ಅಥವಾ ಬುದ್ಧಿಯಿಂದ ಆ ವಿಷಯಗಳನ್ನು ಧ್ಯಾನ ಮಾಡಿದಾಗ ಮನಸ್ಸಿನಲ್ಲಿ ಕಾಮವು ಉತ್ಪನ್ನವಾಗುತ್ತದೆ.

ಅಂತಹ ಕಾಮವೆಂಬ ಶತ್ರುವನ್ನು ಜಯಿಸಲು ಆಯುಧವನ್ನು ನಿನಗೆ ಉಪದೇಶ ಮಾಡುತ್ತೇನೆ. ಶರೀರಾಭಿಮಾನಿ ಪೃಥ್ವಿ ದೆಸೆಯಿಂದ ಇಂದ್ರಿಯಾಭಿಮಾನಿಗಳಾದ ದಿಕ್ಪಾಲಕರೇ ಮೊದಲಾದವರು ಶ್ರೇಷ್ಠರು. ಆ ದೇವತೆಗಳ ದೆಸೆಯಿಂದ ಶಬ್ದ ಸ್ಪರ್ಶ ಮೊದಲಾದ ವಿಷಯಕ್ಕೆ ಅಭಿಮಾನಿಗಳಾದ

ಸೌಪರ್ಣಿ ವಾರುಣಿ ಪಾರ್ವತಿ ಎಂಬ ಮೂರು ದೇವತಾ ಸ್ತ್ರೀಯರು ಶ್ರೇಷ್ಠರು. ಅವರಕ್ಕಿಂತ ಮನೋಭಿಮಾನಿಗಳಾದ ಗರುಡ ಶೇಷ ರುದ್ರರು ಶ್ರೇಷ್ಠರು. ಅವರ ದೆಸೆಯಿಂದ ಬುದ್ಧಿ ತತ್ತ್ವಾಭಿಮಾನಿಯರಾದ ಸರಸ್ವತಿ ಭಾರತಿಯರು ಶ್ರೇಷ್ಠರು. ಅವರ ದೆಸೆಯಿಂದ ಮಹತ್ತತ್ತ್ವಾಭಿಮಾನಿಗಳಾದ ಚತುರ್ಮುಖ ಬ್ರಹ್ಮ ಮತ್ತು ವಾಯುದೇವ ಶ್ರೇಷ್ಠರು. ಅವರ ದೆಸೆಯಿಂದ ಪ್ರಕೃತಿ ತತ್ತ್ವಾಭಿಮಾನಿಯಾದ ಮಹಾಲಕ್ಷ್ಮಿಯು ಶ್ರೇಷ್ಠಳು. ಅವಳ ದೆಸೆಯಿಂದಲೂ ಪರಮಪುರುಷನಾದ ನಾರಾಯಣನು ಶ್ರೇಷ್ಠನು. ಅವನಿಗೆ ಸಮಾನವಾದ ವಸ್ತುವಿಲ್ಲ. ಅವನ ದೆಸೆಯಿಂದ ಶ್ರೇಷ್ಠವಾದ ವಸ್ತುವಿಲ್ಲ.

ಅವನೇ ಶ್ರೇಷ್ಠವಾದ ಗತಿಯು ಎಂದು ಆ ಪರಮಾತ್ಮನ ಸರ್ವೋತ್ಕೃಷ್ಟತ್ವವನ್ನು ಅವನ ಅನಂತಗುಣಗಳನ್ನು ವಿಷಯೀಕರಿಸುವ ಜ್ಞಾನವು ಆ ಕಾಮವೆಂಬ ಶತ್ರುವನ್ನು ಸಂಹರಿಸಲಿಕ್ಕೆ ಶ್ರೇಷ್ಠವಾದ ಆಯುಧವು. ಇಂತಹ ಜ್ಞಾನವನ್ನು ಸಂಪಾದಿಸಿ ಪರಮಾತ್ಮನಲ್ಲಿ ಮನಸ್ಸನ್ನು ನಿಶ್ಚಲವಾಗಿಟ್ಟು ನಿಗ್ರಹ ಮಾಡಲಿಕ್ಕೆ ಅಶಕ್ಯವಾದ ಕಾಮವೆಂಬ ಶತ್ರುವನ್ನು ನಾಶಮಾಡು" ಎಂದು ಅರ್ಜುನನಿಗೆ ಉಪದೇಶ ಮಾಡಿದನು. (ಹತ್ತನೆಯ ದಿನದ ಉಪನ್ಯಾಸವು ಮುಗಿಯಿತು)

ಇಲ್ಲಿಗೆ ತೃತೀಯಾಧ್ಯಾಯವು ಸಮಾಪ್ತಿಯಾಯಿತು

***

# ನಾಲ್ಕನೆಯ ಅಧ್ಯಾಯ

ಶ್ರೀಕೃಷ್ಣ ಪರಮಾತ್ಮನು ಅರ್ಜುನನಿಗೆ ಕರ್ಮಯೋಗದ ಮಹತ್ತ್ವವನ್ನು ಉಪದೇಶಿಸುತ್ತಾನೆ: "ಎಲೋ ಅರ್ಜುನ! ನಾನು ನಿಷ್ಕಾಮ ಕರ್ಮಯೋಗವನ್ನು ಜಗತ್ಸೃಷ್ಟಿಯ ಆದಿಯಲ್ಲಿ ಸೂರ್ಯದೇವನಿಗೆ ಉಪದೇಶಿಸಿದ್ದೇನೆ. ಆ ಸೂರ್ಯದೇವನು ತನ್ನ ಮಗನಾದ ಶ್ರಾದ್ಧದೇವಮನುವಿಗೆ ಉಪದೇಶಿಸಿದನು. ಮನುವು ತನ್ನ ಮಗನಾದ ಇಕ್ಷ್ವಾಕುವಿಗೆ ಉಪದೇಶ ಕೊಟ್ಟನು. ಇದೇ ರೀತಿ ಪರಂಪರೆಯಾಗಿ ಅನೇಕ ರಾಜರ್ಷಿಗಳು ದೊಡ್ಡವರಿಂದ ಉಪದೇಶ ತೆಗೆದುಕೊಂಡು ತಾವು ಅನುಷ್ಠಾನ ಮಾಡುತ್ತಾ ಇನ್ನೊಬ್ಬರಿಗೆ ಉಪದೇಶ ಕೊಡುತ್ತಾ ಬಂದರು. ಅದು ಕೆಲವು ಕಾಲ ಹೋದ ಮೇಲೆ ನಷ್ಟವಾಯಿತು. ಆ ಕರ್ಮವನ್ನೇ ನಿನಗೆ ನಾನು ಉಪದೇಶ ಕೊಡುತ್ತಿದ್ದೇನೆ. ನೀನು ನನ್ನ ಭಕ್ತನು, ನನಗೆ ಸಖನು. ಆದುದರಿಂದ ರಹಸ್ಯವಾದ ಸನಾತನವಾದ ಉತ್ತಮವಾದ ಈ ನಿಷ್ಕಾಮ ಕರ್ಮಯೋಗವನ್ನು ನಿನಗೆ ಉಪದೇಶ ಕೊಡುತ್ತಿದ್ದೇನೆ."

ಇಷ್ಟು ಹೇಳಲು ಅರ್ಜುನನು ಪ್ರಶ್ನೆ ಮಾಡುತ್ತಿದ್ದಾನೆ: "ಎಲೋ ಶ್ರೀಕೃಷ್ಣನೇ! ನೀನು ಕೆಲವು ವರ್ಷದ ಹಿಂದೆ ವಸುದೇವನಲ್ಲಿ ಹುಟ್ಟಿದವನು. ಸೂರ್ಯನು ಮೊದಲಾದವರು ಬಹಳ ಹಿಂದಿನವರು. ಅವರಿಗೆ ನೀನು ಹೇಗೆ ಉಪದೇಶ ಕೊಟ್ಟೆ?"

ಅದಕ್ಕೆ ಶ್ರೀಕೃಷ್ಣ ಪರಮಾತ್ಮ ಸಮಾಧಾನವನ್ನು ಹೇಳುತ್ತಾನೆ: "ಅರ್ಜುನ! ನನಗೆ ಎಷ್ಟೋ ಜನ್ಮಗಳಾದವು. ನಿನಗೂ ಬಹಳ ಜನ್ಮಗಳಾದವು. ಆದರೆ ಅದನ್ನು ನೀನು ತಿಳಿದಿಲ್ಲ, ನಾನು ಅದೆಲ್ಲವನ್ನೂ ತಿಳಿದಿದ್ದೇನೆ. ಆದ್ದರಿಂದ ನಾನು ಸೂರ್ಯನಿಗೆ ಉಪದೇಶ ಕೊಟ್ಟದ್ದು ಹಿಂದಿನ ಜನ್ಮದಲ್ಲಿ.

ನನಗೆ ಯದ್ಯಪಿ ಜನ್ಮ ಇಲ್ಲದಿದ್ದರೂ, ನನ್ನ ದೇಹಕ್ಕೆ ಉತ್ಪತ್ತಿ ನಾಶಗಳಿಲ್ಲ. ನನ್ನನ್ನು ಸೃಷ್ಟಿ ಮಾಡತಕ್ಕವನು ಇಲ್ಲ. ನಾನೇ ಎಲ್ಲ ಪ್ರಾಣಿಗಳಿಗೆ

ಸ್ವಾಮಿಯಾಗಿದ್ದೇನೆ. ಆದರೂ ನಾನು ವಸುದೇವಾದಿ ಶರೀರದಲ್ಲಿ ಪ್ರವೇಶ ಮಾಡಿ, ನನ್ನ ಇಚ್ಛೆಯಿಂದ ನನ್ನ ರೂಪವನ್ನು ಪ್ರಕಟ ಮಾಡುತ್ತೇನೆ. ಪ್ರಕೃತಿಯ ತಮೋಗುಣದಿಂದ ಮೋಹಿತರಾದ ಜನರುಗಳು ನಾನು ವಸುದೇವನಿಂದ ಹುಟ್ಟಿ-ದವನೆಂದು ಭ್ರಾಂತರಾಗುತ್ತಾರೆ.

ನಾನು ಅನೇಕರೂಪವನ್ನು ಪ್ರಕಟ ಮಾಡುವುದು ನನ್ನ ಪ್ರಯೋಜನವನ್ನು ಸಾಧಿಸುವುದಕ್ಕೋಸ್ಕರವಲ್ಲ. ಸಜ್ಜನರ ಉದ್ಧಾರಕ್ಕೋಸ್ಕರವಾಗಿ ನಾನು ಎಲ್ಲ ವ್ಯಾಪಾರಗಳನ್ನು ಮಾಡುವುದು ನನ್ನ ಸ್ವಭಾವವಾಗಿದೆ. ನನ್ನ ಅವತಾರದಿಂದ ಸಜ್ಜನರ ಸಂರಕ್ಷಣೆ, ದುಷ್ಟರ ವಿನಾಶ ಮತ್ತು ಧರ್ಮ ಸಂಸ್ಥಾಪನೆಯೂ ಆಗುತ್ತದೆ. ಯಾವಾಗ ಧರ್ಮದ ಹ್ರಾಸವು ಕಂಡು ಬರುತ್ತದೋ, ಆವಾಗ ನನ್ನ ರೂಪವನ್ನು ಪ್ರಕಟ ಮಾಡುತ್ತೇನೆ. ಕಲಿಯುಗದಲ್ಲಿ ನಾನು ಸಾಕ್ಷಾತ್ತಾಗಿ ಪ್ರಕಟವಾಗುವುದಿಲ್ಲ. ಮೂರು ಯುಗದಲ್ಲಿ ಮಾತ್ರ ನಾನು ಅವತಾರ ಮಾಡುವುದರಿಂದ ನನಗೆ ತ್ರಿಯುಗನೆಂದು ಹೆಸರು. ನಾನು ಸಾಕ್ಷಾತ್ತಾಗಿ ಅವತಾರ ಮಾಡದೇ ಹೋದರೂ, ನನ್ನ ವಿಭೂತಿ ಪುರುಷರು ಅವತಾರ ಮಾಡಿ ಧರ್ಮ ಸ್ಥಾಪನೆ ಮಾಡುತ್ತಾರೆ.

ಈ ರೀತಿ ನನ್ನ ಜನ್ಮ ಕರ್ಮಗಳನ್ನು ಯಾರು ಸರಿಯಾಗಿ ತಿಳಿಯುತ್ತಾರೋ, ಅವರು ಪುನರ್ಜನ್ಮ ರಹಿತರಾಗಿ ನನ್ನನ್ನೇ ಹೊಂದುವರು. ಎಷ್ಟೋ ಜನರು ರಾಗ ಕ್ರೋಧ ಭಯರಹಿತರಾಗಿ ನನ್ನನ್ನೇ ಸರ್ವೋತ್ತಮನೆಂದು ತಿಳಿದು ನನ್ನನ್ನು ಆಶ್ರಯಿಸಿ ನನ್ನ ದಿವ್ಯ ತತ್ತ್ವಜ್ಞಾನ ಮತ್ತು ತಪಸ್ಸಿನಿಂದ ಪವಿತ್ರ-ರಾಗಿ ನನ್ನ ಸಾಯುಜ್ಯರೂಪ ಮೋಕ್ಷವನ್ನು ಹೊಂದಿದ್ದಾರೆ".

ಇಲ್ಲಿ ಕೆಲವರಿಗೆ ಒಂದು ಸಂಶಯವು ಉಂಟಾಗುವುದು. ಏನೆಂದರೆ ಶ್ರೀಕೃಷ್ಣನು ಅವತಾರ ಮಾಡಿ ಭೀಷ್ಮ ದ್ರೋಣ ಮೊದಲಾದ ಅನೇಕ ಸಜ್ಜನರ ನಾಶವನ್ನೇ ಮಾಡಿದ್ದಾನೆ. ಹೀಗಿರುವಾಗ ಅವರನ್ನು ಉದ್ಧಾರ ಮಾಡಿದನೆಂದು ಹೇಗೆ ಕೂಡುತ್ತದೆ? ಇದಕ್ಕೆ ಉತ್ತರ ಸಜ್ಜನರ ಉದ್ಧಾರವೆಂದರೆ ಮೋಕ್ಷವೆಂಬ ಮಹಾ ಪುರುಷಾರ್ಥವನ್ನು ಅವರಿಗೆ ಕೊಡುವುದು. ಭೀಷ್ಮ ದ್ರೋಣಾದಿಗಳು ಶ್ರೀಕೃಷ್ಣ ಪರಮಾತ್ಮನ ಸೇವಾರೂಪವಾಗಿ ಭೂಭಾರಹಾನಿಯಲ್ಲಿ ಅಂಗರೂಪರಾಗಿ ಯುದ್ಧ ಮಾಡಿದರು. ಇದರಿಂದ ಅವರಿಗೆ ವಿಶೇಷವಾದ ಮೋಕ್ಷಲಾಭವು

ಪ್ರಾಪ್ತವಾಗುವುದು. ಆದುದರಿಂದ ಅವರನ್ನು ಉದ್ಧಾರ ಮಾಡಿದಂತಾಯಿತು. ದುಷ್ಟರ ನಿಗ್ರಹವೆಂದರೆ ಅವರ ಯೋಗ್ಯತೆಗೆ ಸರಿಯಾದ ದುಷ್ಟ ಕರ್ಮವನ್ನು ಮಾಡಿಸಿ ನಿತ್ಯ ನರಕವನ್ನು ಅವರಿಗೆ ಕೊಡುವುದು ಎಂದು ಅಭಿಪ್ರಾಯ. ಆದುದರಿಂದ ದೇಹ ನಾಶವೆಂಬುದು ಸಜ್ಜನರಿಗೂ ದುಷ್ಟರಿಗೂ ಸಮಾನ- ವಾಗಿದ್ದರೂ ಪರ್ಯವಸಾನದಲ್ಲಿ ಇನ್ನೂ ವಿಶೇಷ ಇರುವುದರಿಂದ ಶ್ರೀಕೃಷ್ಣನ ಉಪದೇಶವು ಯುಕ್ತವೆಂದು ತಿಳಿಯಬೇಕು.

ಪರಮಾತ್ಮನು 'ತನ್ನ ಸಾಯುಜ್ಯವನ್ನು ಜ್ಞಾನಿಗೆ ಕೊಡುತ್ತೇನೆ' ಎಂದು ಹೇಳಿದ್ದಾನೆ. ಸಾಯುಜ್ಯವೆಂದರೆ ಐಕ್ಯವೆಂದು ಕೆಲವರು ಅರ್ಥ ಮಾಡುತ್ತಾರೆ. ಅದು ಸರಿಯಲ್ಲ. ಪರಮಾತ್ಮನಲ್ಲಿ ಪ್ರವೇಶ ಮಾಡುವುದಕ್ಕೆ ಸಾಯುಜ್ಯವೆಂದು ಹೆಸರು. ಪರಮಾತ್ಮನಲ್ಲಿ ಪ್ರವೇಶ ಮಾಡಿದ ಜೀವನು ಪರಮಾತ್ಮನ ಸ್ವರೂಪವಾಗುವುದಿಲ್ಲ. ಪಿಶಾಚಿಯು ಸ್ತ್ರೀಯರ ದೇಹದಲ್ಲಿ ಪ್ರವೇಶ ಮಾಡಿದರೂ ಅದು ಪ್ರತ್ಯೇಕ ಇರುವಂತೆ ಜೀವನು ಮೋಕ್ಷದಲ್ಲಿ ಪರಮಾತ್ಮನಿಗಿಂತ ಬೇರೆಯಾಗಿಯೇ ಇರುತ್ತಾನೆ.

'ಪರಮಾತ್ಮನ ಜನ್ಮ ಕರ್ಮವನ್ನು ಸರಿಯಾಗಿ ತಿಳಿದವನು ಮೋಕ್ಷಕ್ಕೆ ಹೋಗುತ್ತಾನೆ' ಎಂದು ಕೃಷ್ಣನು ಹಿಂದೆ ಹೇಳಿದನು. ಅಷ್ಟು ಮಾತ್ರ ಜ್ಞಾನದಿಂದ ಮೋಕ್ಷವು ಸುಲಭವೋ? ಎಂದು ಕೆಲವರು ಶಂಕಿಸಬಹುದು. ಇದರ ಅಭಿಪ್ರಾಯವು ಹೀಗೆ: ಶ್ರೀಕೃಷ್ಣ ನಮ್ಮಂತೆ ಮನುಷ್ಯನಲ್ಲ. ಅವನು ತನ್ನ ಪರಮಾತ್ಮ ಸ್ವರೂಪವನ್ನು ಪ್ರಕಟ ಮಾಡಿದ್ದಾನೆಂದು ಹೇಳಿದರೂ, ತಾನು ಶ್ರೀಕೃಷ್ಣನ ಉಪದೇಶವನ್ನು ಶ್ರದ್ಧೆಯಿಂದ ಕೇಳುತ್ತಾನೆ. ಆ ಉಪದೇಶದಿಂದ ಅವರಿಗೆ ಪರಮಾತ್ಮನ ಸಂಪೂರ್ಣವಾದ ಯಥಾರ್ಥಜ್ಞಾನ ಉಂಟಾಗುತ್ತದೆ. ಇದರಿಂದ ಮೋಕ್ಷಪ್ರಾಪ್ತಿಯು. ಇಷ್ಟು ಶ್ರೀಕೃಷ್ಣನ ಅಭಿಪ್ರಾಯ.

ಅರ್ಜುನನು ಶ್ರೀಕೃಷ್ಣನನ್ನು ಪ್ರಶ್ನೆ ಮಾಡುತ್ತಾನೆ: "ಲೋಕದಲ್ಲಿ ಪರಮಾತ್ಮನನ್ನು ಭಜಿಸುವವರು ಎರಡು ಪ್ರಕಾರದವರಿದ್ದಾರೆ. ಭಾಗವತರು ಮತ್ತು ತ್ರೈವಿದ್ಯರು ಎಂಬುದಾಗಿ. ಭಾಗವತರೆಂಬುವವರು ಪರಮಾತ್ಮನೇ ಸಕಲ ಕರ್ಮಕರ್ತನು ಅವನೇ ಸಕಲ ಯಜ್ಞಭೋಕ್ತನು ಎಂದು ತಿಳಿದು ಪ್ರತಿ

ಕ್ಷಣದಲ್ಲಿಯೂ ಈ ಅನುಸಂಧಾನದಿಂದಲೇ ಕರ್ಮ ಮಾಡಿ ಪರಮಾತ್ಮನಿಗೆ ಆ ಕರ್ಮವನ್ನು ಸಮರ್ಪಣೆ ಮಾಡುತ್ತಾರೆ. ತ್ರೈವಿದ್ಯರೆಂಬುವರು ಮೂರು ವೇದಗಳಿಂದ ಮೇಲೆಮೇಲೆ ತೋರುವ ಅರ್ಥವನ್ನು ತಿಳಿದು ಇತರ ದೇವತೆಗಳನ್ನು ಪೂಜೆ ಮಾಡುತ್ತ ಸಕಲ ಕರ್ಮಕರ್ತನು ಸಕಲ ಕರ್ಮಭೋಕ್ತನೂ ಸಕಲ ದೇವತೆಗಳ ಅಂತರ್ಯಾಮಿಯೂ ಆ ಪರಮಾತ್ಮನೇ ಎಂಬ ಭಾವನೆ ಇಲ್ಲದವರಾಗಿ ಇತರ ದೇವತೆಗಳನ್ನು ಪೂಜೆ ಮಾಡಿ ಅಂತ್ಯದಲ್ಲಿ ಪರಮಾತ್ಮನಿಗೆ ಸಮರ್ಪಣೆ ಮಾಡುತ್ತಾರೆ. ಇವರಿಬ್ಬರಿಗೂ ನೀನು ಮೋಕ್ಷವನ್ನು ಕೊಟ್ಟರೆ ನಿನ್ನಲ್ಲಿ ವೈಷಮ್ಯವೆಂಬ ದೋಷವು ಪ್ರಾಪ್ತವಾಗುವುದು. ಆ ಎರಡು ಅಧಿಕಾರಿಗಳ ಜ್ಞಾನದಲ್ಲಿ ವೈಷಮ್ಯವಿದ್ದ ಮೇಲೆ ಅವರಿಗೆ ಕೊಡತಕ್ಕ ಫಲವು ವಿಷಮವಾಗಿಯೇ ಇರಬೇಕು. ವಿಷಮಸಾಧನಾನುಷ್ಠಾನ ಮಾಡಿದವರಿಗೆ ಸಮಾನ ಫಲವನ್ನು ಕೊಡತಕ್ಕಂಥ ನೀನು ವೈಷಮ್ಯವೆಂಬ ದೋಷಕ್ಕೆ ಗುರಿಯಾಗುತ್ತಿ"

ಅದಕ್ಕೆ ಶ್ರೀಕೃಷ್ಣ ಪರಮಾತ್ಮನು ಸಮಾಧಾನ ಹೇಳುತ್ತಾನೆ: "ನಾನು ಅವರಿಬ್ಬರಿಗೂ ಸಮಾನವಾದ ಫಲವನ್ನು ಕೊಡುವುದಿಲ್ಲ. ಭಾಗವತರಿಗೆ ಮಾತ್ರ ಮೋಕ್ಷವನ್ನು ಕೊಡುತ್ತೇನೆ. ತ್ರೈವಿದ್ಯರಿಗೆ ಸ್ವರ್ಗವನ್ನು ಕೊಡುತ್ತೇನೆ. 'ಇತರ ದೇವತೆಗಳನ್ನು ಪೂಜೆ ಮಾಡಿದರೆ ನಾನೇಕೆ ಸ್ವರ್ಗವನ್ನು ಕೊಡುತ್ತೇನೆ?' ಎಂದು ಕೇಳಬಹುದು. ಇತರ ದೇವತೆಗಳನ್ನು ಉದ್ದೇಶಿಸಿ ಪೂಜೆ ಮಾಡಿದರೂ ಆ ಪೂಜೆಗಳನ್ನು ಆ ದೇವತೆಗಳ ಅಂತರ್ಯಾಮಿಯಾಗಿ ನಾನೇ ಸ್ವೀಕರಿಸುತ್ತೇನೆ. ಇತರ ದೇವತೆಗಳ ಅಂತರ್ಯಾಮಿಯಾದ ನಾನೇ ಫಲ ಕೊಡಲು ಸಮರ್ಥನು.

ನಾನು ಎಲ್ಲರಿಗೂ ತಂದೆಯಾದ ಕಾರಣ ನನ್ನನ್ನು ಬಿಟ್ಟು ಇತರ ದೇವತೆಗಳನ್ನು ಆರಾಧಿಸುವವರು ಮೋಕ್ಷಕ್ಕೆ ಅರ್ಹರಾಗುವುದಿಲ್ಲ. ಬ್ರಾಹ್ಮಣಾದಿ ಚತುರ್ವರ್ಣ-ವನ್ನು ನಾನೇ ಸೃಷ್ಟಿ ಮಾಡಿದವನು. ಆದುದರಿಂದ ಜಗತ್ತಿಗೆ ನಾನು ತಂದೆಯೆಂದು ತಿಳಿಯಬೇಕು. ನಾಲ್ಕು ವರ್ಣದವರನ್ನು ಸೃಷ್ಟಿ ಮಾಡಿದ್ದು ಗುಣ ಕರ್ಮಗಳ ವಿಭಾಗವನ್ನು ಅನುಸರಿಸಿಯೇ.

ಅದು ಹೇಗೆಂದರೆ, ಶುದ್ಧ ಸಾತ್ವಿಕರು ದೇವತೆಗಳು. ಅವರಲ್ಲಿ ಬ್ರಾಹ್ಮಣಾದಿ ವರ್ಣವಿಭಾಗವಿಲ್ಲ. ಅವರು ಬ್ರಾಹ್ಮಣಾದಿ ಜಾತಿಗಳಿಗೆ

ಅಭಿಮಾನಿಗಳಾಗಿರುತ್ತಾರೆ. ಶುದ್ಧ ತಾಮಸರು ದೈತ್ಯರು. ಅವರಲ್ಲಿ ಯಾವ ವರ್ಣ ವಿಭಾಗವಿಲ್ಲ. ಮನುಷ್ಯರು ರಾಜಸರು. ಮನುಷ್ಯರು ಮೂರು ಪ್ರಕಾರವಿದ್ದಾರೆ. ಸಾತ್ವಿಕ ರಾಜಸರು, ರಾಜಸ ರಾಜಸರು, ರಾಜಸ ತಾಮಸರು ಎಂದು. ರಾಜಸ ತಾಮಸರಾದ ಮನುಷ್ಯರು ತಮಸ್ಸಿಗೆ ಯೋಗ್ಯರಾಗಿದ್ದಾರೆ. ರಾಜಸರಾಜಸರಾದ ಮನುಷ್ಯರು ನಿತ್ಯಸಂಸಾರಿಗಳು. ರಾಜಸ ಸಾತ್ವಿಕರಾದ ಮನುಷ್ಯರುಗಳು ಮುಕ್ತಿ-ಯೋಗ್ಯರಾಗಿದ್ದಾರೆ. ಅವರಲ್ಲಿ ನಾಲ್ಕು ವಿಭಾಗವಿದೆ.

ಬ್ರಾಹ್ಮಣಾದಿ ವಿಭಾಗವು ದೇಹ ನಿಮಿತ್ತಕವಾಗಿ ಮತ್ತು ಸ್ವಾಭಾವಿಕವಾಗಿ ಎಂದು ಎರಡು ಪ್ರಕಾರವಾದದು. ಬ್ರಾಹ್ಮಣಾದಿ ದೇಹ ಮೂಲಕವಾದ ವಿಭಾಗವನ್ನು ತಂದೆ ತಾಯಿಗಳ ನಿಮಿತ್ತದಿಂದ ತಿಳಿಯಬೇಕು. ತಂದೆ ತಾಯಿಗಳ ನಿಮಿತ್ತದಿಂದ ಎಂದರೆ, ತಂದೆ ತಾಯಿಗಳು ಬ್ರಾಹ್ಮಣರಾದರೆ ಮಗನ ದೇಹವು ಬ್ರಾಹ್ಮಣ ದೇಹವೆಂದು ಹೇಳಲ್ಪಡುತ್ತದೆ. ಇದೇ ರೀತಿ ಕ್ಷತ್ರಿಯ ವಿಭಾಗವು. ಈ ಬ್ರಾಹ್ಮಣಾದಿ ದೇಹವು ಪಶ್ವಾದಿಗಳಿಗೂ ಕರ್ಮಾಧೀನವಾಗಿ ಬರಬಹುದು. ಆದುದರಿಂದ ಈ ವಿಭಾಗವು, ಅಂದರೆ ದೇಹನಿಮಿತ್ತಕ ಬ್ರಾಹ್ಮಣಾದಿ ವಿಭಾಗವು, ಮೋಕ್ಷಯೋಗ್ಯತೆ ತಿಳಿಯಲಿಕ್ಕೆ ಸಾಧನವಲ್ಲ.

ಮತ್ತೊಂದು ಪ್ರಕಾರದ ವರ್ಣ ವಿಭಾಗ ಜೀವಸ್ವರೂಪದಲ್ಲೇ ಸ್ವಾಭಾವಿಕವಾಗಿ ಇರುವ ಸತ್ವಾದಿಗುಣಗಳಿಗೆ ಸಂಬಂಧಿಸಿದ್ದು. ಸತ್ವಗುಣವು ಜೀವನ ಸ್ವಭಾವ-ದಲ್ಲಿರುವುದು ಮತ್ತು ಪ್ರಕೃತಿಯ ಗುಣವಾದದ್ದು ಎಂಬ ಎರಡು ಪ್ರಕಾರವಾದದ್ದು. ಜೀವಸ್ವಭಾವಭೂತವಾದ ಸತ್ವಗುಣವು ಸತ್ವ ರಜಸ್ಸು ಮತ್ತು ತಮಸ್ಸೆಂದು ಮೂರು ಪ್ರಕಾರವುಳ್ಳದ್ದು. ಅವುಗಳಲ್ಲಿ ಸತ್ವಗುಣ ಮಾತ್ರವುಳ್ಳ ಜೀವಸ್ವರೂಪವು ಬ್ರಾಹ್ಮಣ ಜೀವನೆಂದು ಹೇಳಲ್ಪಡುತ್ತದೆ. ಸ್ವಲ್ಪ ರಜೋಗುಣದ ಅಂಶವು ಸೇರಿ ಸತ್ವಗುಣವು ಅಧಿಕವಾಗಿದ್ದರೆ ಆ ಜೀವಸ್ವರೂಪವು ಕ್ಷತ್ರಿಯವೆಂದು ಹೇಳಲ್ಪಡುತ್ತದೆ. ರಜೋಗುಣವು ಅಧಿಕವಾಗಿದ್ದರೆ ಆ ಜೀವಸ್ವರೂಪವು ವೈಶ್ಯನೆಂದು ಹೇಳಲ್ಪಡುತ್ತದೆ. ತಮೋಗುಣವು ಅಧಿಕವಾಗಿದ್ದರೆ ಆ ಜೀವ-ಸ್ವರೂಪವು ಶೂದ್ರನೆಂದು ಹೇಳಲ್ಪಡುತ್ತದೆ. ಈ ತಮೋಗುಣ ಮತ್ತು

ರಜೋಗುಣಗಳು ಸತ್ವಗುಣದ ವಿಭಾಗವಾದ್ದರಿಂದ ಈ ನಾಲ್ಕೂ ಜೀವರು ಮೋಕ್ಷಯೋಗ್ಯರಾಗಿರುತ್ತಾರೆ.

ಶೂದ್ರಜೀವನಿಗೆ ಕರ್ಮಾಧೀನವಾಗಿ ಬ್ರಾಹ್ಮಣ ದೇಹ ಬರಬಹುದು. ಬ್ರಾಹ್ಮಣ ಜೀವನಿಗೆ ಕರ್ಮಾಧೀನವಾಗಿ ಶೂದ್ರ ದೇಹ ಬರಬಹುದು. ದೇಹ ನಿಮಿತ್ತಕವಾಗಿ ಬ್ರಾಹ್ಮಣಾದಿಗಳು ವ್ಯತ್ಯಾಸವಾದರೂ ಜೀವಸ್ವರೂಪಭೂತ ಬ್ರಾಹ್ಮಣಾದಿಗಳು ಎಂದಿಗೂ ವ್ಯತ್ಯಾಸವಾಗುವುದಿಲ್ಲ. ಆದುದರಿಂದಲೇ ಕೆಲವು ಸ್ಥಳದಲ್ಲಿ ಶೂದ್ರದೇಹವನ್ನು ಹೊಂದಿರತಕ್ಕ ಬ್ರಾಹ್ಮಣ ಜೀವನು ಶಮ- ದಮಾದಿಗಳಿಂದ ಅಧಿಕನಾಗಿರುತ್ತಾನೆ. ಅಂತಹ ಶೂದ್ರಾದಿದೇಹಧಾರಿಯಾಗಿರತಕ್ಕ ಬ್ರಾಹ್ಮಣಜೀವನಿಗೇನೆ ದೇಹದ ಬ್ರಾಹ್ಮಣನ ದೆಸೆಯಿಂದ ಆಧಿಕ್ಯ ಹಾಗೂ ತನ್ನಿಮಿತ್ತಕ ಅಧಿಕ ಸತ್ಕಾರವು ಶಾಸ್ತ್ರದಲ್ಲಿ ಹೇಳಲ್ಪಟ್ಟಿದೆ.

"ಈ ತರಹದ ಚಾತುರ್ವರ್ಣ್ಯವನ್ನು ನಾನು ಸೃಷ್ಟಿ ಮಾಡಿದಾಗ್ಯೂ ನಾನು ಅಕರ್ತನೆಂದೇ ಹೇಳಿಸಿಕೊಳ್ಳಲ್ಪಡುತ್ತೇನೆ."

ಅದರ ಅಭಿಪ್ರಾಯ ಏನೆಂದರೆ, ಈ ತರಹದ ವಿಚಿತ್ರ ಸೃಷ್ಟಿ ಮಾಡಿದರೂ ವೈಷಮ್ಯಾದಿಗುಣಗಳು ನನ್ನಲ್ಲಿ ಬರುವುದಿಲ್ಲ. ನಾನು ಫಲದ ಅಪೇಕ್ಷೆಯಿಂದ ಕರ್ಮವನ್ನು ಮಾಡುವುದಿಲ್ಲ. ಆದುದರಿಂದ ನನಗೆ ಫಲಪ್ರಾಪ್ತಿಯಿಲ್ಲ. ಆದ್ದರಿಂದ ಕರ್ತನಾದರೂ ನಾನೂ ಅಕರ್ತನೆಂದೇ ಹೇಳಿಸಿಕೊಳ್ಳುತ್ತೇನೆ. ಯಾರು ಈ ಪ್ರಕಾರ ನನ್ನ ಮಹಿಮೆಯನ್ನು ತಿಳಿಯುತ್ತಾರೋ ಅವರು ಕರ್ಮಬಂಧದಿಂದ ಮುಕ್ತ- ರಾಗುತ್ತಾರೆ.

"ಅರ್ಜುನ! ಕರ್ಮ, ಅಕರ್ಮ ಹಾಗೂ ವಿಕರ್ಮಗಳ ಸ್ವರೂಪವನ್ನು ಅವಶ್ಯವಾಗಿ ತಿಳಿದುಕೊಳ್ಳಬೇಕು. ಇದು ಜ್ಞಾನಿಗಳಿಗೂ ತಿಳಿಯಲಿಕ್ಕೆ ಅಶಕ್ಯವಾದದ್ದು. ಜ್ಞಾನಿಗಳೂ ಈ ವಿಷಯದಲ್ಲಿ ಮೋಹವನ್ನು ಹೊಂದುತ್ತಾರೆ. ಆದ್ದರಿಂದ ನಿನಗೆ ಅದರ ಸ್ವರೂಪವನ್ನು ಹೇಳುತ್ತೇನೆ ಕೇಳು. ಜೀವನು ಎಚ್ಚರಿಕೆಯಿಂದಿದ್ದಾಗ ಕರ್ಮ ಮಾಡುತ್ತಿದ್ದಾಗ ಆ ಕರ್ಮ ಪ್ರೇರಕನಾಗಿ ಪರಮಾತ್ಮನಿದ್ದಾನೆಂದು ತಿಳಿಕೊಳ್ಳಬೇಕು. ಹಾಗೇ ನಿದ್ರಾವಸ್ಥೆಯಲ್ಲಿ ಜೀವನು ಏನೂ ಕರ್ಮ ಮಾಡದ ಸಮಯದಲ್ಲಿ ಪರಮಾತ್ಮನು ನಮ್ಮ ಶ್ವಾಸೋಚ್ಛ್ವಾಸನ

ವ್ಯಾಪಾರ ಮಾಡುತ್ತಿದ್ದಾನೆಂದು ತಿಳಿಯಬೇಕು. ಸ್ವಪ್ನಾವಸ್ಥೆಯಲ್ಲಿ ಆನೆ, ಕುದುರೆ, ಮೊದಲಾದ ವಾಸನಾಮಯ ಅನೇಕ ವಸ್ತುಗಳನ್ನು ಸೃಷ್ಟಿ ಮಾಡುತ್ತಾನೆ.

ಸ್ವತಂತ್ರ ಕರ್ತನಾದ ಪರಮಾತ್ಮನ ಪ್ರೇರಣೆಯಿಲ್ಲದೆ ನನ್ನಿಂದ ಯಾವುದೂ ಮಾಡಲು ಸಾಧ್ಯವಿಲ್ಲವೆಂದು ತಿಳಿದುಕೊಂಡು ಶಾಸ್ತ್ರದಲ್ಲಿ ಹೇಳಿದ ಪ್ರಕಾರ ವರ್ಣಾಶ್ರಮಕ್ಕೆ ಉಚಿತವಾದ ಕರ್ಮವನ್ನು ಭಗವದರ್ಪಣಬುದ್ಧಿಯಿಂದ ಮಾಡಿದರೆ ಅದು ಕರ್ಮವೆಂದು ಹೇಳಲ್ಪಡುತ್ತದೆ. ಭಗವದರ್ಪಣಬುದ್ಧಿಯಿಂದ ಪರಮಾತ್ಮನೇ ಸ್ವತಂತ್ರ ಕರ್ತನೆಂದು ತಿಳಿದು ಯಾವುದೇ ಒಂದೇ ಕರ್ಮವನ್ನು ಮಾಡಿದರೆ ಅವನು ಜ್ಞಾನಿಯೆಂದೂ ಅವನು ಸಕಲ ಕರ್ಮಗಳ ಫಲಭಾಗಿಯಾಗುತ್ತಾನೆಂದೂ ತಿಳಿಯಬೇಕು. ಈ ತರಹ ಮಾಡದೆ, ಅಂದರೆ ಈ ತಿಳುವಳಿಕೆಯಿಲ್ಲದೆ ಮಾಡಿದರೆ ಅದು ಅಕರ್ಮವೆಂದು ಹೇಳಲ್ಪಡುತ್ತದೆ. ಇದಕ್ಕೆ ವಿರುದ್ಧವಾಗಿ ಮಾಡಿದರೆ ಅಂದರೆ ನಾನೇ ಸ್ವತಂತ್ರ ಕರ್ತನೆಂದು ತಿಳಿದು ಕರ್ಮ ಮಾಡಿದರೆ ವಿಕರ್ಮವೆಂದು ಹೇಳಲ್ಪಡುತ್ತದೆ" ಎಂದು ಶ್ರೀಕೃಷ್ಣ ಪರಮಾತ್ಮನು ಉಪದೇಶಿಸಿದನು.

(ಹನ್ನೊಂದನೆಯ ದಿನದ ಉಪನ್ಯಾಸವು ಮುಗಿಯಿತು.)

***

ಶ್ರೀಕೃಷ್ಣ ಪರಮಾತ್ಮನು ಅರ್ಜುನನಿಗೆ ಉಪದೇಶ ಮಾಡುತ್ತಿದ್ದಾನೆ: "ಎಲೋ ಅರ್ಜುನಾ! ಕರ್ಮವೆಂದರೆ ನಾನೇ ಸ್ವತಂತ್ರ ಕರ್ತನೆಂಬ ಅಭಿಮಾನತ್ಯಾಗ ಪೂರ್ವಕವಾಗಿರಬೇಕು ಎಂದು ಹೇಳಿದೆನು. ಇಷ್ಟೇ ಅಲ್ಲದೆ ಕರ್ಮವೆಂಬುವುದು ಫಲೇಚ್ಛಾತ್ಯಾಗ, ಈ ಫಲಕ್ಕೋಸ್ಕರ ಈ ಕರ್ಮ ಮಾಡುತ್ತೇನೆಂಬ ಸಂಕಲ್ಪ ತ್ಯಾಗ, ಈ ದೇಹವು ನನ್ನದು ಈ ವಸ್ತುಗಳು ನನ್ನವು ಎಂಬ ಅಭಿಮಾನತ್ಯಾಗ, ಮತ್ತು ಕರ್ಮಫಲದ ಸ್ನೇಹ ತ್ಯಾಗ – ಇಷ್ಟು ತ್ಯಾಗಗಳಿಂದ ಕೂಡಿರಬೇಕು. ಪರಮಾತ್ಮನ ಪ್ರೀತಿಯೇ ಉದ್ದೇಶವಾಗಿರಬೇಕು. ಪರಮಾತ್ಮನ ಸರ್ವೋತ್ತಮತ್ವ ಜ್ಞಾನವು ನನಗೆ ಬರಲಿ ಎಂಬ ಅಪೇಕ್ಷೆಯಿರಬೇಕು. ಹೀಗಿದ್ದರೆ ಅದು ಕರ್ಮವೆಂದು ಹೇಳಿಸಿಕೊಳ್ಳಲ್ಪಡುವುದು.

ಈ ಕರ್ಮವು ಅನೇಕ ಪ್ರಕಾರವಾಗಿದೆ. ಸನ್ಯಾಸಿಗಳು ಪರಮಾತ್ಮನ ಉಪಾಸನೆ-ಯನ್ನು ಮಾಡುತ್ತಾರೆ. ಅವರಿಗೆ ಅದೇ ಯಜ್ಞವು. ಗೃಹಸ್ಥಾಶ್ರಮಿಗಳು ಅಗ್ನ್ಯಂತ-ರ್ಗತ ಪರಮಾತ್ಮನಲ್ಲಿ ಹೋಮ ಮಾಡುತ್ತಾರೆ. ಇದು ಅವರ ಯಜ್ಞವು. ಇನ್ನು ಕೆಲವರು ಇಂದ್ರಿಯ ಸಂಯಮನವನ್ನು ಪರಮಾತ್ಮನ ಪ್ರೀತ್ಯರ್ಥವಾಗಿ ಮಾಡು-ತ್ತಾರೆ. ಅದು ಅವರ ಯಜ್ಞವು. ಇನ್ನು ಕೆಲವರು ಶಬ್ದಾದಿವಿಷಯಗಳನ್ನು ಭೋಗಿ-ಸುತ್ತಾ ಈ ಶಬ್ದಾದಿವಿಷಯಗಳು ಪರಮಾತ್ಮನ ಅಧೀನವಾದವು ಎಂದು ತಿಳಿದು-ಕೊಂಡು ವಿಷಯವನ್ನು ಭೋಗಿಸುವ ಪ್ರಯುಕ್ತ ಅವರಿಗೆ ಅದು ಯಜ್ಞವಾಗುತ್ತದೆ. ಇನ್ನು ಕೆಲವರು ಕರ್ಮೇಂದ್ರಿಯಗಳಿಂದ ಮಾಡಲ್ಪಡುವ ಕರ್ಮಗಳು ಭಗವತ್ಪೂಜೆ ಎಂದು ತಿಳಿದು ಕರ್ಮ ಮಾಡುತ್ತಾರೆ. ಅವರಿಗೆ ಅದು ಯಜ್ಞವಾಗುತ್ತದೆ. ಮತ್ತೆ ಕೆಲವರು ರೇಚಕ, ಪೂರಕ ಮತ್ತು ಕುಂಭಕ ಪ್ರಾಣಾಯಾಮ ಮಾಡುತ್ತಾ ಪರಮಾತ್ಮನ ಧ್ಯಾನ ಮಾಡುತ್ತಾರೆ. ಅದು ಕೂಡಾ ಯಜ್ಞವಾಗಿರುತ್ತದೆ. ಇನ್ನು ವೇದಾಧ್ಯಯನ, ಶ್ರವಣ-ಮನನಗಳು, ಕೃಚ್ಛ್ರ ಚಾಂದ್ರಾಯಣೀ ತಪಸ್ಸು ಮುಂತಾದ ಯಜ್ಞಗಳೂ ಇವೆ.

ಈ ಎಲ್ಲ ಯಜ್ಞಗಳನ್ನು ಭೋಗಿಸತಕ್ಕವನು ಪರಮಾತ್ಮನೇ. ಈ ಯಜ್ಞಗಳನ್ನು ಅನುಷ್ಠಾನ ಮಾಡಿದರೆ ಪಾಪಕ್ಷಯವೂ, ಪರಬ್ರಹ್ಮನ ಪ್ರಾಪ್ತಿಯೂ ಆಗುತ್ತದೆ. ಈ ಯಜ್ಞವನ್ನು ಮಾಡದಿದ್ದವನಿಗೆ ಮನುಷ್ಯ ಲೋಕದ ಸುಖವೇ ಇಲ್ಲ. ಪರಲೋಕದ ಸುಖವಂತೂ ಇಲ್ಲವೇ ಇಲ್ಲವೆಂದು ತಿಳಿಯಬೇಕು. ಈ ಯಜ್ಞಗಳ ಮಧ್ಯದಲ್ಲಿ ಜ್ಞಾನಯಜ್ಞವು ಬಹಳ ಶ್ರೇಷ್ಠವಾದದ್ದು. ಯಾಕೆಂದರೆ ಜ್ಞಾನಯಜ್ಞಕ್ಕೋಸ್ಕರವಾಗಿ, ಅಂದರೆ ಅದರ ಅಧಿಕಾರಪ್ರಾಪ್ತಿಗಾಗಿ ಇತರ ಯಜ್ಞಗಳನ್ನು ಮಾಡಿ ನಂತರ ಅದರ ಫಲವಾದ ಜ್ಞಾನಯಜ್ಞವನ್ನು ಮಾಡುವುದರಿಂದ ಜ್ಞಾನಯಜ್ಞವನ್ನು ಶ್ರೇಷ್ಠವೆಂದು ತಿಳಿಯಬೇಕು.

ಕೆಲವರು ಜ್ಞಾನಯಜ್ಞವನ್ನೇ ಶ್ರೇಷ್ಠವೆಂದು ಹೇಳಿದರೆ ವಿಪರೀತವಾಗಿ ಹೀಗೆ ಅರ್ಥ ಮಾಡಿಕೊಳ್ಳುತ್ತಾರೆ: 'ಕರ್ಮಾನುಷ್ಠಾನವನ್ನು ಬಿಟ್ಟು ಜ್ಞಾನಕ್ಕೆ ಪ್ರಯತ್ನ ಮಾಡುತ್ತೇವೆ' ಎಂದು. ಹಾಗೆ ಅಭಿಪ್ರಾಯವಿಲ್ಲ. ಜ್ಞಾನಯಜ್ಞಕ್ಕೆ ಅಧಿಕಾರಿಯಾಗಬೇಕಾದರೆ ಕರ್ಮಾನುಷ್ಠಾನ ಮಾಡಿಯೇ ತೀರಬೇಕು.

ಆದ್ದರಿಂದ ಯಾರು ತತ್ವದರ್ಶಿಗಳಿದ್ದಾರೋ ಅವರ ಹತ್ತಿರ ಹೋಗು. ಅವರಿಗೆ ದಂಡ ಪ್ರಣಾಮ ಮಾಡು. ಅವರಲ್ಲಿ ಸೇವೆಯನ್ನು ಮಾಡು. ಅವರಲ್ಲಿ ಪ್ರಶ್ನೆ ಮಾಡು. ಅವರು ನಿನಗೆ ಉಪದೇಶ ಕೊಡುತ್ತಾರೆ. ಅವರ ಉಪದೇಶದಿಂದ ಜ್ಞಾನವನ್ನು ಸಂಪಾದಿಸು. ಈ ಜ್ಞಾನದಿಂದ ನಿನಗಿರತಕ್ಕ ಬಂಧುಮೋಹವು ನಾಶ-ವಾಗುತ್ತದೆ. ಆ ಜ್ಞಾನದಿಂದ ಸಮಸ್ತ ಪ್ರಾಣಿಗಳಿಗೆ ಆಧಾರನಾದವನು ಪರಮಾತ್ಮ ಎಂದು ತಿಳಿದುಕೊಳ್ಳುತ್ತಿ. ನೀನು ಎಷ್ಟೇ ಪಾಪ ಮಾಡಿದರೂ ಆ ಪಾಪಸಮುದ್ರ-ವನ್ನು ಜ್ಞಾನವೆಂಬ ದೋಣಿಯಿಂದಲೇ ದಾಟುವವನಾಗುತ್ತಿ. ಜ್ಞಾನವೇ ಅನಂತ ಪಾಪಗಳನ್ನು ಪರಿಹಾರ ಮಾಡಲಿಕ್ಕೆ ಸಮರ್ಥವಾದದ್ದು.

ಮೂಢಭಕ್ತಿಯಿಂದ ಪರಮಾತ್ಮನನ್ನು ಮೊರೆ ಹೊಂದಿದರೆ ಸಮಸ್ತ ಪಾಪಕ್ಷಯ-ವಾಗಿ ಮೋಕ್ಷ ಸಿಗುವುದೆಂದು ಕೆಲವರ ಅಭಿಪ್ರಾಯವಿದೆ. ಅದು ಶಕ್ಯವಿಲ್ಲ. ಗಜೇಂದ್ರನು ಕೂಡ ಹಿಂದಿನ ಜನ್ಮಗಳಲ್ಲಿ ಅಭ್ಯಾಸ ಮಾಡಿದ ಜ್ಞಾನದಿಂದಲೇ ಪರಮಾತ್ಮನನ್ನು ಮೊರೆ ಹೊಂದಿದ್ದಾನೆ. **"ಪ್ರಾಗ್ಜನ್ಮನಿ ಅನುಶಿಕ್ಷಿತಮ್"**. ಆದ್ದರಿಂದ ಮೂಢಭಕ್ತಿಯ ಮಾತ್ರದಿಂದಲೇ ಉದ್ಧಾರ-ವಾಗುತ್ತದೆ ಎಂಬುದಕ್ಕೆ ಉದಾಹರಣೆಯಿಲ್ಲ.

ಕೆಲವು ಸ್ಥಳದಲ್ಲಿ ಶಾಸ್ತ್ರವು ಭಕ್ತಿಯಿಂದಲೇ ಮೋಕ್ಷವೆಂದು ಹೇಳುತ್ತದೆ. ಇಲ್ಲಿ ಜ್ಞಾನದಿಂದಲೇ ಮೋಕ್ಷವೆಂದು ಹೇಳಿದರೆ ಪರಸ್ಪರ ವಿರೋಧ ಬಂತೆಂದು ತಿಳಿಯಬೇಡ. ಇಲ್ಲಿಯ ಜ್ಞಾನ ಶಬ್ದಕ್ಕೆ ಜ್ಞಾನಪೂರ್ವಕ ಪ್ರೇಮವೆಂದೇ ಅರ್ಥ. ಬರಿಯ ಜ್ಞಾನಮಾತ್ರದಿಂದ ಪರಮಾತ್ಮನು ಉದ್ಧಾರ ಮಾಡಲಾರನು. ದುರ್ಯೋ-ಧನಾದಿಗಳಿಗೆ ಶ್ರೀಕೃಷ್ಣನಾದ ನಾನು ಮಹಾಮಹಿಮೋಪೇತನೆಂದು ಗೊತ್ತಿತ್ತು. ಆದರೆ ಅವರಿಗೆ ನನ್ನಲ್ಲಿ ಪ್ರೇಮವಿರಲಿಲ್ಲ. ಆದುದರಿಂದ ಅವರ ಉದ್ಧಾರ ಆಗಲಿಲ್ಲ. ಆದ್ದರಿಂದ ಜ್ಞಾನಪೂರ್ವಕ ಪ್ರೇಮವೇ ಮೋಕ್ಷಸಾಧನವೆಂದು ನನ್ನ ಅಭಿಪ್ರಾಯ. ಜ್ಞಾನಪೂರ್ವಕ ಪ್ರೇಮವೆಂದರೂ ಭಕ್ತಿಯೆಂದರೂ ಒಂದೇ. ಆದುದರಿಂದ ಪರಸ್ಪರ ವಿರೋಧವಿಲ್ಲ.

ಕೆಲವರು ಭಗವದ್ದ್ವೇಷದಿಂದಲೂ ಮೋಕ್ಷವಾಗುತ್ತದೆಂದು ಹೇಳುತ್ತಾರೆ. ಕೆಲವರು ಕರ್ಮದಿಂದಲೇ ಮೋಕ್ಷವೆಂದು ಹೇಳುತ್ತಾರೆ. ಅದು ಯಾವುದೂ ಸರಿಯಲ್ಲ. ಜ್ಞಾನಪೂರ್ವಕ ಪ್ರೇಮ ಒಂದೇ ಮುಕ್ತಿಗೆ ದಾರಿಯಾಗಿದೆ.

ಇಂತಹ ಜ್ಞಾನಕ್ಕೆ ಸಮಾನವಾದ ಪವಿತ್ರ ವಸ್ತು ಜಗತ್ತಿನಲ್ಲಿಯೇ ಇಲ್ಲ. ಗಂಗಾದಿ ತೀರ್ಥಗಳು ಪವಿತ್ರ ವಸ್ತುಗಳೆಂದು ಶಾಸ್ತ್ರದಲ್ಲಿ ಹೇಳಿದೆ. ಆದರೆ ಹಿಂದಿನ ಪಾಪಗಳನ್ನು ಅದು ಪರಿಹಾರ ಮಾಡಬಹುದು. ತೀರ್ಥಸ್ನಾನದ ನಂತರದಲ್ಲಿ ಮಾಡಿದ ಪಾಪವನ್ನು ಅದು ಪರಿಹಾರ ಮಾಡಲಾರದು. ತೀರ್ಥಸ್ನಾನಕ್ಕಿಂತ ಮೊದಲೂ ಸಹ ಸಮಸ್ತ ಪಾಪಗಳು ಪರಿಹಾರ ಆಗಲಾರವು. ಕೆಲವು ಪಾಪಗಳು ಪರಿಹಾರ ಆಗಬಹುದು. ಜ್ಞಾನದಿಂದ ಹಾಗಲ್ಲ. ಅಪ್ರಾರಬ್ಧ ಪಾಪಗಳೆಲ್ಲವೂ ಪರಿಹಾರವಾಗುವವು. ಜ್ಞಾನ ಬಂದ ಮೇಲೆ ಮಾಡಿದ ಪಾಪವೂ ಅವನಿಗೆ ಲೇಪವಾಗುವುದಿಲ್ಲ. ಪ್ರಾರಬ್ಧಕರ್ಮವೆಂಬ ಪಾಪ ಮಾತ್ರ ಉಳಿಯುವುದು. ಅದನ್ನು ಪರಮಾತ್ಮನು ಉಳಿಸಲು ಕಾರಣವೆಂದರೆ ಪ್ರಾರಬ್ಧ ಕರ್ಮದಿಂದ ಜ್ಞಾನೋತ್ತರ ಕೆಲವು ಜನ್ಮಗಳನ್ನು ಹೊಂದಿ, ಅದರಿಂದ ವಿಶೇಷ ಭಗವತ್ಸೇವೆಯನ್ನು ಮಾಡಿ ಪರಮಾತ್ಮನ ವಿಶೇಷವಾದ ಅನುಗ್ರಹ ಹೊಂದಬೇಕಾಗಿದೆ. ಆದ್ದರಿಂದ ಬೆಂಕಿಯು ಅನಂತ ಕಟ್ಟಿಗೆಗಳನ್ನು ಸುಡುವಂತೆ, ಅಪ್ರಾರಬ್ಧ ಅನಂತ ಪಾಪಗಳನ್ನು ಜ್ಞಾನವೆಂಬ ಅಗ್ನಿಯಿಂದ ಪರಮಾತ್ಮನು ಸುಟ್ಟುಬಿಡುತ್ತಾನೆ.

ಇಂತಹ ಜ್ಞಾನವನ್ನು ಒಂದು ಜನ್ಮದಲ್ಲಿ ಹೊಂದಲು ಮಾತ್ರ ಸಾಧ್ಯವಿಲ್ಲ. ಬಹು ಜನ್ಮದಲ್ಲಿ ಪ್ರಯತ್ನ ಮಾಡಿ ಏಷ್ಟೋ ಕಾಲದ ಮೇಲೆ ಇಂತಹ ಜ್ಞಾನವನ್ನು ಹೊಂದಬಹುದು. ಅಜ್ಞಾನಿಯು, ಶ್ರದ್ಧೆಯಿಲ್ಲದವನು, ಸಂಶಯ ಮಾಡತಕ್ಕವನು ನರಕಾದ್ಯನರ್ಥವನ್ನು ಅನುಭವಿಸುತ್ತಾನೆ.

ಅಜ್ಞಾನಿ ಎಂದರೆ ಉಪದೇಶ ಮಾಡತಕ್ಕ ಗುರುಗಳಿದ್ದರೂ, ಉಪದೇಶ ತೆಗೆದುಕೊಳ್ಳುವುದಕ್ಕೆ ಸೌಕರ್ಯವಿದ್ದರೂ, ಉಪ-ದೇಶದಿಂದ ಜ್ಞಾನವನ್ನು ಹೊಂದದಿದ್ದವನು ಎಂದು ಅರ್ಥ. ೧೪ ವರುಷ ವಯಸ್ಸಾಗುವ ತನಕ ಅವನು ಅಜ್ಞಾನಿಯಾಗಿದ್ದರೂ ಹೆಚ್ಚು ಕರ್ಮದ ಫಲವು ಅವನಿಗೆ ಇರಲಾರದು. ಅದರ ಮೇಲೆ ಬುದ್ಧಿಶಕ್ತಿಯೂ, ದೇಹಶಕ್ತಿಯೂ ಮೊದಲಾದ ಅನುಕೂಲತೆಗಳು

ಇರುತ್ತವೆ. ಇಷ್ಟಿದ್ದರೂ ಅವನು ಅಜ್ಞಾನಿಯಾಗಿ ಪಾಪಕರ್ಮವನ್ನೇ ಮಾಡುತ್ತಿದ್ದರೆ ಅವನು ಅನರ್ಥಭಾಗಿಯಾಗುತ್ತಾನೆ. ಸಂಶಯಪಡತಕ್ಕವನೆಂದರೆ ಗುರುಮುಖೇನ ಶಾಸ್ತ್ರಾಧ್ಯಯನ ಮಾಡಿದರೂ ಬ್ರಹ್ಮ ಮೀಮಾಂಸಾ ಶಾಸ್ತ್ರಾಧ್ಯಯನ ಮಾಡಿ ತತ್ತ್ವವಿಚಾರ ಮಾಡಿದರೂ ತತ್ತ್ವ ವಿಷಯದಲ್ಲಿ ಸಂಶಯ ಮಾಡುವುದೇ ಅವನ ಸ್ವಭಾವವಾಗಿದ್ದರೆ ಅವನು ನರಕಕ್ಕೆ ಹೋಗುತ್ತಾನೆಂದು ಅಭಿಪ್ರಾಯವು.

ತತ್ತ್ವ ವಿಚಾರಕ್ಕೆ ಕಾರಣವಾದ ತತ್ತ್ವ ಸಂಶಯವು ದುಷ್ಟವಲ್ಲ. ಅಂತಹ ಸಂಶಯವಿಲ್ಲದೇ ಹೋದರೇ ತತ್ತ್ವವಿಚಾರದಲ್ಲಿ ಪ್ರವೃತ್ತಿಯೇ ಮಾಡಲಾಗದು. ವಿಚಾರ ಮಾಡದೇ ಇದ್ದರೆ ದೃಢವಾದ ನಿಶ್ಚಯವು ಬರಲಾರದು. ಆದುದರಿಂದ ಅಂತಹ ತತ್ತ್ವಸಂಶಯವು ಬಾಧಕವಲ್ಲ.

ಅಜ್ಞಾನಿಗಳು ಪಾಪಕರ್ಮ ಮಾಡಿದ್ದಕ್ಕೆ ಹೆಚ್ಚು ಪಾಪ. ಏಕೆಂದರೆ ಅವನು ಜ್ಞಾನ ಸಂಪಾದನೆ ಮಾಡದ್ದೊಂದು ತಪ್ಪು. ಪಾಪ ಮಾಡಿದ್ದು ಮತ್ತೊಂದು ತಪ್ಪು. ಈ ಎರಡು ಕಾರಣದಿಂದ ಅವನಿಗೆ ಪಾಪವು ಹೆಚ್ಚಿಗೆ ಸಂಭವಿಸುವುದು. ಅಜ್ಞಾನಿ-ಯಾದವನು ಕೆಟ್ಟ ಕೆಲಸ ಮಾಡಿದರೆ ಅವನಿಗೆ ಪಾಪವಿಲ್ಲವೆಂದು ಕೆಲವರು ಹೇಳುತ್ತಾರೆ. ಅದು ಯುಕ್ತವಲ್ಲ. ಈ ವಿಷಯದಲ್ಲಿ ಒಂದು ದೃಷ್ಟಾಂತವನ್ನು ತಿಳಿಯಬೇಕು. ಒಬ್ಬ ಹಳ್ಳಿಯ ಮನುಷ್ಯನು ಪಟ್ಟಣಕ್ಕೆ ಬಂದು ಪಟ್ಟಣದ ಅರಮನೆಯ ಎದುರು ಭಾಗದ ರಸ್ತೆಯಲ್ಲಿ ಮಲಮೂತ್ರಾದಿಗಳನ್ನು ಮಾಡುವಾಗ ಪೋಲಿಸನು ಬಂದು ಅವನನ್ನು ಬೆದರಿಸುತ್ತಾನೆ. ಆವಾಗ ಹಳ್ಳಿಯ ಮನುಷ್ಯನು 'ನನಗೆ ಇಲ್ಲಿ ಮಲಮೂತ್ರಾದಿಗಳನ್ನು ಮಾಡಬಾರದೆಂದು ಗೊತ್ತಿಲ್ಲ' ಎಂದು ಹೇಳುತ್ತಾನೆ. 'ಆ ರೀತಿ ಇಲ್ಲಿ ಬರೆದಿರುವುದು ಉಂಟಷ್ಟೇ?' ಎಂದು ಪೋಲೀಸನು ಕೇಳುತ್ತಾನೆ. 'ಅದು ನನಗೆ ಓದಲಿಕ್ಕೆ ಬರುವುದಿಲ್ಲ; ಅಕ್ಷರಾಭ್ಯಾಸ ಮಾಡಿಲ್ಲ' ಎಂದು ಹಳ್ಳಿಯ ಮನುಷ್ಯನು ಹೇಳುತ್ತಾನೆ. ಆವಾಗ ನ್ಯಾಯಾಧೀಶರು ಇದನ್ನು ವಿಚಾರ ಮಾಡಿ ಹಳ್ಳಿಯ ಮನುಷ್ಯನದು ಎರಡು ತಪ್ಪಿವೆ ಎಂದು ನಿರ್ಣಯ ಮಾಡುತ್ತಾರೆ. ಒಂದು ಅಕ್ಷರಾಭ್ಯಾಸ ಮಾಡದೇ ಇದ್ದದ್ದು. ಇನ್ನೊಂದು ಇಂತಹ ಸ್ಥಳದಲ್ಲಿ ಮಲಮೂತ್ರಾದಿ ವಿಸರ್ಜನೆ ಮಾಡಿದ್ದು. ಈ ಎರಡು ತಪ್ಪಿಗೆ ಸರಿಯಾದ ಶಿಕ್ಷೆ ಕೊಡಬೇಕೆಂದು ನಿರ್ಣಯಿಸುತ್ತಾರೆ. ಅದೇ ರೀತಿ ಪ್ರಕೃತದಲ್ಲಿ ಶಾಸ್ತ್ರಾಭ್ಯಾಸ

ಮಾಡಲಾರದ್ದು ಒಂದು ತಪ್ಪು. ನಿಷಿದ್ಧ ಕರ್ಮ ಮಾಡಿದ್ದು ಮತ್ತೊಂದು ತಪ್ಪು. ಈ ರೀತಿ ಅಧಿಕ ಪಾಪವುಳ್ಳವನೇ ಆಗುತ್ತಾನೆ ಅಜ್ಞಾನಿ. ಆದುದರಿಂದ ಅಜ್ಞಾನಿಗೆ ಪಾಪವಿಲ್ಲವೆಂಬ ಮಾತು ಅಜ್ಞಾನಿಗಳ ಮಾತು.

ಅಜ್ಞಾನಿ, ಅಶ್ರದ್ಧಾಳು, ಸಂಶಯಾತ್ಮ ಇವರುಗಳಿಗೆ ಈ ಲೋಕದ ಸುಖವೇ ಇಲ್ಲ. ಪರಲೋಕದ ಸುಖವು ಎಷ್ಟು ಮಾತ್ರಕ್ಕೂ ಇಲ್ಲ. ಆದುದರಿಂದ ಈ ಸಂಶಯವನ್ನು ಜ್ಞಾನವೆಂಬ ಖಡ್ಗದಿಂದ ನಾಶಮಾಡಿ ಕರ್ಮಯೋಗವನ್ನು ಅನುಷ್ಠಾನ ಮಾಡು. ಪರಮಾತ್ಮನಲ್ಲಿ ಮನಸ್ಸಿಟ್ಟು, ಕರ್ಮ ಮಾಡಿ, ಆ ಕರ್ಮವನ್ನು ದೇವರಲ್ಲಿ ಸಮ-ರ್ಪಿಸಿ ಜ್ಞಾನದಿಂದ ಸಂಶಯವನ್ನು ಪರಿಹರಿಸಿ ಪರಮಾತ್ಮನ ಭಕ್ತನಾಗಿರುವವನನ್ನೇ ಕರ್ಮಗಳು ಬಂಧಿಸುವುದಿಲ್ಲ. ಆದುದರಿಂದ ಈ ತರಹದ ಕರ್ಮವನ್ನು ಮಾಡು ಎಂದು ಶ್ರೀಕೃಷ್ಣನು ಉಪದೇಶ ಮಾಡುವಲ್ಲಿ ಚತುರ್ಥಾಧ್ಯಾಯವು ಮುಗಿಯಿತು. (ಹನ್ನೆರಡನೆಯ ದಿನದ ಉಪನ್ಯಾಸವು ಮುಗಿಯಿತು)

***

## ಐದನೆಯ ಅಧ್ಯಾಯ

ಅರ್ಜುನನು ಶ್ರೀಕೃಷ್ಣನನ್ನು ಪ್ರಶ್ನೆ ಮಾಡುತ್ತಾನೆ: "ಎಲೋ ಶ್ರೀಕೃಷ್ಣನೇ! ನೀನು ಉಪದೇಶ ಮಾಡುತ್ತಿರುವಾಗ **"ಯೋಗಸನ್ನ್ಯಸ್ತಕರ್ಮಾಣಮ್"** ಎಂದು ಸನ್ನ್ಯಾಸವನ್ನು ಹೇಳಿದ್ದಿ. **"ಯೋಗಮಾತಿಷ್ಠ"** ಎಂದು ಕರ್ಮಮಾರ್ಗವನ್ನು ಹೇಳುತ್ತಿ. ಕರ್ಮಮಾರ್ಗವು ಗೃಹಸ್ಥಾಶ್ರಮಿಗಳದು. ಆ ಸನ್ಯಾಸಾಶ್ರಮವೂ ಈ ಗೃಹಸ್ಥಾಶ್ರಮವೂ ಒಬ್ಬರಿಗೆ ಏಕಕಾಲದಲ್ಲಿ ಕೂಡುವುದಿಲ್ಲ. ಆದುದರಿಂದ ಒಂದು ಸನ್ನ್ಯಸಾಶ್ರಮವನ್ನೋ ಅಥವಾ ಗೃಹಸ್ಥಾಶ್ರಮವನ್ನೋ ಅನುಸರಿಸಬೇಕಾಗುತ್ತದೆ. ಇದರಲ್ಲಿ ಯಾವುದು ಶ್ರೇಷ್ಠವೋ ಅದನ್ನು ಅನುಸರಿಸುವುದು ಒಳ್ಳೆಯದು. ಕರ್ಮಮಾರ್ಗ ಮತ್ತು ಸನ್ನ್ಯಸಾಶ್ರಮಗಳಲ್ಲಿ ಯಾವುದು ಶ್ರೇಷ್ಠ ನನಗೆ ಹೇಳು."

ಶ್ರೀಕೃಷ್ಣನು ಉಪದೇಶಿಸುತ್ತಾನೆ: "ಅರ್ಜುನ! ನಾನು ಹೇಳಿದ ಸನ್ನ್ಯಸಾಶ್ರಮವು ಯತ್ಯಾಶ್ರಮವಲ್ಲ. ಕಾಮಕ್ರೋಧವರ್ಜನವೇ ಸನ್ನ್ಯಸವೆಂದು ನಾನು ಹಿಂದೆ ಹೇಳಿದ್ದು. ಈ ತರಹದ ಸನ್ನ್ಯಸವು ಕರ್ಮಯೋಗಿಗಳಾದ ಗೃಹಸ್ಥಾಶ್ರಮಿಗಳಿಗೂ ಕೂಡುತ್ತದೆ. ಇವುಗಳಲ್ಲಿ ಯಾವುದು ಶ್ರೇಷ್ಠವೆಂದು ಕೇಳುವ ಪ್ರಸಕ್ತಿಯೇ ಇಲ್ಲ.

'ಒಬ್ಬನಿಗೆ ಸನ್ನ್ಯಸವನ್ನೂ ಕರ್ಮಯೋಗವನ್ನೂ ಏಕಕಾಲದಲ್ಲಿ ಅನುಷ್ಠಾನ ಮಾಡಲಿಕ್ಕೆ ಸಾಧ್ಯವಿಲ್ಲದೇ ಹೋದರೆ ಅದರಲ್ಲಿ ಶ್ರೇಷ್ಠವಾದದ್ದು ಯಾವುದು? ಯಾವುದನ್ನು ಅನುಸರಿಸಬೇಕು?' ಎಂಬ ಪ್ರಶ್ನೆಗೆ ಅವಕಾಶವಿದೆ. ಪ್ರಕೃತದಲ್ಲಿ ಕರ್ಮಯೋಗ ಮತ್ತು ಕಾಮಕ್ರೋಧಾದಿವರ್ಜನವೆಂಬ ಸನ್ನ್ಯಸ ಈ ಎರಡನ್ನೂ ಒಟ್ಟಿಗೆ ಒಬ್ಬನು ಮಾಡಿದರೇನೇ ಮೋಕ್ಷಲಾಭವಾಗುವುದು. ರೋಗ ಪರಿಹಾರ ಆಗಬೇಕಾದರೆ ಔಷಧ ಸೇವನೆ ಮತ್ತು ಅಪಥ್ಯ ವರ್ಜನೆ ಎರಡೂ ಸೇರಿ ಕಾರಣವಾಗಿವೆ. ಇದರೊಳಗೆ ಒಂದನ್ನು ಬಿಟ್ಟು ಕೇವಲ ಮತ್ತೊಂದರಿಂದಲೇ ಪ್ರಯೋಜನವಾಗಲಾರದು. ಆದುದರಿಂದ ನೀನು ಎರಡನ್ನೂ ಅನುಷ್ಠಾನ ಮಾಡು.

'ಒಬ್ಬನು ಕಾಮಕ್ರೋಧವನ್ನು ಪರಿತ್ಯಾಗ ಮಾಡಿದ. ಕರ್ಮಾನುಷ್ಠಾನವನ್ನು ಮಾಡಲೇ ಇಲ್ಲ. ಮತ್ತೊಬ್ಬನು ಕರ್ಮಾನುಷ್ಠಾನ ಮಾಡಿದ. ಕಾಮಕ್ರೋಧಗಳನ್ನು ಬಿಡಲಿಲ್ಲ. ಇವರ ಪೈಕಿ ಯಾರು ಶ್ರೇಷ್ಠರು?' ಎಂದು ವಸ್ತುಸ್ಥಿತಿಯನ್ನು ಪ್ರಶ್ನಿಸಿದರೆ, ಕರ್ಮಾನುಷ್ಠಾನ ಮಾಡಿದವನು ಶ್ರೇಷ್ಠನೆಂದು ತಿಳಿಯಬೇಕು.

ಯಾವಾತನು ಕಾಮಕ್ರೋಧವನ್ನು ಪರಿತ್ಯಾಗ ಮಾಡುತ್ತಾನೋ, ಅವನು ನಿತ್ಯಸನ್ನ್ಯಾಸಿ. (ಎಂದರೆ ಯತ್ಯಾಶ್ರಮಿ ಎಂದು ಪ್ರಕೃತದಲ್ಲಿ ಅಭಿಪ್ರೇತವಲ್ಲ.)

ಅರ್ಜುನನು ಪ್ರಶ್ನೆ ಮಾಡುತ್ತಾನೆ: "ಕರ್ಮಯೋಗಿಗಳಾದ ಗೃಹಸ್ಥಾಶ್ರಮಿಗಳಿಗೆ ಜ್ಞಾನಾಧಿಕಾರವಿಲ್ಲ. ಜ್ಞಾನಾಧಿಕಾರ ಕೇವಲ ಯತ್ಯಾಶ್ರಮಿಗಳಿಗೆ ಮಾತ್ರ. ಕರ್ಮಯೋಗವನ್ನು ಶಾಸ್ತ್ರದಲ್ಲಿ **"ಅಗ್ನಿಮುಗ್ಧಾ ಧೂಮಕಾಂತಾಃ** = ಅಗ್ನಿಯನ್ನು ಹಾಕಿ ಅದರಿಂದ ಬರತಕ್ಕ ಹೊಗೆಯಿಂದ ಶ್ರಮವನ್ನು ಹೊಂದತಕ್ಕವನು ಕರ್ಮಠನು" ಎಂಬುದಾಗಿ ನಿಂದೆ ಮಾಡಿದ್ದಾರೆ. ನೀನು ಕರ್ಮಯೋಗವು ಶ್ರೇಷ್ಠವೆಂದು ಹೇಳುತ್ತಿ. ಇದು ಹೇಗೆ?" ಎಂದು ಕೇಳಿದನು.

ಶ್ರೀಕೃಷ್ಣ ಪರಮಾತ್ಮನು ಉತ್ತರವನ್ನು ಹೇಳುತ್ತಾನೆ: "ಕರ್ಮಯೋಗಿಗಳಾದ ಗೃಹಸ್ಥಾಶ್ರಮಿಗಳು ಜ್ಞಾನಾಧಿಕಾರಿಗಳಲ್ಲವೆಂಬುದು ಸರಿಯಲ್ಲ. ಕರ್ಮಯೋಗವು ಉತ್ಕೃಷ್ಟ ರೀತಿಯಲ್ಲಿ ಆಗಬೇಕಾದರೆ ಅದು ಜ್ಞಾನದಿಂದ ಕೂಡಿರಬೇಕು. ಹಾಗೇ ಜ್ಞಾನಯೋಗವು ಉತ್ಕೃಷ್ಟವಾಗಬೇಕಾದರೆ ಕರ್ಮದಿಂದ ಕೂಡಿರಬೇಕು. ಶ್ರೇಷ್ಠವಾದ ಜ್ಞಾನಯೋಗವನ್ನಾಗಲೀ ಶ್ರೇಷ್ಠವಾದ ಕರ್ಮಯೋಗವನ್ನಾಗಲೀ ಅನುಸರಿಸತಕ್ಕವನು ಮೋಕ್ಷವೆಂಬ ಒಂದೇ ಪುರುಷಾರ್ಥವನ್ನು ಹೊಂದುವನು. ಆದುದರಿಂದ ಕರ್ಮಯೋಗವು ಶ್ರೇಷ್ಠವಾದದ್ದಾಗಿದೆ.

ವೇದದಲ್ಲಿ ನಿಷೇಧ ಮಾಡಿದ ಕರ್ಮವನ್ನು ಕಾಮ್ಯ ಕರ್ಮವೆಂದು ತಿಳಿಯಬೇಕು. ಒಬ್ಬನು ಕಾಮಕ್ರೋಧಾದಿಗಳನ್ನು ಮಾತ್ರ ಪರಿತ್ಯಾಗ ಮಾಡಿ, ಭಗವದರ್ಪಣ ಬುದ್ಧಿಯಿಂದ ಕರ್ಮವನ್ನು ಮಾಡದಿದ್ದರೆ ಅಂತಹವನು

ದುಃಖವನ್ನೇ ಅನುಭವಿಸಬೇಕಾಗುತ್ತದೆ. ಅವನು ಕರ್ಮಯೋಗವನ್ನು ಮಾಡದಿದ್ದುದರಿಂದ ಪಾರತ್ರಿಕ ಸುಖವು ಅವನಿಗೆ ಸಿಗಲಾರದು. ಐಹಿಕ ಸುಖದ ಕಾಮವನ್ನೇ ಬಿಟ್ಟಿದ್ದರಿಂದ ಐಹಿಕ ಸುಖವು ಇರುವುದಿಲ್ಲ. ಇನ್ನೊಬ್ಬರು ಅವಮಾನ ಮಾಡಿದಾಗ ಅವನಿಗೆ ದುಃಖವಾಗುವುದಿಲ್ಲವೆಂಬಷ್ಟು ಫಲವಿದೆ. ಅದು ಸಣ್ಣ ಫಲವಾದ್ದರಿಂದ ಅದು ಫಲವೆಂದೇ ಹೇಳಿಸಿಕೊಳ್ಳಲ್ಪಡುವುದಿಲ್ಲ. ವಿಹಿತ ಕರ್ಮವನ್ನು ಬಿಟ್ಟಿದ್ದರಿಂದ ನರಕವನ್ನು ಅನುಭವಿಸಬೇಕಾಗುತ್ತದೆ. ಆದುದರಿಂದ ಕೇವಲ ಕಾಮಕ್ರೋಧವರ್ಜನ ಎಂಬ ಸನ್ನ್ಯಾಸವು ದುಃಖಕ್ಕೆ ಸಾಧನ. ಆದುದರಿಂದ ಕರ್ಮಯೋಗವು ಬೇಕು.

ಕಾಮಕ್ರೋಧವನ್ನು ಬಿಡದೇ ಕರ್ಮಯೋಗವನ್ನು ಅನುಷ್ಠಾನ ಮಾಡುವವನು ಕ್ರಮದಿಂದ ಬಹು ವಿಲಂಬದಿಂದ ಮೋಕ್ಷವನ್ನು ಸಾಧಿಸಬಹುದು. ಅಂದರೆ ಕಾಲಕ್ರಮೇಣ ಈ ಕರ್ಮಯೋಗ ಬಲದಿಂದ ಕಾಮಕ್ರೋಧಗಳನ್ನು ಬಿಡತಕ್ಕವನಾಗಿ ಮೋಕ್ಷವನ್ನು ಸಾಧಿಸಬಹುದು. ಅಂತೂ ಸ್ವಲ್ಪ ವಿಲಂಬವಾಗಬಹುದು. ಅಪಥ್ಯವನ್ನು ಮಾಡಿಕೊಂಡು ಔಷಧವನ್ನು ಸೇವನೆ ಮಾಡತಕ್ಕವನಿಗೆ ರೋಗ ಪರಿಹಾರವು ವಿಲಂಬವಾಗುವಂತೆ ಇವನಿಗೆ ಮೋಕ್ಷವು ವಿಲಂಬವಾಗುವುದು. ಕರ್ಮಾನುಷ್ಠಾನ ಮಾಡತಕ್ಕವನು ಮನಶ್ಶುದ್ಧಿಯನ್ನು ಹೊಂದುತ್ತಾನೆ. ಆ ಮನಶ್ಶುದ್ಧಿಯಾದ ಮೇಲೆ ಸಮಸ್ತ ಜೀವರಾಶಿಗಳಿಗೆ ಸ್ವಾಮಿಯಾದ ಪರಮಾತ್ಮ-ನನ್ನು ಸ್ವಾಮಿಯೆಂದು ತಿಳಿಯುತ್ತಾನೆ. ಆ ಜ್ಞಾನದ ಪ್ರಭಾವದಿಂದ ಅವಶ್ಯಕ ಕರ್ಮಾನುಷ್ಠಾನ ಮಾಡುವಾಗ ಬರತಕ್ಕ ದೋಷಗಳ ಲೇಪವು ಇಲ್ಲದಂತಾಗುತ್ತದೆ.

ಆ ಕರ್ಮಯೋಗ ಮಾಡತಕ್ಕವನು ತಾನು ಸ್ವತಂತ್ರ ಕರ್ತನೆಂದು ತಿಳಿಯಬಾರದು. ಹಾಗೇ ಕಾರಯಿತೃ ಅಂದರೆ ಇನ್ನೊಬ್ಬರಿಂದ ಮಾಡಿಸತಕ್ಕವನು ಎಂದೂ ತಿಳಿಯ-ಬಾರದು. ಪರಮಾತ್ಮನು ಕರ್ಮಾನುಷ್ಠಾನದ ವಿಷಯದಲ್ಲೂ ಕರ್ಮದ ಫಲ-ಪ್ರಾಪ್ತಿಯ ವಿಷಯದಲ್ಲೂ ತನ್ನ ಸ್ವಾತಂತ್ರ್ಯವನ್ನು ಇತರ ಯಾರಿಗೂ ಕೊಟ್ಟಿಲ್ಲ. ಪರಮಾತ್ಮನು ತಾನೇ ಸ್ವತಂತ್ರನಾಗಿ ಎಲ್ಲವನ್ನೂ ಮಾಡುತ್ತಾನೆ. ತಂದೆಯಾದವನು ತನ್ನ ಕೂಸಿನಿಂದ ತನ್ನ ಪಾದಕ್ಕೆ ಅಭಿವಂದನ

ಮಾಡಿಸಿ ಅನುಗ್ರಹ ಮಾಡುವಂತೆ ಪರಮಾತ್ಮನು ನಮ್ಮಿಂದ ಕರ್ಮ ಮಾಡಿಸಿ ನಮಗೆ ಅನುಗ್ರಹ ಮಾಡುತ್ತಾನೆ. ಆ ಪರಮಾತ್ಮನು ಸ್ವತಂತ್ರ ಕರ್ತನಾದರೂ ಯಾವ ಕರ್ಮದ ಲೇಪವೂ ಅವನಿಗಿಲ್ಲ. ಅಂತಹ ಸ್ವತಂತ್ರ ಕರ್ತನಾದ ಪರಮಾತ್ಮನನ್ನು ಜೀವರುಗಳು ಅಜ್ಞಾನಿಗಳಾದ ಪ್ರಯುಕ್ತ ತಿಳಿಯುವುದಿಲ್ಲ. ಶಾಸ್ತ್ರವನ್ನು ಅಧ್ಯಯನ ಮಾಡಿ ಜ್ಞಾನ ಸಂಪಾದಿಸಿದರೆ ಆ ಅಜ್ಞಾನವು ನಾಶವಾಗುತ್ತದೆ.

ಜ್ಞಾನವು ಎರಡು ಪ್ರಕಾರವುಳ್ಳದ್ದು. ಜೀವಸ್ವರೂಪದ ಜ್ಞಾನವೊಂದು. ಶಾಸ್ತ್ರಜನ್ಯವಾದ ಮನಃಪರಿಣಾಮರೂಪವಾದದ್ದು ಮತ್ತೊಂದು. ಆ ಮನಃ-ಪರಿಣಾಮರೂಪ ಜ್ಞಾನದಿಂದ ಅಜ್ಞಾನವು ನಾಶವಾಗುತ್ತಿರಲು ಜೀವ-ಸ್ವರೂಪಭೂತವಾದ ಜ್ಞಾನವು ಪರಬ್ರಹ್ಮನನ್ನು, ಆದಿತ್ಯೋದಯವಾದ ಮೇಲೆ ವಸ್ತುಗಳನ್ನು ವಿಷಯೀಕರಿಸುವಂತೆ, ಸ್ಪಷ್ಟವಾಗಿ ವಿಷಯೀಕರಿಸುತ್ತದೆ. ಅದೇ ಅಪರೋಕ್ಷ ಜ್ಞಾನವು.

ಆ ಅಪರೋಕ್ಷ ಜ್ಞಾನಕ್ಕೆ ಸಾಧನವಾದದ್ದು ಪರಮಾತ್ಮನ ಅಖಂಡವಾದ ಧ್ಯಾನವು. ಇದಲ್ಲದೇ ವಿದ್ಯಾವಿನಯಸಂಪನ್ನನಾದ ಬ್ರಾಹ್ಮಣನಲ್ಲಿಯೂ, ಗೋವು, ಆನೆ, ನಾಯಿ ಮತ್ತು ಚಂಡಾಲ - ಇವುಗಳಲ್ಲಿಯೂ ಪರಬ್ರಹ್ಮನು ಒಬ್ಬನೇ ಹಾಗೂ ನಿರ್ದುಷ್ಟನಾಗಿದ್ದಾನೆ. ಸ್ಥಾನಭೇದದಿಂದ ಆ ಪರಮಾತ್ಮನು ಬೇರೆ ಬೇರೆಯಾಗಿ ಇರುವುದಿಲ್ಲ. ಆವಾವ ಸ್ಥಾನದ ದೋಷದಿಂದ ಆತನು ದುಷ್ಟನಾಗುವುದಿಲ್ಲ ಎಂಬ ಸಮದರ್ಶಿತ್ವವು ಬ್ರಹ್ಮಾಪರೋಕ್ಷ ಜ್ಞಾನಕ್ಕೆ ಸಾಧನವಾಗಿದೆ. ಈ ಸಮದರ್ಶಿತ್ವವು ಯಾವ ಜನ್ಮದಲ್ಲಿ ಬಂತೋ ಅದೇ ಜನ್ಮದಲ್ಲಿ ಪ್ರಾರಬ್ಧ ಕರ್ಮ ಇಲ್ಲದವನಿಗೆ ಮುಕ್ತಿಯಾಗುವುದು." ಈ ರೀತಿ ಕೃಷ್ಣ ಉಪದೇಶ ಮಾಡಿದ.

ಸಮ ಎಂಬ ಶಬ್ದಕ್ಕೆ ಪರಬ್ರಹ್ಮನೆಂದು ಅರ್ಥ. ಸಮದರ್ಶಿ ಎಂದರೆ ಬ್ರಹ್ಮದರ್ಶಿ ಎಂದರ್ಥ. ಇಲ್ಲಿ ಕೆಲವರು ಸಮದರ್ಶಿ ಎಂಬ ಶಬ್ದಕ್ಕೆ ಬ್ರಾಹ್ಮಣಾದಿ ವರ್ಣಗಳಲ್ಲಿ ಉಚ್ಚ ನೀಚ ಭಾವವನ್ನು ತಿಳಿದುಕೊಳ್ಳಬಾರದು. ಪಂಡಿತರಾದವರು ಉಚ್ಚ ನೀಚ ಭಾವವನ್ನು ತಿಳಕೊಳ್ಳುವುದಿಲ್ಲ ಎಂದು ಗೀತಾವಾಕ್ಯಕ್ಕೆ ವಿಪರೀತ

ಅರ್ಥ ಮಾಡು–ತ್ತಾರೆ. ಈ ಅರ್ಥವು, 'ಸಮ'ಶಬ್ದಕ್ಕೆ ಬ್ರಹ್ಮನೆಂದು ಅರ್ಥ ಹೇಳುವ ಮುಂದಿನ ಶ್ಲೋಕಕ್ಕೆ ವಿರುದ್ಧವಾಗಿದೆ.

'ಸಮ'ಶಬ್ದಕ್ಕೆ ಬ್ರಹ್ಮನೆಂದು ಅರ್ಥ ಇಟ್ಟುಕೊಳ್ಳದಿದ್ದರೂ 'ಸಮದರ್ಶನ' ಎಂಬ ಶಬ್ದಕ್ಕೆ 'ಉಚ್ಚ–ನೀಚ ಭಾವವನ್ನು ತಿಳಿದುಕೊಳ್ಳುವುದಿಲ್ಲ' ಎಂಬ ಅರ್ಥವು ಯೋಗ್ಯವಲ್ಲ. ಅವರವರ ಯೋಗ್ಯತಾ ಪ್ರಕಾರ ಉಚ್ಚ ನೀಚ ಭಾವವನ್ನು ತಿಳಿದುಕೊಳ್ಳತಕ್ಕವನನ್ನೇ ಸಮದರ್ಶಿ ಎಂದು ಹೇಳುವುದು. ಅದು ಹೇಗೆಂದರೆ 'ಒಂದು ಕುಟುಂಬದ ಯಜಮಾನನು ತನ್ನ ಭಾರ್ಯಾ, ಪುತ್ರ, ಸೊಸೆ, ಭೃತ್ಯ ಮತ್ತು ದನಕರುಗಳು ಇವುಗಳಲ್ಲಿ ಸಮದೃಷ್ಟಿಯಿಂದ ಇರುತ್ತಾನೆ' ಎಂದು ಲೋಕದಲ್ಲಿ ವ್ಯವಹಾರವಿದೆ. ಇಲ್ಲಿ ಸಮದೃಷ್ಟಿ ಎಂದರೆ ದನಕರುಗಳಿಗೆ ಕೊಡತಕ್ಕ ಮೇವನ್ನೇ ತನ್ನ ಹೆಂಡತಿ ಮಕ್ಕಳಿಗೆ ಕೊಡುತ್ತಾನೆಯೇ? ಯಾರಿಗೂ ಏನೂ ವ್ಯತ್ಯಾಸ ಮಾಡುವುದಿಲ್ಲ ಎಂಬ ಅರ್ಥವಲ್ಲ. ಅವರವರ ಯೋಗ್ಯತಾನುಸಾರವಾಗಿ ಅವರ–ವರನ್ನು ನೋಡುತ್ತಾನೆ ಎಂಬುದೇ ಸಮದರ್ಶಿ ಎಂಬ ಶಬ್ದದ ಅರ್ಥವು. ಅದೇ ರೀತಿ ಪಂಡಿತರು ವಿದ್ಯಾವಿನಯಸಂಪನ್ನ ಬ್ರಾಹ್ಮಣ, ಚಂಡಾಲ ಮೊದಲಾದವರಲ್ಲಿ ಸಮದರ್ಶಿಗಳು ಎಂದರೆ ಅವರವರ ಯೋಗ್ಯತಾನುಸಾರಿಯಾದ ಉಚ್ಚ ನೀಚ ಭಾವವನ್ನು ತಿಳಿದು ಅದಕ್ಕೆ ಅನುಸಾರಿಯಾದ ಸತ್ಕಾರವನ್ನು ಮಾಡುತ್ತಾರೆ ಎಂದೇ ಅಭಿಪ್ರಾಯ.

ಇಲ್ಲಿ ಒಂದು ಪ್ರಶ್ನೆ ಬರಬಹುದು: 'ಒಬ್ಬನೇ ಪರಮಾತ್ಮನು ಬ್ರಾಹ್ಮಣನಲ್ಲಿಯೂ ಚಂಡಾಲನಲ್ಲಿಯೂ ಇರುತ್ತಾನೆ. ಬ್ರಾಹ್ಮಣನಿಗೆ ಸತ್ಕಾರ ಮಾಡುವುದಾದರೂ ಅವನ ಅಂತರ್ಯಾಮಿ ರೂಪ ಪರಮಾತ್ಮನ ದೃಷ್ಟಿಯಿಂದಲೇ ಅದೆ. ಪರಮಾತ್ಮನು ಚಂಡಾಲನಲ್ಲಿಯೂ ಇದ್ದ ಮೇಲೆ ಆ ಪರಮಾತ್ಮನ ದೃಷ್ಟಿಯಿಂದ ಬ್ರಾಹ್ಮಣನಿಗೆ ಸತ್ಕಾರ ಮಾಡುವಂತೆ ಚಂಡಾಲನಿಗೂ ಮಾಡಬೇಕಲ್ಲವೇ? ಪರಮಾತ್ಮನ ರೂಪದಲ್ಲಿ ವ್ಯತ್ಯಾಸವಿದೆಯೋ? ಸತ್ಕಾರ ಮಾಡುವುದು ಪರಮಾತ್ಮನ ದೃಷ್ಟಿಯಿಂದಲೋ, ಅಧಿಷ್ಠಾನ ದೃಷ್ಟಿಯಿಂದಲೋ? ಪರಮಾತ್ಮನ ದೃಷ್ಟಿಯಿಂದ ಮಾಡಬೇಕೆಂದು ಶಾಸ್ತ್ರ ಹೇಳುತ್ತದೆ. ಆ

ಪರಮಾತ್ಮನು ಏಕರೂಪನಾದ ಮೇಲೆ ಸತ್ಕಾರದಲ್ಲಿ ವ್ಯತ್ಯಾಸವೇಕೆ?' ಎಂದು ಕೇಳಬಹುದು.

ಆದರೆ ಪರಮಾತ್ಮನು ಒಬ್ಬನೇ ಆದರೂ ವಿದ್ಯಾವಿನಯುಸಂಪನ್ನನಲ್ಲಿ ಪರಮಾತ್ಮನ ಸನ್ನಿಧಾನ ಹೆಚ್ಚು ಇರುತ್ತದೆ. ಅಷ್ಟು ಪರಮಾತ್ಮನ ಸನ್ನಿಧಾನ ಚಂಡಾಲನಲ್ಲಿ ಇರುವುದಿಲ್ಲ. ಒಂದು ಕಡೆ ಸನ್ನಿಧಾನ ಹೆಚ್ಚು ಇನ್ನೊಂದು ಕಡೆ ಕಡಿಮೆ ಎಂಬುದು ಪರಮಾತ್ಮನ ಅಚಿಂತ್ಯ ಶಕ್ತಿ. ಬ್ರಾಹ್ಮಣನಲ್ಲಿ ಹೆಚ್ಚಿನ ತಪಸ್ಸು ಇರುವುದರಿಂದ ಪರಮಾತ್ಮನ ಹೆಚ್ಚಿನ ಸಾನ್ನಿಧ್ಯವು ಅವನಲ್ಲಿರುತ್ತದೆ. ಅವನಲ್ಲಿ ತಪಸ್ಸೇ ಇರದೇ ಹೋದರೆ ಚಂಡಾಲನಲ್ಲಿ ಬ್ರಾಹ್ಮಣನಿಗಿಂತಲೂ ಹೆಚ್ಚು ಭಕ್ತ್ಯಾದಿಗುಣಗಳಿದ್ದರೆ ಚಂಡಾಲನಲ್ಲಿ ಪರಮಾತ್ಮನ ಸನ್ನಿಧಾನ ಹೆಚ್ಚಿದೆಯೆಂದು ತಿಳಿಯಬೇಕು.

ಸ್ವಯಂವ್ಯಕ್ತ ಪ್ರತಿಮೆಗಳಲ್ಲಿ ಪರಮಾತ್ಮನ ಸಾನ್ನಿಧ್ಯವು ಹೆಚ್ಚು ಇರುವಷ್ಟು ಇತರ ಸಾಮಾನ್ಯ ಪ್ರತಿಮೆಗಳಲ್ಲಿ ಇರುವುದಿಲ್ಲ. ಆದ್ದರಿಂದ ಸ್ವಯಂವ್ಯಕ್ತ ಪ್ರತಿಮೆಗಳಲ್ಲಿ ಎಷ್ಟು ಪೂಜಾದಿಗಳನ್ನು ನಾವು ಮಾಡುತ್ತೇವೋ ಅಷ್ಟು ಇತರ ಪ್ರತಿಮೆಗಳಲ್ಲಿ ಮಾಡುವುದಿಲ್ಲ. ಇದಕ್ಕೆ ಕಾರಣ ಸಾನ್ನಿಧ್ಯ ವಿಶೇಷವೇ ಆಗಿರುತ್ತದೆ. ಆ ಸಾನ್ನಿಧ್ಯ ವಿಶೇಷಕ್ಕೆ ಕಾರಣ ಅಧಿಷ್ಠಾನದ ಶಕ್ತಿ. ಇದಕ್ಕೆ ದೃಷ್ಟಾಂತವನ್ನು ಕೊಡುವುದಾದರೆ ಎಲ್ಲ ವಿದ್ಯುತ್ ತಂತಿಗಳಲ್ಲಿ ವಿದ್ಯುತ್ ಒಂದೇ ತರಹವಾಗಿ ಹೋಗುತ್ತಿದ್ದರೂ ವಿಶೇಷವಾದ ಬಲ್ಬಿನಲ್ಲಿ ಹೆಚ್ಚು ಪ್ರಕಾಶವನ್ನು ಕೊಡುತ್ತದೆ. ಇತರ ಬಲ್ಬುಗಳಲ್ಲಿ ಅದರ ಪ್ರಕಾಶವು ತೋರುವುದಿಲ್ಲ. ಅಲ್ಲಿ ಹೇಗೆ ಬಲ್ಬಿನ ಗುಣದಿಂದ ತೇಜಸ್ಸಿನ ಪ್ರಕಾಶಗಳ ವ್ಯತ್ಯಾಸವು ಕಾಣುತ್ತದೋ ಹಾಗೆ ಬ್ರಾಹ್ಮಣಾದಿ ವರ್ಣಗಳಲ್ಲಿ ಸ್ವಾಭಾವಿಕವಾಗಿರುವ ಶಮದಮಾದಿಗುಣಗಳ ವ್ಯತ್ಯಾಸದಿಂದಲೇ ಪರಮಾತ್ಮನ ಸನ್ನಿಧಾನವು ಹೆಚ್ಚು ಕಡಿಮೆ ಆಗುತ್ತದೆ. ಆದುದರಿಂದ ಅವರವರ ಯೋಗ್ಯತಾನುಸಾರವಾಗಿ ಸತ್ಕಾರವನ್ನು ಮಾಡಬೇಕು. ಇದೇ ಸಮದೃಷ್ಟಿ ಶಬ್ದದ ಅರ್ಥವು.

“ಸನ್ನ್ಯಾಸಿಯು ಪ್ರಿಯಾಪ್ರಿಯ ಯೋಗವಿಯೋಗಗಳಲ್ಲಿ ವಿಕಾರವನ್ನು ಹೊಂದದೆ ಪರಮಾತ್ಮನಲ್ಲಿ ಸ್ಥಿರಬುದ್ಧಿವುಳ್ಳವನಾಗಿ ಅಸಮ್ಮೂಢನಾಗಿರಬೇಕು.

ಅಂದರೆ ತನಗೆ ಯಾರಾದರೂ ಅಪ್ರಿಯುವನ್ನು ಮಾಡಿದರೆ ಇವನೇ ನನಗೆ ಅಪ್ರಿಯುವನ್ನು ಮಾಡಿದನೆಂದು ತಿಳಿದುಕೊಳ್ಳುವುದು ಮಿಥ್ಯಾಜ್ಞಾನವು. ವಾಸ್ತವಿಕವಾಗಿ ನಮಗೆ ಅಪಕಾರ ಮಾಡಲು ಸ್ವತಂತ್ರವಾಗಿ ಯಾರೂ ಸಮರ್ಥರಲ್ಲ. ನಮ್ಮ ಪಾಪಕರ್ಮಕ್ಕೆ ಅನುಸಾರವಾಗಿ ಅವನ ಅಂತ-ರ್ಯಾಮಿಯಾದ ಪರಮಾತ್ಮನು ಅವರ ಮೂಲಕ ನನಗೆ ಅಪ್ರಿಯುವನ್ನು ಮಾಡಿಸಿದನು ಎಂಬ ಜ್ಞಾನವು ಯಥಾರ್ಥ ಜ್ಞಾನವು. ಈ ರೀತಿ ತಿಳಿದವನು ಅಪಕಾರ ಮಾಡಿದವನ ಮೇಲೆ ಸಿಟ್ಟಾಗುವುದಿಲ್ಲ.

ವಿಷಯಾಸಕ್ತಿ ಬಿಟ್ಟ ಮನುಷ್ಯನಿಗೆ ಒಂದು ಸುಖವಿದೆ. ಆ ಸುಖಕ್ಕಿಂತಲೂ ಬ್ರಹ್ಮಧ್ಯಾನ ಮಾಡತಕ್ಕವನಿಗೆ ಆಗತಕ್ಕ ಸುಖವು ಅಧಿಕವಾದದ್ದು ಅಕ್ಷಯವಾದದ್ದು. ಈ ಕಾಮಕ್ರೋಧಗಳನ್ನು ಈ ಮನುಷ್ಯ ಜನ್ಮದಲ್ಲಿಯೇ ಬಿಡಲು ಪ್ರಯತ್ನ ಮಾಡಬೇಕು. ಕಾಮಕ್ರೋಧಗಳನ್ನು ಸರ್ವಾತ್ಮನಾ ಬಿಡಲು ಸಾಧ್ಯವಿಲ್ಲದಿದ್ದರೂ ಅದರ ವೇಗವನ್ನಾದರೂ ಕಡಿಮೆ ಮಾಡಿ ಬಿಡಲು ಪ್ರಯತ್ನ ಮಾಡಬೇಕು. ಮಳೆಗಾಲದಲ್ಲಿ ನದಿಯು ಅತಿಶಯವಾದ ಪ್ರವಾಹದ ವೇಗದಲ್ಲಿ ಸಿಕ್ಕಿಬಿದ್ದು ಅನರ್ಥವನ್ನು ಹೊಂದುವಂತೆ, ಕಾಮಕ್ರೋಧದ ವೇಗವುಳ್ಳ ಮನುಷ್ಯನು ಎಂದಿಗೂ ಸುಖಿಯಾಗಲಾರನು. ಆ ವೇಗವನ್ನು ಜಯಿಸಿದವನೇ ಸುಖಿಯಾಗುವನು. ಆ ಕಾಮಕ್ರೋಧದ ತ್ಯಾಗವು ಅಭ್ಯಾಸದಿಂದ ಈ ಮನುಷ್ಯಜನ್ಮದಲ್ಲಿಯೇ ಸಾಧ್ಯವಾಗಬಹುದು. ಮನುಷ್ಯ ಜನ್ಮ ಹೋದ ಮೇಲೆ ಪಶ್ವಾದಿ ಜನ್ಮವು ಪ್ರಾಪ್ತವಾದರೆ ಅವುಗಳನ್ನು ಜಯಿಸಲು ಸಾಧ್ಯವಿಲ್ಲ. ಆವಾಗ ವಿವೇಕವು ಇಲ್ಲ.

ಸತ್ಯಲೋಕವೇ ಮೊದಲಾದ ಲೋಕಗಳಲ್ಲಿ ಈ ಜೀವವು ಹೋಗಬೇಕಾದರೆ ಕಾಮಕ್ರೋಧಗಳನ್ನು ಜಯಿಸಬೇಕು. ಅಲ್ಲಿ ಹೋದ ಮೇಲೆ ಕಾಮಕ್ರೋಧಗಳನ್ನು ಜಯಿಸಲು ಸಾಧ್ಯವಿಲ್ಲ. ಆ ಪಕ್ಷದಲ್ಲಿ 'ಕಾಮಕ್ರೋಧ ಬಿಟ್ಟವರಿಗೆ ಆ ಲೋಕ ಪ್ರಾಪ್ತಿಯಾಗುತ್ತದೆ. ಆ ಲೋಕಕ್ಕೆ ಹೋದ ಮೇಲೆ ಕಾಮ ಕ್ರೋಧ ಬಿಡುತ್ತಾನೆ' ಎಂದು ಅನ್ಯೋನ್ಯಾಶ್ರಯ ದೋಷವು ಬರುತ್ತದೆ. ಆದುದರಿಂದ ಈ ಮನುಷ್ಯ ಜನ್ಮ ಬಂದಾಗ ಕಾಮ ಕ್ರೋಧಗಳನ್ನು ಬಿಡಲು

ಪ್ರಯತ್ನ ಮಾಡತಕ್ಕವನೇ ಮನುಷ್ಯನೆಂದು ಇಲ್ಲವಾದರೆ ಪಶುವೆಂದು ಹೇಳಲ್ಪಡುತ್ತಾನೆ.

ಜ್ಞಾನಿಗಳಾದವರು ಈ ವಿಷಯ ಸುಖದ ಭೋಗವು ದುಃಖಸಾಧನವೆಂದು ತಿಳಿದು ವಿಷಯಭೋಗದಲ್ಲಿ ಆಸಕ್ತರಾಗುವುದಿಲ್ಲ. ಯಾರು ಕಾಮಕ್ರೋಧಾದಿಗಳನ್ನು ಬಿಟ್ಟು ದೇಹದೊಳಗೆ ಪರಮಾತ್ಮನನ್ನು ದರ್ಶನ ಮಾಡುತ್ತ ವಿಶೇಷವಾದ ಆನಂದವನ್ನು ಅನುಭವಿಸುತ್ತಾನೋ, ಅವನೇ ಪರಬ್ರಹ್ಮನನ್ನು ಹೊಂದುತ್ತಾನೆ. ಆ ಪರಬ್ರಹ್ಮನನ್ನು ಹೊಂದತಕ್ಕ ಜ್ಞಾನಿಗಳು ತಮ್ಮಲ್ಲಿರತಕ್ಕ ಎಲ್ಲಾ ಕಶ್ಮಲಗಳನ್ನು ನಾಶ ಮಾಡಿ-ಕೊಳ್ಳುತ್ತಾರೆ. ತತ್ತ್ವಸಂಶಯ ಇಲ್ಲದವರಾಗುತ್ತಾರೆ. ಸಮಸ್ತ ಪ್ರಾಣಿಗಳ ಹಿತದಲ್ಲಿ ಆಸಕ್ತರಾಗಿರುತ್ತಾರೆ. ಕಾಮಕ್ರೋಧರಹಿತರಾದ ಆ ಜ್ಞಾನಿಗಳಿಗೆ ಪರಬ್ರಹ್ಮನು ಸಮಸ್ತ ದೇಶಕಾಲದಲ್ಲಿ ರಕ್ಷಕನಾಗಿರುತ್ತಾನೆ. ಆದುದರಿಂದ ಇಂದ್ರಿಯ ನಿಗ್ರಹ ಮಾಡಿಕೊಂಡು ಕಾಮ-ಕ್ರೋಧರಹಿತನಾಗಿ ಇಂದ್ರಿಯಗಳನ್ನು ವಿಷಯದ ಕಡೆ ಹೋಗದ ಹಾಗೆ ಮಾಡಿ ಭ್ರೂಮಧ್ಯವನ್ನು ಚಕ್ಷುಸ್ಸಿನಿಂದ ನೋಡುತ್ತ, ಪ್ರಾಣಾಯಾಮದಿಂದ ಪರಮಾತ್ಮನ ರೂಪವನ್ನು ಈ ರೀತಿ ಚಿಂತನ ಮಾಡಬೇಕು: 'ಸಮಸ್ತ ಯಜ್ಞಗಳನ್ನು ಭೋಗಿಸತಕ್ಕವನು. ಸಮಸ್ತ ಲೋಕಕ್ಕೆ ಸ್ವಾಮಿಯಾದವನು. ಹಾಗೆ ಸಮಸ್ತ ಪ್ರಾಣಿಗಳಿಗೆ ಉಪಕಾರಿಯಾದವನು' ಎಂದು. ಈ ರೀತಿ ಧ್ಯಾನದಿಂದ ತಿಳಿದವನು ಉತ್ತಮವಾದ ಶಾಂತಿಯನ್ನು ಹೊಂದುತ್ತಾನೆ."

ಇಲ್ಲಿಗೆ ಐದನೇ ಅಧ್ಯಾಯವು ಸಮಾಪ್ತವಾಯಿತು. (ಹದಿಮೂರನೆಯ ದಿನದ ಉಪನ್ಯಾಸವು ಮುಗಿಯಿತು.)

***

# ಆರನೆಯ ಅಧ್ಯಾಯ

ಶ್ರೀಕೃಷ್ಣ ಪರಮಾತ್ಮನು ಉಪದೇಶ ಮಾಡುತ್ತಿದ್ದಾನೆ: "ಅರ್ಜುನಾ! ಧ್ಯಾನಯೋಗವನ್ನು ಸ್ವಲ್ಪವಾಗಿ ಹೇಳಿದೆ. ಅದನ್ನೇ ವಿಸ್ತರಿಸಿ ಹೇಳುತ್ತಿದ್ದೇನೆ. ಆ ಧ್ಯಾನಯೋಗಕ್ಕೆ ಫಲತ್ಯಾಗ ಮಾಡಿ, ಕರ್ಮ ಮಾಡುವವನೇ ಅಧಿಕಾರಿ. ಅವನನ್ನೇ ಕಾಮಕ್ರೋಧಪರಿತ್ಯಾಗದಿಂದ ಸನ್ನ್ಯಾಸಿಯೆಂದೂ, ಕರ್ಮವನ್ನು ಮಾಡುವುದರಿಂದ ಯೋಗಿಯೆಂದೂ ಹೇಳುತ್ತಾರೆ. ಅಗ್ನಿಯನ್ನು ಪರಿತ್ಯಾಗ ಮಾಡಿ ಎಲ್ಲ ಕರ್ಮಗಳನ್ನು ಬಿಟ್ಟವನು ಎಂದು ಲೋಕದಲ್ಲಿ ಹೇಳಲ್ಪಡುವ ಸನ್ನ್ಯಾಸಿಯು, ಕೇವಲ ಅಷ್ಟರಿಂದ ಧ್ಯಾನಯೋಗಕ್ಕೆ ಅಧಿಕಾರಿಯಲ್ಲ. ಧ್ಯಾನಯೋಗ ಮಾಡತಕ್ಕ ಸನ್ನ್ಯಾಸಿಗೂ ಸಹ ಅಗ್ನಿಯು ಮತ್ತು ಕರ್ಮವು ಉಂಟೇ ಉಂಟು. ಶಾಸ್ತ್ರದ ಪ್ರವಚನವೇ ಕರ್ಮವು, ಆ ಪರಮಾತ್ಮನೇ ಅಗ್ನಿಯು ಯತ್ಯಾಶ್ರಮಿಗಳಿಗೆ. ಸನ್ನ್ಯಾಸಾಶ್ರಮಿಯು ಮೊದಲನೇ ಆಶ್ರಮದಲಿ ಸ್ವೀಕಾರ ಮಾಡಿದ ಅಗ್ನಿಯನ್ನು ತನ್ನ ದೇಹದಲ್ಲಿ ಆವಾಹನೆ ಮಾಡಿಕೊಂಡು ಯತ್ಯಾಶ್ರಮವನ್ನು ಸ್ವೀಕಾರ ಮಾಡುವುದರಿಂದ ಅವನು ಅಗ್ನಿ-ಯಿಲ್ಲದವನು ಆಗುವುದಿಲ್ಲ.

ಆದುದರಿಂದ ಕರ್ಮಯೋಗವನ್ನು ಫಲತ್ಯಾಗ ಮೂಲಕವಾಗಿ ಮಾಡುವವರೇ ಧ್ಯಾನಯೋಗಕ್ಕೆ ಅಧಿಕಾರಿಗಳಾಗುತ್ತಾರೆ. ಕಾಮಕ್ರೋಧಾದಿಗಳನ್ನು ಬಿಡದೆ ಸಂಕಲ್ಪತ್ಯಾಗ ಮಾಡದೆ ಧ್ಯಾನಯೋಗಕ್ಕೆ ಅಧಿಕಾರಿಯಾಗುವುದಿಲ್ಲ.

ಧ್ಯಾನಯೋಗಕ್ಕೆ ಇನ್ನೂ ಅವಶ್ಯಕವಾದ ಸಾಧನೆಯುಂಟು. ಅದು ನಾನಾಜನ ಶುಶ್ರೂಷೆ. ಎಂದರೆ, ತನಗಿಂತ ಉತ್ತಮರು, ಸಮಾನರು ಮತ್ತು ಅಧಮರು ಎಂಬ ಮೂರು ಪ್ರಕಾರದ ಸಜ್ಜನರ ಶುಶ್ರೂಷೆ. ಉತ್ತಮ ಶುಶ್ರೂಷೆ ಎಂದರೆ ಅವರ ಸೇವೆ ಮಾಡುವುದು. ಸಮಾನರ ಶುಶ್ರೂಷಾ ಎಂದರೆ ತನ್ನಿಂದ ಸಾಧ್ಯವಾದಷ್ಟು ಉಪಕಾರ ಮಾಡಬೇಕು. ಅಧಮ ಸಜ್ಜನರ ಶುಶ್ರೂಷೆಯೆಂದರೆ ಅನ್ನಾದಿ ದಾನ, ಅವರ ದುಃಖ ಪರಿಹಾರ. ಈ ತರಹವಾದ ನಾನಾ ಜನ ಶುಶ್ರೂಷೆಯು ಶಾಸ್ತ್ರದಲ್ಲಿ ಕರ್ಮವೆಂದು ಹೇಳಲ್ಪಟ್ಟಿದೆ. ಕರ್ಮವೆಂಬ ಶಬ್ದವು **"ಕರವತ್ ಮಿತೇಃ ಕರ್ಮ"** ಎಂದು ನಿಷ್ಪನ್ನವಾಗಿದೆ. ರಾಜನಿಗೆ ಕಪ್ಪವನ್ನು ಹೇಗೆ

ಅವಶ್ಯ ಕೊಡಬೇಕೋ ಹಾಗೇ ಪರಮಾತ್ಮನ ಪ್ರೀತ್ಯರ್ಥವಾಗಿ ನಾನಾಜನ ಶುಶ್ರೂಷೆಯನ್ನು ಅವಶ್ಯವಾಗಿ ಮಾಡಿಯೇ ತೀರಬೇಕೆಂಬ ಅರ್ಥವು ಕರ್ಮಶಬ್ದದಿಂದ ತಿಳಿಯುತ್ತದೆ. ಇದರಿಂದ ಸಮಸ್ತ ಪ್ರಾಣಿಗಳ ಅಂತರ್ಯಾಮಿಯಾದ ಪರಮಾತ್ಮನು ಸಂತುಷ್ಟನಾಗುತ್ತಾನೆ. ಧ್ಯಾನಯೋಗವು ಉಂಟಾಗುವ ತನಕ ನಾನಾಶುಶ್ರೂಷೆಯನ್ನು ಮಾಡಿಯೇ ತೀರಬೇಕು. ಧ್ಯಾನಯೋಗ ಮಾಡಲು ಸಮರ್ಥನಾದ ಮೇಲೆ ತನಗಿಂತ ಉತ್ತಮರ ಶುಶ್ರೂಷೆಯನ್ನು ಒಂದನ್ನೇ ಇಟ್ಟುಕೊಂಡು ಸಮಾನರ ಮತ್ತು ಅಧಮರ ಶುಶ್ರೂಷೆಯನ್ನು ಬಿಡಬಹುದು.

ಯಾರ ಇಂದ್ರಿಯಗಳು ವಿಷಯದ ಕಡೆ ಹೋಗುವುದಿಲ್ಲವೋ, ಯಾರು ಕರ್ಮವನ್ನು ಮಾಡುವಾಗ ಸಂಕಲ್ಪವನ್ನು ಪರಿತ್ಯಾಗ ಮಾಡುತ್ತಾನೋ, ಅವನು ಆವಾಗ ಧ್ಯಾನಯೋಗ ಮಾಡಲು ಸಮರ್ಥನೆಂದು ತಿಳಿಯಬೇಕು.

ಈ ತರಹದ ಧ್ಯಾನಯೋಗದ ಅಧಿಕಾರವನ್ನು ಸಂಪಾದಿಸಿ ಧ್ಯಾನಯೋಗವನ್ನು ಮಾಡುತ್ತಾ ತನ್ನ ಉದ್ಧಾರವನ್ನು ತಾನು ಮಾಡಿಕೊಳ್ಳಬೇಕು. ತನ್ನ ಅಧಃಪಾತವನ್ನು ತಾನು ಮಾಡಿಕೊಳ್ಳಬಾರದು. ರೋಗಿಯಾದವನು ಜಾಗ್ರತೆಯಿಂದ ಇದ್ದು ರೋಗಪರಿಹಾರಕ್ಕೆ ಬೇಕಾದ ಔಷಧಗಳನ್ನು, ಪಥ್ಯ-ಸೇವನೆಯನ್ನು ಮಾಡಿಕೊಂಡಿರಬೇಕು. ಜಿಹ್ವಾ ಚಾಪಲ್ಯಕ್ಕೆ ಅಧೀನನಾಗಿ ಅಪಥ್ಯ ಸೇವನೆ ಮಾಡಿ ತನ್ನ ರೋಗವನ್ನು ಪ್ರಬಲ ಮಾಡಿಕೊಂಡು ಸಾಯಬಾರದು. ಅದೇ ರೀತಿ ಧ್ಯಾನಯೋಗ ಮಾಡದೆ ಆತ್ಮನ ಅಧಃಪತನವನ್ನು ಮಾಡಿಕೊಳ್ಳಬಾರದು. ಪರಮಾತ್ಮನನ್ನು ಆಶ್ರಯಿಸಿ ತನ್ನ ಉದ್ಧಾರವನ್ನು ತಾನು ಮಾಡಿಕೊಳ್ಳಬೇಕು.

ಪರಮಾತ್ಮನು ಬಂಧುವಾಗಿದ್ದಾನೆ. ಅವನನ್ನು ಬಿಟ್ಟರೆ ಅವನು ತನಗೆ ಶತ್ರು-ವಾಗುತ್ತಾನೆ. ಹಾಗೆಯೇ ಮನಸ್ಸನ್ನು ತಾನು ನಿಗ್ರಹ ಮಾಡಿಕೊಳ್ಳಬೇಕು. ನಿಗೃಹೀತ ಮನಸ್ಸು ತನಗೆ ಬಂಧುವಾಗುತ್ತದೆ. ಅಂದರೆ ಧ್ಯಾನಯೋಗಕ್ಕೆ ಸಾಧನವಾಗಿ ಮೋಕ್ಷಕ್ಕೆ ಕಾರಣವಾಗುತ್ತದೆ. ಮನೋನಿಗ್ರಹ ಮಾಡದೆ ಇದ್ದರೆ ಆ ಮನಸ್ಸು ಪಾಪಸಾಧನವಾಗಿ ನರಕಾದ್ಯನರ್ಥಕ್ಕೆ ಕಾರಣವಾಗಿ ತನಗೆ

ಶತ್ರುವಾಗುತ್ತದೆ. ಮನೋನಿಗ್ರಹ ಮಾಡಿ ಪ್ರಶಾಂತನಾದ ಪುರುಷನಿಗೆ ಹೃದಯದಲ್ಲಿ ಪರಮಾತ್ಮನು ತೋರುತ್ತಾನೆ.

ಆ ಧ್ಯಾನಯೋಗಿಯು ಪರಮಾತ್ಮನ ಜ್ಞಾನ ಮತ್ತು ವಿಜ್ಞಾನಗಳಿಂದ ತೃಪ್ತನಾಗಿ, ನಿರ್ವಿಕಾರನಾಗಿ, ಮಣ್ಣು, ಕಲ್ಲು ಮತ್ತು ಬಂಗಾರಗಳನ್ನು ಒಂದೇ ರೀತಿ ನೋಡ-ತಕ್ಕವನಾಗಿ, ಮತ್ತು ತಮಗೆ ಮಿತ್ರರು (ಅಂದರೆ ತನ್ನ ಅನಿಷ್ಟವನ್ನು ತಿಳಿಸಿ ಆ ಅನಿಷ್ಟದಿಂದ ಪಾರು ಮಾಡುವವರು) ಸುಹೃತ್ತುಗಳು (ಅಂದರೆ ಪ್ರತ್ಯುಪಕಾರ ಅಪೇಕ್ಷೆ ಮಾಡದೆ ಉಪಕಾರ ಮಾಡುವವರು), ಉದಾಸೀನರು (ಅಂದರೆ ಉಪಕಾರ ಮತ್ತು ಅಪಕಾರ ಮಾಡದೆ ಇದ್ದವರು), ಮಧ್ಯಸ್ಥರು (ಅಂದರೆ ಉಪಕಾರ ಮತ್ತು ಅಪಕಾರ ಎರಡೂ ಮಾಡುವವರು) ಮೊದಲಾದವರಲ್ಲಿ ಅವರವರಿಗೆ ಯೋಗ್ಯವಾದ ಸತ್ಕಾರವನ್ನು ಮಾಡಬೇಕು. ಈ ಯೋಗ್ಯತಾನುಸಾರಿ ಪೂಜೆಯನ್ನೇ ಸಮಬುದ್ಧಿಯೆನ್ನುತ್ತಾರೆ.

ಯೋಗ್ಯತಾನುಸಾರಿ ಪೂಜೆಯೆಂದರೆ

**"ವಿತ್ತಂ ಬಂಧುರ್ವಯಃ ಕರ್ಮ ವಿದ್ಯಾ ಚೈವ ತು ಪಂಚಮೀ ।**

**ಏತಾನಿ ಮಾನ್ಯಸ್ಥಾನಾನಿ ಗರೀಯೋ ಹ್ಯುತ್ತರೋತ್ತರಮ್ ॥"**

ಎಂದು ಹೇಳಿದಂತೆ ಪೂಜಿಸುವುದು. ಎಂದರೆ ದ್ರವ್ಯವುಳ್ಳವನಿಗಿಂತ ಬಂಧುವು ಅಧಿಕವಾಗಿ ಪೂಜ್ಯನು. ಅವನಿಗಿಂತ ಹೆಚ್ಚು ವಯಸ್ಸಾದವನು ಅಧಿಕ ಪೂಜ್ಯನು. ಅವನಿಗಿಂತ ಕರ್ಮಠನಾದ ಪುರುಷನು ಹೆಚ್ಚು ಪೂಜ್ಯನು. ಅವನಿಗಿಂತ ವಿದ್ಯಾವಂತನು ಅಧಿಕ ಪೂಜ್ಯನು. ಈ ರೀತಿಯಾಗಿ ಅವರವರ ಯೋಗ್ಯತೆಯ ಪ್ರಕಾರ ಅವರಿಗೆ ಸತ್ಕಾರ ಮಾಡಬೇಕೇ ಹೊರತಾಗಿ ಎಲ್ಲರನ್ನೂ ಒಂದೇ ತರಹ ಪೂಜೆ ಮಾಡುವುದು ಅಥವಾ ಅಧಿಕ ಯೋಗ್ಯತೆಯುಳ್ಳವರಿಗೆ ಕಡಿಮೆ ಪೂಜೆ ಮಾಡುವುದು, ಕಡಿಮೆ ಯೋಗ್ಯತೆಯುಳ್ಳವರಿಗೆ ಅಧಿಕ ಪೂಜೆ ಮಾಡುವುದು – ಈ ರೀತಿ ಪೂಜೆ ಮಾಡಿದರೆ ದೊಡ್ಡ ದೇವತೆಯಾದರೂ ತನ್ನ ಸ್ಥಾನದಿಂದ ಭ್ರಷ್ಟನಾಗುತ್ತಾನೆ. ಆದ್ದರಿಂದ ಯೋಗ್ಯತಾನುಸಾರ ಪೂಜೆ ಮಾಡುತ್ತಾ ಧ್ಯಾನಯೋಗಿ ಆಗಬೇಕು.

ಏಕಾಂತ ಸ್ಥಳದಲ್ಲಿದ್ದು ಮನಸ್ಸನ್ನು ನಿಗ್ರಹಿಸಿ ಆಶಾಭಿಮಾನಗಳನ್ನು ಪರಿತ್ಯಾಗ ಮಾಡಿ ಶುಚಿಯಾದ ದೇಶದಲ್ಲಿ ಸ್ಥಿರವಾದ, ಅತ್ಯಂತ ಎತ್ತರವೂ ಅತ್ಯಂತ ಕೆಳಗೂ ಆಗದಿದ್ದಂಥ ಆಸನವನ್ನು ಹಾಕಿ, ಆಸನದಲ್ಲಿ ದರ್ಭೆ, ವ್ಯಾಘ್ರಾಜಿನ, ವಸ್ತ್ರ, ಇವುಗಳನ್ನು ಹಾಕಿ ಕುಳಿತುಕೊಂಡು, ದೇಹವನ್ನು ಶಿರಸ್ಸನ್ನು ಕುತ್ತಿಗೆಯನ್ನು ಸಮನಾಗಿ ಇಟ್ಟುಕೊಂಡು, ದೇಹವನ್ನು ಹರಿದಾಡಿಸದೆ ತನ್ನ ಎರಡೂ ಕಣ್ಣುಗಳಿಂದ ಭ್ರೂಮಧ್ಯವನ್ನಾಗಲೀ, ನಾಸಿಕಾಗ್ರವನ್ನಾಗಲೀ ನೋಡುತ್ತಾ, ಬೇರೆ ದಿಕ್ಕುಗಳನ್ನು ನೋಡದೆ, ಶಾಂತವಾದ ಮನಸ್ಸುಳ್ಳವನಾಗಿ ವ್ಯಾಘ್ರಚೋರಾದಿಗಳಿಂದ ಭಯರಹಿತನಾಗಿ ಬ್ರಹ್ಮಚರ್ಯ ವ್ರತದಲ್ಲಿ ಇದ್ದವನಾಗಿ ಪರಮಾತ್ಮನೇ ಸರ್ವೋತ್ತಮನೆಂದು ತಿಳಿದು ಧ್ಯಾನಯೋಗವನ್ನು ಮಾಡಬೇಕು.

ಹೆಚ್ಚು ಊಟ ಮಾಡಬಾರದು. ಏನೂ ಊಟ ಮಾಡದೇ ಇರಬಾರದು. ಹೆಚ್ಚು ನಿದ್ರೆಯನ್ನು ಮಾಡಬಾರದು. ಯಾವಾಗಲೂ ಎಚ್ಚರಿಕೆಯಲ್ಲೂ ಇರಬಾರದು. (ಅತಿ ಸಮರ್ಥರಾದವರು ಏನೂ ಊಟ ಮಾಡದಿದ್ದರೆ ಅಥವಾ ಎಚ್ಚರಿಕೆಯಲ್ಲಿದ್ದರೆ ಅಡ್ಡಿಯಿಲ್ಲ). ಹೀಗಿದ್ದರೆ ಧ್ಯಾನಯೋಗವು ಸಾಧ್ಯವಾಗುವುದು.

ಗಾಳಿಯಿಲ್ಲದಿದ್ದ ಸ್ಥಳದಲ್ಲಿ ದೀಪವು ಹೇಗೆ ಹರಿದಾಡದ ಹಾಗೆ ಇರುತ್ತದೋ, ಹಾಗೆಯೇ ಧ್ಯಾನಯೋಗಿಯ ಮನಸ್ಸು ನಿಶ್ಚಲವಾಗಿರಬೇಕು. ಆ ಧ್ಯಾನಯೋಗಿಯು ವಿಲಕ್ಷಣವಾದ ಸುಖವನ್ನು ಅನುಭವಿಸುತ್ತಾನೆ. ಆ ಧ್ಯಾನಯೋಗವನ್ನು ಬಿಡುವುದೇ ಬೇಡವೆಂದು ತಿಳಿದುಕೊಳ್ಳುತ್ತಾನೆ. ಎಷ್ಟು ದುಃಖಸಾಧನಗಳು ಬಂದರೂ ಆ ಧ್ಯಾನಯೋಗವನ್ನು ಬಿಡಲಾರನು. ಈ ತರಹದ ಧ್ಯಾನಯೋಗ ಮಾಡುವವನಿಗೆ ಮುಂದೆ ದುಃಖವೇ ಹುಟ್ಟುವುದಿಲ್ಲ.

ಇಂತಹ ಧ್ಯಾನಯೋಗಕ್ಕೋಸ್ಕರವಾಗಿ ವಿಷಯವೈರಾಗ್ಯದಿಂದ ಇಂದ್ರಿಯ ನಿಗ್ರಹದಿಂದ ಪ್ರಯತ್ನ ಮಾಡಬೇಕು. ಸ್ವಲ್ಪಸ್ವಲ್ಪವಾಗಿ ಧೈರ್ಯದಿಂದ ಇದನ್ನು ಅಭ್ಯಾಸ ಮಾಡಬೇಕು. ಆ ಮನಸ್ಸು ಎಲ್ಲೆಲ್ಲಿ ಓಡುತ್ತದೋ, ಅಲ್ಲಿಂದ ಆ ಮನಸ್ಸನ್ನು ಒಳಗೆ ಎಳೆದು ಇಟ್ಟುಕೊಳ್ಳಬೇಕು. ಪರಮಾತ್ಮನು ಸಮಸ್ತ ಪ್ರಾಣಿ-ಗಳೊಳಗೆ ಅಂತರ್ಯಾಮಿಯಾಗಿದ್ದಾನೆ. ಎಲ್ಲಾ ಪ್ರಾಣಿಗಳಿಗೂ ಆಧಾರನಾಗಿದ್ದಾನೆ. ಎಲ್ಲರಿಗೂ ಸ್ವಾಮಿಯಾದವನು ಅವನೊಬ್ಬನೇ ಎಂದು ಧ್ಯಾನಯೋಗಿಯು

ತಿಳಿದುಕೊಳ್ಳಬೇಕು" ಎಂದು ಶ್ರೀಕೃಷ್ಣ ಪರಮಾತ್ಮನು ಉಪದೇಶಿಸಿದಾಗ ಅರ್ಜುನನು ಕೇಳುತ್ತಾನೆ:

"ಮನಸ್ಸು ಬಹಳ ಚಂಚಲವಾಗಿದೆ. ಇದನ್ನು ಸ್ಥಿರವಾಗಿ ಇಟ್ಟುಕೊಳ್ಳಲು ಸಾಧ್ಯವೇ ಇಲ್ಲ. ಆದ್ದರಿಂದ ಧ್ಯಾನಯೋಗವನ್ನು ಯಾರೂ ಮಾಡಲು ಸಾಧ್ಯವಿಲ್ಲ. ಆಕಾಶದಲ್ಲಿ ಸದಾ ಗತಿಯುಳ್ಳ ವಾಯುವನ್ನು ನಿಲ್ಲಿಸುವುದು ಹೇಗೆ ಸಾಧ್ಯವಿಲ್ಲವೋ ಹಾಗೆಯೇ ಮನಸ್ಸನ್ನು ಒಳಗೇನೇ ಇಟ್ಟುಕೊಳ್ಳಲು ಸಾಧ್ಯವಿಲ್ಲ" ಎಂದು ಅರ್ಜುನನು ಪ್ರಶ್ನೆ ಮಾಡಿದ್ದಕ್ಕೆ, ಶ್ರೀಕೃಷ್ಣ ಪರಮಾತ್ಮನು ಉಪದೇಶ ಮಾಡುತ್ತಾನೆ:

"ಎಲೋ ಅರ್ಜುನಾ! ಮನಸ್ಸು ನಿಗ್ರಹ ಮಾಡಲಿಕ್ಕೆ ಕಷ್ಟವೆಂಬುದು ನಿಜ. ಆದರೆ ಅಭ್ಯಾಸ ಮತ್ತು ವಿಷಯವೈರಾಗ್ಯ ಇವುಗಳಿಂದ ನಿಗ್ರಹ ಮಾಡಲು ಶಕ್ಯವಾಗುತ್ತದೆ. 'ಮದೋನ್ಮತ್ತವಾದ ಆನೆಯು ಇಚ್ಛಾನುಸಾರ ವಿಹರಿಸಿದಾಗ ಶ್ರಮ ಹೊಂದಿ ಕೊನೆಗೆ ಶಾಂತವಾಗುತ್ತದೆ. ಅದರಂತೆ ಮನಸ್ಸು ವಿಷಯದಿಂದ ತೃಪ್ತಿಯನ್ನು ಹೊಂದಿ ತಾನಾಗಿಯೇ ಶಾಂತವಾಗುವುದು, ಅಭ್ಯಾಸವು ಏಕೆ?' ಎಂದು ಕೇಳಬೇಡ. ಅಭ್ಯಾಸವಿಲ್ಲದೆ ತನ್ನಷ್ಟಕ್ಕೆ ಮನಸ್ಸನ್ನು ನಿಲ್ಲಿಸಲು ಸಾಧ್ಯವೇ ಇಲ್ಲ. ವಿಷಯದಿಂದ ಮನಸ್ಸಿಗೆ ತೃಪ್ತಿಯು ಯಾವಾಗಲೂ ಆಗುವುದಿಲ್ಲ. ವಿಷಯದಿಂದ ಮತ್ತಷ್ಟು ಕಾಮದ ಅಭಿವೃದ್ಧಿಯೇ ಆಗುತ್ತದೆ. ಪ್ರಜ್ವಲಿತವಾದ ಬೆಂಕಿಯಲ್ಲಿ ತುಪ್ಪ ಮತ್ತಷ್ಟು ಹಾಕಿದರೆ ಅಗ್ನಿಯು ಮತ್ತಷ್ಟು ಪ್ರಜ್ವಲಿಸುವಂತೆ ಮನಸ್ಸು ಎಂದಿಗೂ ವಿಷಯಾನುಭವದಿಂದ ತೃಪ್ತಿ ಹೊಂದಲಾರದು. ಆದುದರಿಂದ ಮನೋನಿಗ್ರಹಕ್ಕೆ ಅಭ್ಯಾಸ, ವಿಷಯವೈರಾಗ್ಯ ಇವುಗಳೇ ಸಾಧನಗಳು."

ಅರ್ಜುನನು ಪ್ರಶ್ನೆ ಮಾಡುತ್ತಾನೆ: "ಶ್ರದ್ಧಾಳುವಾದ ಪುರುಷನು ಪ್ರಯತ್ನ ಮಾಡಿದ್ದು ಕಡಿಮೆಯಾಗಿ, ಯೋಗಭ್ರಷ್ಟನಾದರೆ ಯೋಗದ ಪೂರ್ಣ ಫಲವು ಸಿಗದೆ ಇದ್ದ ಪ್ರಯುಕ್ತ ಅವನಿಗೆ ಯಾವ ಗತಿಯು ಪ್ರಾಪ್ತವಾಗುವುದು? ಆಕಾಶದಲ್ಲಿ ಮೇಘಗಳು ಸೇರಿದಾಗ ದೊಡ್ಡ ವಾಯುವು ಬಂದು ಭಿನ್ನಭಿನ್ನವಾಗಿ ಮಾಡಿ ಆ ಮೇಘವನ್ನು ದೂರಕ್ಕೆ ಹೋಗುವಂತೆ ಮಾಡುತ್ತದೆ. ಆ ಮೇಘವು ಮಳೆಯನ್ನು

ಕೊಡಲಾರದು. ಭಿನ್ನಭಿನ್ನವಾದ ಆ ಮೇಘವು ನಿಷ್ಪ್ರಯೋಜಕ. ಮೇಘವು ನಷ್ಟವಾಗಿ ಹೋದಂತೆ ಯೋಗಭ್ರಷ್ಟನೂ ಕೂಡ ನಷ್ಟವಾಗಿ ಹೋಗುತ್ತಾನೋ ಹೇಗೆ? ಅಂದರೆ ಯೋಗವು ಪರಿಪೂರ್ಣವಾಗದಿದ್ದ ಪ್ರಯುಕ್ತ ಅವನಿಗೆ ಪರಬ್ರಹ್ಮ ಪ್ರಾಪ್ತಿಯೂ ಇಲ್ಲ. ಕಾಮ್ಯಕರ್ಮವನ್ನು ಬಿಟ್ಟು ಯೋಗವನ್ನು ಆರಂಭಿಸಿದ ಪ್ರಯುಕ್ತ ಸ್ವರ್ಗಾದಿ ಸುಖವೂ ಇಲ್ಲ. ಹೀಗೆ "ಇತೋ ಭ್ರಷ್ಟಃ ತತೋ ಭ್ರಷ್ಟಃ" ಎಂಬಂತೆ ನಿತ್ಯಸುಖ ಮತ್ತು ಅನಿತ್ಯಸುಖ ಎರಡೂ ಇಲ್ಲದೆ ಅಧಃಪಾತವನ್ನು ಹೊಂದುವ ಸಂಭವವಿದೆಯಲ್ಲವೇ?" ಎಂದು ಅರ್ಜುನನು ಕೇಳಿದ್ದಕ್ಕೆ, ಶ್ರೀಕೃಷ್ಣನು ಸಮಾಧಾನವನ್ನು ಹೇಳುತ್ತಾನೆ:

"ಎಲೋ ಅರ್ಜುನಾ! ನನ್ನ ಧ್ಯಾನಯೋಗವನ್ನು ಆರಂಭ ಮಾಡಿದ ಪುರುಷನಿಗೆ ಯಾವಾಗಲೂ ಎಲ್ಲಿಯೂ ನಾಶವಿಲ್ಲ. ಅತ್ಯುತ್ತಮವಾದ ಭಗವತ್ಪ್ರೀತಿಕರವಾದ ಕರ್ಮವನ್ನು ಸ್ವಲ್ಪ ಮಾಡಿದರೂ, ಅಂತಹ ಯಾವ ಪುರುಷನೂ ಕೂಡ ದುರ್ಗತಿಯನ್ನು ಹೊಂದುವುದಿಲ್ಲ. ಅವನು ಬಹುಕಾಲ ಪುಣ್ಯಲೋಕದಲ್ಲಿ ವಾಸಮಾಡಿ ಸತ್ಕುಲದಲ್ಲಿ ಹುಟ್ಟುತ್ತಾನೆ ಅಥವಾ ಯೋಗಿಗಳ ಕುಲದಲ್ಲೇ ಹುಟ್ಟುತ್ತಾನೆ. ಇಂತಹ ಜನ್ಮವು ಅತ್ಯಂತ ದುರ್ಲಭವಾದದ್ದು. ಆ ಜನ್ಮವನ್ನು ಹೊಂದಿ ಹಿಂದಿನ ಜನ್ಮದ ಸಂಸ್ಕಾರದಿಂದ ಯೋಗಾಭ್ಯಾಸವನ್ನು ಅಧಿಕವಾಗಿ ಮಾಡಲು ಆರಂಭಿಸುತ್ತಾನೆ. ಅವನು ಪ್ರಯತ್ನ ಮಾಡದಿದ್ದರೂ ಪೂರ್ವ ಸಂಸ್ಕಾರದಿಂದ ಯೋಗಾಭ್ಯಾಸದಲ್ಲಿ ಪ್ರವೃತ್ತಿಯು ಆಗುತ್ತದೆ. ಹೀಗೆ ಅನೇಕ ಜನ್ಮಗಳಲ್ಲಿ ಯೋಗಾಭ್ಯಾಸವನ್ನು ಮಾಡಿಕೊಂಡು ಸಿದ್ಧಿಯನ್ನು ಹೊಂದುತ್ತಾನೆ.

ಯೋಗಾಭ್ಯಾಸವನ್ನು ತಿಳಿದುಕೊಳ್ಳಬೇಕು ಅಂತ ಇಚ್ಛಾ ಮಾಡಿದವನೂ ಕೂಡಾ ಕ್ರಮಶಃ ಉತ್ತಮವಾದ ಸಿದ್ಧಿಯನ್ನು ಹೊಂದುತ್ತಾನೆ ಎಂದಮೇಲೆ ಯೋಗಾಭ್ಯಾಸವನ್ನು ಮಾಡಿದವನು ಸಿದ್ಧಿಯನ್ನು ಹೊಂದುತ್ತಾನೆಂದು ಹೇಳಬೇಕಾಗಿಲ್ಲ.

ಕೃಚ್ಛ್ರಚಾಂದ್ರಾಯಣಾದಿ ತಪಸ್ಸು ಮಾಡುವವರಿಗಿಂತ ಧ್ಯಾನಯೋಗಿಯು ಶ್ರೇಷ್ಠನು. ಹಾಗೆಯೇ, ಕರ್ಮ ಮಾಡುವವರಿಗಿಂತಲೂ, ಧ್ಯಾನ ಇಲ್ಲದೆ ಇರುವ

ಜ್ಞಾನಿಗಳಿಗಿಂತಲೂ ಜ್ಞಾನಿಯಾಗಿ ಯೋಗಾಭ್ಯಾಸ ಮಾಡುವವನು ಶ್ರೇಷ್ಠ. ಇತರ ದೇವತೆಗಳ ವಿಷಯಕವಾದ ಯೋಗಾಭ್ಯಾಸ ಮಾಡುವವರಿಗಿಂತ ನನ್ನಲ್ಲಿ ಭಕ್ತಿಯಿಟ್ಟು ಶ್ರದ್ಧಾಪೂರ್ವಕವಾಗಿ ಯಾರು ಯೋಗಾಭ್ಯಾಸದಿಂದ ನನ್ನನ್ನು ಭಜಿಸುತ್ತಾನೋ ಅವನು ಎಲ್ಲ ಯೋಗಿಗಳಿಗಿಂತಲೂ ಶ್ರೇಷ್ಠನೆಂದು ತಿಳಿಯಬೇಕು." (ಹದಿನಾಲ್ಕನೇ ದಿನದ ಉಪನ್ಯಾಸವು ಮುಗಿಯಿತು.)

ಇಲ್ಲಿಗೆ ಆರನೆಯ ಅಧ್ಯಾಯ ಸಮಾಪ್ತಿಯಾಯಿತು.

***

# ಏಳನೆಯ ಅಧ್ಯಾಯ

ಇನ್ನು ಮುಂದಿನ ಆರು ಅಧ್ಯಾಯಗಳಲ್ಲಿ ಶ್ರೀಕೃಷ್ಣನು ಭಕ್ತಿಯೋಗ-ಕ್ಕೋಸ್ಕರವಾಗಿ ಪರಮಾತ್ಮನ ಮಾಹಾತ್ಮ್ಯವನ್ನು ವರ್ಣಿಸುತ್ತಾನೆ. ಹಿಂದಿನ ಅಧ್ಯಾಯದಲ್ಲಿ ಭಕ್ತಿಪೂರ್ವಕವಾಗಿ ಧ್ಯಾನ ಮಾಡಬೇಕೆಂದು ಹೇಳಲಾಗಿದೆ. ಭಕ್ತಿ ಮಾಡುವುದು ಹೇಗೆ? ಯಾವದಾದರೊಂದು ಕಾರ್ಯ ಮಾಡು ಎಂದರೆ ಮಾಡಬಹುದು. ಭಕ್ತಿ ಮಾಡು ಎಂದು ಹೇಳಿದ ಮಾತ್ರಕ್ಕೆ ಭಕ್ತಿ ಮಾಡಲು ಸಾಧ್ಯವಿಲ್ಲ. ಆದುದರಿಂದ ಭಕ್ತಿಗೆ ಕಾರಣವಾದ ಭಗವನ್ಮಾಹಾತ್ಮ್ಯೆಯನ್ನು ತಿಳಿಸಿ ಭಕ್ತಿ ಬರುವಂತೆ ಮಾಡುತ್ತಾನೆ.

ದುರ್ಯೋಧನಾದಿಗಳಿಗೆ ಪರಮಾತ್ಮನ ಮಾಹಾತ್ಮ್ಯ ಗೊತ್ತಿದ್ದರೂ, ಹುರಿಯಲ್ಪಟ್ಟ ಬೀಜದಿಂದ ಅಂಕುರವು ಹುಟ್ಟದೆ ಇರುವ ರೀತಿಯಲ್ಲಿ, ಮತ್ಸರಾದಿಗಳಿಂದ ದುಷ್ಟ ಮನಸ್ಸುಳ್ಳವರಾದ ಪ್ರಯುಕ್ತ ಅವರಿಗೆ ಭಕ್ತಿ ಹುಟ್ಟಲಿಲ್ಲ. ಮತ್ಸರಾದಿದೋಷ ರಹಿತರಾದವರಿಗೆ, 'ಪರಮಾತ್ಮನು ನಮ್ಮನ್ನು ಉದ್ಧಾರ ಮಾಡುವವನು, ಮಹಾ ಮಹಿಮೆಯುಳ್ಳವನು' ಎಂದು ತಿಳಿದವರಿಗೆ ಅವನಲ್ಲಿ ಒಂದು ವಿಶೇಷವಾದ ಪ್ರೇಮವು ಹುಟ್ಟುವುದು. ಅದೇ ಭಕ್ತಿ. ಆದ್ದರಿಂದ ಆ ಭಕ್ತಿಗೋಸ್ಕರವಾಗಿ, ಮತ್ಸರಾದಿದೋಷ ಇಲ್ಲದ ಅರ್ಜುನನನ್ನು ಕುರಿತು ಪರಮಾತ್ಮನ ವಿಶೇಷ ಮಹಿಮೆಗಳನ್ನು ಇನ್ನು ಆರು ಅಧ್ಯಾಯಗಳಲ್ಲಿ ಶ್ರೀಕೃಷ್ಣ ಪರಮಾತ್ಮನು ಹೇಳುತ್ತಾನೆ:

"ಎಲೋ ಅರ್ಜುನಾ! ನನ್ನಲ್ಲಿ ಆಸಕ್ತಿ ಉಳ್ಳವನಾಗಿ, ಕರ್ಮಾನುಷ್ಠಾನದ ಯೋಗವನ್ನು ಮಾಡುತ್ತಾ, ನಾನೇ ಆಶ್ರಯನೆಂದು ತಿಳಿದು, ನಾನು ಹೇಳುವ ಉಪದೇಶವನ್ನು ಕೇಳು. ನಿನಗೆ ಸಂಶಯವೇ ಇಲ್ಲದ ಪೂರ್ಣಜ್ಞಾನವು ಉಂಟಾ-ಗುವುದು. ತಿಳಿಯಲು ಯೋಗ್ಯವಾದ ಪರಮಾತ್ಮನ ಎಲ್ಲ ಮಹಿಮೆಗಳನ್ನು ನಿನಗೆ ಹೇಳುತ್ತೇನೆ. ಇದರಿಂದ ನಿನಗೆ ಭಕ್ತಿ ಹುಟ್ಟುವುದು.

ಇಂತಹ ಭಕ್ತಿಯೋಗಕ್ಕೆ ಕಾರಣವಾದ ಭಗವನ್ಮಹಿಮೆಯ ಜ್ಞಾನವನ್ನು ಎಲ್ಲರೂ ಸಂಪಾದಿಸದೇ ಇರಲು ಕಾರಣವೇನೆಂದರೆ, ಆ ತತ್ತ್ವಜ್ಞಾನವಾಗಲೀ

ಭಕ್ತಿಯೋಗವಾಗಲೀ ಅತ್ಯಂತ ದುರ್ಲಭ. ಸಹಸ್ರಾರು ಮನುಷ್ಯರಲ್ಲಿ ಭಕ್ತಿಗೋಸ್ಕರ ಕೆಲವರೇ ಪ್ರಯತ್ನ ಮಾಡುತ್ತಾರೆ. ಅವರಲ್ಲಿ ಕೆಲವರೇ ತತ್ವಜ್ಞಾನಪೂರ್ವಕವಾದ ಭಕ್ತಿಯನ್ನು ಹೊಂದುತ್ತಾರೆ."

ಈ ರೀತಿ ಭಕ್ತಿಯೋಗವನ್ನು ಕೆಲವರೇ ಪಡೆಯಲು ಸಾಧ್ಯ ಎಂಬುದು ಅದರ ಮಹಿಮೆಯೇ ಆಗಿದೆ. ರಾಜಧಾನಿಗಳಲ್ಲಿ ಅಲ್ಪದ್ರವ್ಯದಿಂದ ವ್ಯಾಪಾರ ಮಾಡಲು ಸಾಧ್ಯವಾದ ವಸ್ತುಗಳನ್ನು ಮಾರಾಟ ಮಾಡುವ ಬೀದಿಗಳಲ್ಲಿ ಲಕ್ಷಾವಧಿ ಜನರು ವ್ಯಾಪಾರ ಮಾಡಲಿಕ್ಕಾಗಿ ಬರುವರು. ಲಕ್ಷಾಧಿಕ ಬೆಲೆ ಬಾಳುವ ವಸ್ತುಗಳನ್ನು ಮಾರಾಟ ಮಾಡುವ ಅಂಗಡಿ ಬೀದಿಗಳಲ್ಲಿ ಮಹಾರಾಜನಂತಹ ಕೆಲವು ಜನರೇ ಪ್ರವೇಶ ಮಾಡುತ್ತಾರೆ. ಅಲ್ಲಿ ಜನಸಮ್ಮರ್ದವೇ ಇಲ್ಲ. ಅಲ್ಲಿಗೆ ಬಹು ಜನರು ಹೋಗುವುದಿಲ್ಲ ಎಂಬ ಕಾರಣದಿಂದ ಆ ಮುತ್ತು ರತ್ನ ಅಂಗಡಿಗಳಿಗೆ ಮಹತ್ವ ಕಡಿಮೆಯಾಗುವುದಿಲ್ಲ. ಅದರಂತೆ ಭಕ್ತಿಯೋಗವನ್ನು ಹೊಂದಲು ಅರ್ಹರು ಬಹಳ ಕಡಿಮೆ. ಭಕ್ತಿಯೋಗವು ಅಷ್ಟು ಶ್ರೇಷ್ಠವಾದದ್ದು, ಬಹಳ ದುರ್ಲಭವಾದದ್ದು ಎಂದು ತಿಳಿಯಬೇಕು.

ಇಷ್ಟು ಹೇಳಿ ಶ್ರೀಕೃಷ್ಣ ಪರಮಾತ್ಮನು ಎಲ್ಲ ಮಹಿಮೆಗಳಿಗಿಂತ ಶ್ರೇಷ್ಠವಾದ ಜಗತ್ಸೃಷ್ಟಿಕರ್ತೃತ್ವ ಮಹಿಮೆಯನ್ನು ಮೊದಲು ಹೇಳುತ್ತಾನೆ. ಈ ಜಗತ್ಸೃಷ್ಟಿಯು ಅತಿ ವಿಚಿತ್ರವಾಗಿಯೂ ಅನಂತ ಅವಾಂತರ ಪ್ರಭೇದವನ್ನು ಹೊಂದಿರುವುದು ಆಗಿರುವುದರಿಂದ ಇಂಥ ಜಗತ್ಸೃಷ್ಟಿಕರ್ತನಲ್ಲಿ ಎಂಥ ವಿಚಿತ್ರ ಮಹಿಮೆಯು ಇರಬೇಕು ಎಂದು ಎಲ್ಲರೂ ಊಹಿಸಬೇಕಾಗಿದೆ. ಆದುದರಿಂದ ಪರಮಾತ್ಮನು ಮಾಡತಕ್ಕ ಜಗತ್ಸೃಷ್ಟಿ ಪ್ರಕಾರವನ್ನು ಹೇಳುತ್ತಾನೆ:

"ಅಚೇತನ ಪ್ರಕೃತಿಯು ಪೃಥಿವಿ, ಜಲ, ತೇಜಸ್ಸು, ವಾಯು, ಆಕಾಶ, ಮನಸ್ಸು, ಬುದ್ಧಿ ಮತ್ತು ಅಹಂಕಾರ ಎಂಬುದಾಗಿ ಎಂಟು ಪ್ರಕಾರ ಉಳ್ಳದ್ದಾಗಿದೆ. ಇದಕ್ಕೆ ಅಭಿಮಾನಿ ದೇವತೆಯಾಗಿ ಚೇತನ ಪ್ರಕೃತಿಯೆಂದು ಕರೆಯಲ್ಪಡುವ ಸಮಸ್ತ ಜಗತ್ತಿಗೇ ಧಾರಕಳಾದ ಲಕ್ಷ್ಮಿಯು ಇದ್ದಾಳೆ. ಈ ಲಕ್ಷ್ಮಿಯನ್ನೂ ಅಚೇತನ ಪ್ರಕೃತಿಯನ್ನೂ ಇಟ್ಟುಕೊಂಡು ಎಲ್ಲ ವಸ್ತುಗಳನ್ನು ನಾನು ಸೃಷ್ಟಿ ಮಾಡುತ್ತೇನೆ. ಎಲ್ಲಾ ಜಗತ್ತಿಗೆ ಸೃಷ್ಟಿಕರ್ತನೂ, ಸಂಹಾರಕರ್ತನೂ ನಾನೇ."

ಪರಮಾತ್ಮನು ಚೇತನ ಮತ್ತು ಅಚೇತನಪ್ರಕೃತಿಗಳನ್ನು ಸಹಕಾರಿ-ಕಾರಣವಾಗಿ ಇಟ್ಟುಕೊಂಡದ್ದು ತನ್ನ ಅಶಕ್ತತೆಯಿಂದಲ್ಲ. ಇವುಗಳಿಲ್ಲದೆಯೂ ತಾನು ಏನನ್ನೂ ಮಾಡಲು ಸಮರ್ಥನಾಗಿದ್ದಾನೆ. ಆದರೂ ಲೀಲೆಯಿಂದ ಅವುಗಳನ್ನು ಇಟ್ಟುಕೊಂಡು ಸೃಷ್ಟಿ ಮಾಡುತ್ತಾನೆ. ತನ್ನ ಅಧೀನಗಳಾದ ಇತರ ಕಾರಣಗಳು ಎಷ್ಟು ಇದ್ದರೂ ಅವನ ಮಹಿಮೆಗೆ ಆಧಿಕ್ಯವೇ ಹೊರತು ನ್ಯೂನತೆಯಲ್ಲ. ಒಬ್ಬ ಮಹಾರಾಜನ ಆಜ್ಞಾಧಾರಕರಾದ ಭೃತ್ಯರುಗಳ ಹೆಚ್ಚು ಸಂಖ್ಯೆಯಿಂದ ಇದ್ದರೆ ಮಹಾರಾಜನಿಗೆ ಗೌರವ. ಮಹಾರಾಜನಿಗೆ ಯಾರೂ ಅಧೀನರಾಗದೆ ಇದ್ದರೆ ರಾಜನಿಗೆ ನ್ಯೂನತೆ ಉಂಟಾಗುವುದು. ಅದೇ ರೀತಿ ಪ್ರಕೃತದಲ್ಲಿ ಪ್ರಕೃತ್ಯಾದಿ-ಗಳೆಲ್ಲವೂ ಪರಮಾತ್ಮನ ಅಧೀನವಾಗಿಯೇ ಇರುವುದರಿಂದ ಲೀಲೆಯಿಂದಲೇ ಅನುಸರಿಸುವನಾದ ಪ್ರಯುಕ್ತ ಪರಮಾತ್ಮನಿಗೆ ಯಾವ ತರಹದ ಅಪಕರ್ಷವೂ ಸಂಭವಿಸುವುದಿಲ್ಲ.

ಕೆಲವರು ಕ್ರೈಸ್ತಾದಿಗಳು ಪರಮಾತ್ಮನು ಒಬ್ಬನೇ ಇತರ ಕಾರಣಗಳಿಲ್ಲದೇ ಜಗತ್ಸೃಷ್ಟಿ ಮಾಡುತ್ತಾನೆಂದು ಹೇಳುತ್ತಾರೆ. ಅದು ಲೋಕದ ಸೃಷ್ಟಿಯಿಂದ ಅಸಂಭಾವಿತವಾಗಿಯೇ ತೋರುತ್ತದೆ. ಅಲ್ಲದೇ ಶ್ರುತ್ಯಾದಿ-ಪ್ರಮಾಣವಿರುದ್ಧವಾಗಿದೆ. ಲೋಕದಲ್ಲಿ ಮಣ್ಣಿನ ಪಾತ್ರೆಯನ್ನು ಮಾಡತಕ್ಕ ಪುರುಷನು ಮಾತ್ರ ಇದ್ದು ಮಣ್ಣು ಮೊದಲಾದ ಇತರ ಕಾರಣಗಳಿಲ್ಲದೇ ವಸ್ತುಗಳು ತಯಾರಾಗುವುದು ಕಂಡಿಲ್ಲ. ಆದುದರಿಂದ ಲೋಕಾನುಸಾರವಾಗಿ ಯುಕ್ತಿಯಿಂದ ಊಹಿಸುವುದಾದರೂ ಪ್ರಕೃತ್ಯಾದಿಗಳನ್ನು ಇಟ್ಟುಕೊಂಡು ಪರಮಾತ್ಮನು ಸೃಷ್ಟ್ಯಾದಿಗಳನ್ನು ಮಾಡುತ್ತಾನೆ ಎಂಬುದೇ ಸಂಭಾವಿತವಾದದ್ದು.

“ ‘ಇಡೀ ಜಗತ್ತನ್ನು ಸೃಷ್ಟಿ ಮಾಡುವ ಪರಮಾತ್ಮನಿಗೆ ಮತ್ತೊಬ್ಬ ಸೃಷ್ಟಿಕರ್ತನು ಇದ್ದರೆ ಅವನು ಎಲ್ಲರಿಗಿಂತ ಉತ್ತಮನೆಂದಾಗುತ್ತದೆ. ಅಂಥ ಪರಮಾತ್ಮನ ಸೃಷ್ಟಿಕರ್ತನು ಒಬ್ಬನಿದ್ದಾನೆಯೇ?’ ಎಂದು ಕೇಳಬೇಡ. ನನಗೆ ಸೃಷ್ಟಿಕರ್ತನು ಯಾರೂ ಇಲ್ಲ. ನನಗಿಂತ ಉತ್ತಮ ವಸ್ತುವೇ ಇಲ್ಲ. ಎಲ್ಲರೂ ನನಗಿಂತ ಅಧಮರೇ ಆಗಿದ್ದಾರೆ. ಜಗದಾಧಾರಭೂತನೂ ನಾನೇ. ‘ರತ್ನಗಳಿಗೆ ಆಧಾರವಾದ ಪೆಟ್ಟಿಗೆಯಲ್ಲಿ ರತ್ನಗಳು ಕಾಣಿಸದೆ, ಪೆಟ್ಟಿಗೆ ಮಾತ್ರ ಕಾಣಿಸುವ

ರೀತಿಯಲ್ಲಿ ಜಗತ್ತಿಗೆ ಆಧಾರ ನಾದ ನೀನು ತೋರುತ್ತಾ ಜಗತ್ತು ತೋರದೇ ಇರಬೇಕಾಗಿತ್ತು' ಎಂದು ಶಂಕಿಸಬೇಡ. ಹಗ್ಗವನ್ನು ಆಶ್ರಯಿಸಿಕೊಂಡಿರುವ ರತ್ನಗಳು ಎಲ್ಲರಿಗೂ ತೋರುತ್ತವೆ. ಅವುಗಳಿಗೆ ಆಧಾರವಾಗಿ ಒಳಗಿರತಕ್ಕ ಹಗ್ಗವು ಯಾರಿಗೂ ತೋರುವುದಿಲ್ಲ. ಅದೇ ರೀತಿ ಎಲ್ಲರ ಒಳಗೂ ಅಂತರ್ಯಾಮಿಯಾಗಿದ್ದು ಆಧಾರನಾಗಿರುವ ಪರಮಾತ್ಮನು ತೋರುವುದಿಲ್ಲ. ಅವನನ್ನು ಆಶ್ರಯಿಸಿ-ಕೊಂಡಿರುವ ಇತರ ವಸ್ತುಗಳು ಕಾಣಿಸುತ್ತವೆ. ಈ ರೀತಿಯಾಗಿ ಜಗದಾಧಾರತ್ವ ಮಹಿಮೆಯು ನನ್ನದೇ ಆಗಿರುತ್ತದೆ."

ಈ ದೃಷ್ಟಾಂತದಿಂದ ಶ್ರೀಕೃಷ್ಣ ಪರಮಾತ್ಮನು ಇತರ ಎಲ್ಲ ವಸ್ತುಗಳಿಂದ ತನಗೆ ಭೇದವನ್ನೇ ಹೇಳುತ್ತಿದ್ದಾನೆ. ಈ ದೃಷ್ಟಾಂತದಲ್ಲಿ ಆಶ್ರಯವಾದ ಹಗ್ಗವು ಮತ್ತು ಹಗ್ಗದಲ್ಲಿರತಕ್ಕ ರತ್ನಗಳು ಬೇರೆಯಾಗಿವೆ. ಆ ರತ್ನಗಳೂ ಸಹ ತಾವು ಪರಸ್ಪರ ಬೇರೆ ಬೇರೆಯಾಗಿವೆ. ಹಾಗೆಯೇ ಆಶ್ರಯನಾದ ಪರಮಾತ್ಮನ ದೆಸೆಯಿಂದ ಅವನನ್ನು ಆಶ್ರಯಿಸಿಕೊಂಡಿರತಕ್ಕ ವಸ್ತುಗಳು ಬೇರೆ. ಆ ವಸ್ತುಗಳೂ ಪರಸ್ಪರವೂ ಬೇರೆ ಬೇರೆಯಾಗಿವೆ ಎಂದು ಸ್ಪಷ್ಟವಾಗಿ ತಿಳಿಯುತ್ತದೆ.

'ಲೋಕದಲ್ಲಿ ಸೃಷ್ಟಿಕರ್ತನು ಬೇರೆ, ಆ ಪ್ರಾಣಿಗಳಿಗೆ ಉತ್ಕರ್ಷವನ್ನು ಕೊಡುವವನು ಬೇರೆ ಎಂಬುದಾಗಿ ಕಂಡಿವೆ. ಹಾಗೆ ಸೃಷ್ಟಿಕರ್ತನಾದ ಪರಮಾತ್ಮನ ದೆಸೆಯಿಂದ ಬೇರೆಯಾಗಿ ಜಗತ್ತಿಗೆ ಉತ್ಕರ್ಷವನ್ನು ಕೊಡುವ ಇನ್ನೊಬ್ಬರು ಇರುವ ಸಂಭವವಿದೆ. ಅವನು ಪರಮಾತ್ಮನಂತೆ ಸರ್ವೋತ್ತಮನಲ್ಲವೇ?' ಎಂದು ಶಂಕಿಸಬೇಡ.

ನಾನೇ ಪ್ರತಿಯೊಂದು ವಸ್ತುಗಳ ಉತ್ಕರ್ಷಕ್ಕೂ ಕಾರಣನು. ನೀರಿಗೆ ಮಧುರವಾದ ರಸವಿರುವುದರಿಂದ ಉತ್ಕರ್ಷವಿದೆ. ಆ ಮಧುರರಸಕ್ಕೆ ಕಾರಣನು ನಾನೇ. ಸೂರ್ಯ ಚಂದ್ರರುಗಳಲ್ಲಿ ಪ್ರಭೆಯು ಇರುವುದರಿಂದ ಉತ್ಕರ್ಷವು. ಆ ಪ್ರಭೆಗೆ ಕಾರಣನು ನಾನೇ. ಸರ್ವವೇದಗಳಲ್ಲಿ ಪ್ರಣವವು ಶ್ರೇಷ್ಠವಾದದ್ದು. ಪ್ರಣವ ಸಹಿತವಾಗಿಯೇ ವೇದವನ್ನು ಉಚ್ಚಾರ ಮಾಡತಕ್ಕದ್ದು. ಇಲ್ಲವಾದರೆ ವೇದಮಂತ್ರದ ಜಪಕ್ಕೆ ಫಲವು ಇರಲಾರದು. ಅಂಥ ಪ್ರಣವಕ್ಕೆ ನಿಯಾಮಕನು ನಾನೇ. ಆಕಾಶದಲ್ಲಿ ಶಬ್ದವೆಂಬ ಗುಣವಿದೆ. ಶಬ್ದದಿಂದಲೇ ಲೋಕದಲ್ಲಿ ಎಲ್ಲ

ವ್ಯವಹಾರವು ನಡೆಯುತ್ತದೆ. ಅಂಥ ಶಬ್ದವೆಂಬ ಗುಣಕ್ಕೆ ನಿಯಾಮಕನು ನಾನೇ. ಮನುಷ್ಯರಲ್ಲಿ ಪೌರುಷವೆಂಬ ಗುಣದಿಂದ ಉತ್ಕರ್ಷವಿದೆ. ಆ ಪೌರುಷಕ್ಕೆ ನಿಯಾಮಕನು ನಾನೇ.

ಹಾಗೆಯೇ, ಪೃಥಿವಿಯಲ್ಲಿ ಉತ್ತಮವಾದ ಗಂಧವಿರುವುದರಿಂದ ಉತ್ಕರ್ಷವು. ಅಗ್ನಿಯಲ್ಲಿ ತೇಜಸ್ಸು ಇರುವುದರಿಂದ ಉತ್ಕರ್ಷವು. ಸಮಸ್ತ ಪ್ರಾಣಿಗಳಲ್ಲಿ ಜೀವನ ಇರುವುದರಿಂದ ಉತ್ಕರ್ಷವು. ಜೀವನವಿಲ್ಲದೇ ಮೃತರಾದರೆ ಆ ಪ್ರಾಣಿಗಳು ನಿಷ್ಪ್ರಯೋಜನರು. ತಪಸ್ವಿಗಳಲ್ಲಿ ತಪಸ್ಸು ಇರುವುದರಿಂದ ಉತ್ಕರ್ಷವು. ವೃಕ್ಷಾದಿಗಳ ಉತ್ಕರ್ಷವು ಅವುಗಳ ಬೀಜದ ಮಹತ್ವದಿಂದಲೇ. ಬುದ್ಧಿಶಾಲಿಗಳಾದವರಲ್ಲಿ ಬುದ್ಧಿಯಿಂದಲೇ ಉತ್ಕರ್ಷವು. ಬಲಿಷ್ಠರಾದ ಪುರುಷರಲ್ಲಿ ಉತ್ಕರ್ಷಕ್ಕೆ ಕಾರಣನಾದುದು ಬಲ. ಇವುಗಳಿಗೆಲ್ಲ ಕಾರಣನು ನಾನೇ.

ಧರ್ಮಕ್ಕೆ ಅವಿರುದ್ಧವಾದ ಇಚ್ಛೆಯು ಪುರುಷನ ಉತ್ಕರ್ಷಕ್ಕೆ ಕಾರಣವಾಗಿದೆ. ಆ ಇಚ್ಛೆಯನ್ನು ಹುಟ್ಟಿಸತಕ್ಕವನು ನಾನೇ. ಎಲ್ಲ ಸಾತ್ವಿಕ ವಸ್ತುಗಳು, ರಾಜಸ ವಸ್ತುಗಳು ಹಾಗೂ ತಾಮಸ ವಸ್ತುಗಳು ನನ್ನ ಅಧೀನವಾಗಿಯೇ ಇವೆ. ಅವುಗಳನ್ನು ನಾನು ಆಶ್ರಯಿಸಲಿಲ್ಲ. ನನ್ನನ್ನು ಅವುಗಳು ಆಶ್ರಯಿಸಿವೆ.

ಇಷ್ಟು ಮಹಾಮಹಿಮೆಯುಳ್ಳ ನನ್ನನ್ನು ಪ್ರಾಣಿಗಳು ತಿಳಿದುಕೊಳ್ಳುವುದಿಲ್ಲ. ಸತ್ವ, ರಜಸ್, ತಮಸ್ಸೆಂಬ ಪ್ರಕೃತಿ ಗುಣಗಳಿಂದ ಈ ಜಗತ್ತು ಮೋಹವುಳ್ಳದ್ದಾಗಿದೆ. ಈ ತ್ರಿಗುಣಾತ್ಮಕ ಪ್ರಕೃತಿಯು ನನಗೂ ಜೀವನಿಗೂ ಮಧ್ಯದಲ್ಲಿ ಪರದೆಯಂತೆ ಇದೆ. ಇದಕ್ಕೆ ಮಾಯೆಯೆಂದು ಹೆಸರು. ನನ್ನ ಇಚ್ಛೆಯಿಲ್ಲದೆ ಈ ಆವರಣವನ್ನು ದಾಟಲು ಸಾಧ್ಯವಿಲ್ಲ. ನನ್ನನ್ನೇ ಯಾರು ಮೊರೆ ಹೊಂದುತ್ತಾರೋ ಅವರು ಈ ಮಾಯೆಯನ್ನು ದಾಟಬಹುದು. ನನ್ನನ್ನು ಮೊರೆ ಹೊಂದಲಿಕ್ಕೆ ಈ ಪ್ರಾಣಿಗಳು ಸಮರ್ಥರಾಗಿಲ್ಲ. ಅವರು ಬಹು ಜನ್ಮಗಳಲ್ಲಿ ಮಾಡಿದ ಪಾಪಗಳೇ ನನ್ನನ್ನು ಮೊರೆ ಹೊಂದಲು ಪ್ರತಿಬಂಧಕಗಳಾಗಿವೆ.

ಪರಮಾತ್ಮನ ಸ್ವರೂಪವನ್ನು ಉಪದೇಶ ಮಾಡುತ್ತಾ ಇದ್ದರೂ ಈ ಪಾಪಗಳಿಂದ ಅದನ್ನು ಕೇಳಲಿಕ್ಕೆ ಪ್ರವೃತ್ತಿ ಉಂಟಾಗುವುದಿಲ್ಲ. ಕೆಲವರಿಗೆ ಕೇಳಿದರೂ ಅದರಿಂದ ಜ್ಞಾನ ಉಂಟಾಗುವುದಿಲ್ಲ. ಕೆಲವರಿಗೆ ಕೇಳಿದ್ದು ತಿಳಿದರೂ ಅದರ ಮೇಲೆ ವಿಪರೀತವಾದ ಭಾವನೆಯನ್ನು ಮಾಡಿಕೊಂಡು ಅಶ್ರದ್ಧೆಯಿಂದ ಪರಿತ್ಯಾಗ ಮಾಡುತ್ತಾರೆ. ಕೆಲವರು ಶಾಸ್ತ್ರದ ಮೇಲೆ ಅಶ್ರದ್ಧೆಯನ್ನು ಮಾಡುವುದಲ್ಲದೇ ಇತರರಿಗೂ ಬೋಧಿಸಿ ಅವನಿಗಿರುವ ಶ್ರದ್ಧೆಯನ್ನೂ ಕೂಡ ಇಲ್ಲದಂತೆ ಮಾಡುತ್ತಾರೆ. ಇದಕ್ಕೆಲ್ಲ ಅವರು ಮಾಡಿದ ಪಾಪಕರ್ಮವೇ ಕಾರಣವಾಗಿದೆ.

ಯಾರು ಪುಣ್ಯಶಾಲಿಗಳೋ ಅವರು ನನ್ನ ಭಕ್ತರಾಗುತ್ತಾರೆ. ಆ ಭಕ್ತರು ನಾಲ್ಕು ಪ್ರಕಾರದವರಿದ್ದಾರೆ. ಆರ್ತ, ಅಂದರೆ ರೋಗಾದ್ಯುಪದ್ರತನು. ಜಿಜ್ಞಾಸು, ಅಂದರೆ ಜ್ಞಾನವನ್ನು ಪಡೆಯುವ ಇಚ್ಛಾ ಉಳ್ಳವನು. ಅರ್ಥಾರ್ಥಿ, ಎಂದರೆ ಧನೇಚ್ಛಾ ಉಳ್ಳವನು. ಜ್ಞಾನಿ, ಎಂದರೆ ಪರಮಾತ್ಮನ ಸ್ವರೂಪವನ್ನು ಯಥಾರ್ಥವಾಗಿ ತಿಳಿದವನು. ಇವರ ಮಧ್ಯದಲ್ಲಿ ಜ್ಞಾನಿಯೇ ಶ್ರೇಷ್ಠ ಭಕ್ತ. ಕಾರಣವೇನೆಂದರೆ, ಅವನ ಮನಸ್ಸು ಯಾವಾಗಲೂ ಪರಮಾತ್ಮನಲ್ಲೇ ಇರುತ್ತದೆ. ಇತರ ಭಕ್ತರು ಯಾವ ಫಲವನ್ನು ಅಪೇಕ್ಷಿಸುತ್ತಾರೋ ಅವರು ಆ ಫಲದಲ್ಲಿಯೂ ಮತ್ತು ಪರಮಾತ್ಮನಲ್ಲಿಯೂ ಮನಸ್ಸನ್ನಿಟ್ಟಿರುತ್ತಾರೆ. ಆದರೆ ಜ್ಞಾನಿಯು ಪರಮಾತ್ಮನಲ್ಲಿ ಮಾತ್ರ ಮನಸ್ಸಿಟ್ಟಿರುತ್ತಾನೆ. ಅಲ್ಲದೇ ಜ್ಞಾನಿಗೆ ಪರಮಾತ್ಮನಲ್ಲಿ ಪ್ರಧಾನವಾದ ಭಕ್ತಿಯೂ, ಇತರರಲ್ಲಿ ಅವರವರ ಯೋಗ್ಯತಾನುಸಾರ ತಾರತಮ್ಯಾನುಗುಣವಾಗಿ ಭಕ್ತಿಯೂ ಇರುತ್ತವೆ. ಇತರ ಭಕ್ತರಿಗೆ ಈ ತರಹದ ಭಕ್ತಿ ಇರಲಾರದು.

ಜ್ಞಾನಿಯು ನನಗೆ ಅತ್ಯಂತ ಪ್ರಿಯನಾಗಿದ್ದಾನೆ. ಜ್ಞಾನಿಯು ನನ್ನಲ್ಲಿ ಅತ್ಯಂತ ಪ್ರೀತಿ ಮಾಡುತ್ತಾನೆ. ಆರ್ತ, ಜಿಜ್ಞಾಸು, ಅರ್ಥಾರ್ಥಿ ಈ ಭಕ್ತರುಗಳು ಕೂಡ ಇತರ ನಾಸ್ತಿಕರ ದೆಸೆಯಿಂದ ಶ್ರೇಷ್ಠರೇ ಆಗಿದ್ದಾರೆ.

'ಜ್ಞಾನಿಯೆಂದರೆ ನಾನೇ ಆಗಿದ್ದೇನೆಂದು ತಿಳಿಯಬೇಕು' ಎಂದರೆ ನನ್ನಲ್ಲಿ ನನಗೆಷ್ಟು ಪ್ರೀತಿಯೋ ಅಷ್ಟೇ ಪ್ರೀತಿಯು ಜ್ಞಾನಿಯಲ್ಲಿ ನನಗಿರುತ್ತದೆ. ಇದನ್ನು

ಬಿಟ್ಟು ಜ್ಞಾನಿ ಮತ್ತು ನಾನು ಒಂದೇ ಎಂದು ಐಕ್ಯವನ್ನು ತಿಳಿಯಬಾರದು. ಅವನು ನನ್ನನ್ನು ಹೊಂದತಕ್ಕವನು. ಸಾಮೀಪ್ಯ, ಸಾಯುಜ್ಯ, ಸಾಲೋಕ್ಯ, ಸಾರೂಪ್ಯವೆಂಬ ನಾಲ್ಕು ಮೋಕ್ಷದಲ್ಲಿಯೂ ಐಕ್ಯವು ಇಲ್ಲ. ಸಾಲೋಕ್ಯ, ಸಾರೂಪ್ಯ, ಸಾಮೀಪ್ಯ ಇವುಗಳಲ್ಲಿ ಐಕ್ಯವಿಲ್ಲವೆಂಬುದು ಸ್ಪಷ್ಟ. ನನ್ನ ಒಳಗೆ ಪ್ರವೇಶ ಮಾಡತಕ್ಕ ಸಾಯುಜ್ಯ ಎಂಬ ಮೋಕ್ಷದಲ್ಲಿ ಐಕ್ಯ ಉಂಟೋ ಎಂಬ ಶಂಕೆಯು ಕೆಲವರಿಗೆ ಬರಬಹುದು. ಆದರೆ ಪಿಶಾಚವು ಮನುಷ್ಯರ ದೇಹದ ಒಳಗೆ ಪ್ರವೇಶ ಮಾಡಿದರೂ, ಆ ಮನುಷ್ಯ ಜೀವಕ್ಕಿಂತ ಅದು ಬೇರೆಯಾಗಿಯೇ ಇರುವಂತೆ ನನ್ನಲ್ಲಿ ಪ್ರವೇಶ ಮಾಡಿದ ಜೀವನು ನನ್ನ ದೆಸೆಯಿಂದ ಬೇರೆಯಾಗಿಯೇ ಇರುತ್ತಾನೆ. ಆದುದರಿಂದ ಸಾಯುಜ್ಯ ಮೋಕ್ಷದಲ್ಲಿಯೂ ಐಕ್ಯಕ್ಕೆ ಪ್ರಸಕ್ತಿಯಿಲ್ಲ.

ಇಂಥ ಜ್ಞಾನವು ಸುಲಭವಲ್ಲ. ಬಹು ಜನ್ಮಗಳಲ್ಲಿ ಬಹು ಪುಣ್ಯವನ್ನು ಸಂಪಾದಿಸಿದವರಿಗೆ ಈ ಜ್ಞಾನವು ಪ್ರಾಪ್ತವಾಗುತ್ತದೆ. ಒಂದು ಊರನ್ನೇ ಕ್ರಯಕ್ಕೆ ತೆಗೆದುಕೊಳ್ಳಬೇಕೆಂದು ಇಚ್ಛೆ ಮಾಡಿದವನು ಪ್ರತಿ ವರ್ಷವೂ ತಾನು ಸಂಪಾದಿಸುವ ಹಣ ಎಷ್ಟೋ ಕೋಟಿ ಕೋಟಿ ರೂಪಾಯಿಗಳಾಗುವ ತನಕ ಸಂಗ್ರಹಿಸಿದರೆ ಮಾತ್ರ ಆ ಊರನ್ನು ಕ್ರಯಕ್ಕೆ ತೆಗೆದುಕೊಳ್ಳಲು ಸಾಧ್ಯವಾಗಬಹುದು. ಇದೇ ರೀತಿ ಪ್ರತಿ ಜನ್ಮಗಳಲ್ಲಿಯೂ ಪುಣ್ಯ ಕರ್ಮಗಳನ್ನು ಸಂಪಾದಿಸುತ್ತಾ ಅನಂತ ಪುಣ್ಯರಾಶಿಗಳನ್ನು ಗಳಿಸಿದವನಿಗೆ ಮಾತ್ರ 'ವಾಸುದೇವನೇ ಸರ್ವಸ್ವಾಮಿಯಾಗಿದ್ದಾನೆ. ಅವನೇ ಪರಿಪೂರ್ಣ ವಸ್ತುವಾಗಿದ್ದಾನೆ' ಎಂಬ ಸಾಕ್ಷಾತ್ಕಾರವು ಉಂಟಾಗುತ್ತದೆ.

ಅಂತಹ ಮಹಾತ್ಮನು ಬಹು ಲಕ್ಷ ಸಹಸ್ರ ಸಂಖ್ಯಾಕರಲ್ಲಿ ಯಾರೋ ಒಬ್ಬನು ಮಾತ್ರ. ಎಷ್ಟೋ ಜನರು ಆಸ್ತಿಕರು ಕಾಣಿಸುತ್ತಾರೆ. ಆದರೂ ಆವಾವ ವಿಷಯಕಾಮಗಳಿಂದ ಉತ್ತಮವಾದ ಜ್ಞಾನ ಇಲ್ಲದಂತವರಾಗಿ ಆವಾವ ಕಾಮಗಳ ಲಾಭಕ್ಕೋಸ್ಕರ ಇತರ ದೇವತೆಗಳನ್ನು ಬಹು ನಿಯಮಗಳ ಅನುಷ್ಠಾನ ಮಾಡುತ್ತಾ ಪೂಜಿಸುತ್ತಾರೆ. ಅವರ ಹಿಂದಿನ ಜನ್ಮದ ಸಂಸ್ಕಾರವೇ ಈ ತರಹದ ಪ್ರವೃತ್ತಿಗೆ ಕಾರಣವಾಗಿದೆ.

ಹೀಗೆ ಇತರ ದೇವತೆಗಳನ್ನು ಪೂಜಿಸತಕ್ಕವರು ಇದೇ ತರಹದ ಪೂಜೆಗೇನೇ ಅರ್ಹರಾಗಿದ್ದಾರೆ. ಅವರಿಗೆ ಈ ತರಹದ ಪೂಜೆಯಲ್ಲಿಯೇ

ಅಚಲವಾದ ಶ್ರದ್ಧೆಯನ್ನು ಕೊಟ್ಟು, ಆ ದೇವತೆಗಳಿಗೆ ಅವರು ಮಾಡುವ ಪೂಜೆ-ಯನ್ನು ಆ ದೇವತೆಗಳ ಅಂತರ್ಯಾಮಿಯಾದ ನಾನೇ ಸ್ವೀಕರಿಸಿ ಆಯಾಯ ಫಲಗಳನ್ನು ಕೊಡುತ್ತೇನೆ. ಆ ಫಲವೆಲ್ಲವೂ ಕೊನೆಯುಳ್ಳದ್ದು. ಅನಂತವಾದದ್ದಲ್ಲ. ಆ ದೇವತೆಗಳನ್ನು ಪೂಜೆ ಮಾಡಿದವರು ಆಯಾ ದೇವತೆಗಳ ಸಮೀಪಕ್ಕೆ ಹೋಗಿ, ಪುನಃ ಕೆಲವು ಕಾಲದ ನಂತರ ತಿರುಗಿ ಭೂಮಿಗೆ ಬರುತ್ತಾರೆ. ನನ್ನ ಭಕ್ತರು ಹಾಗಲ್ಲ. ಅವರು ಏನು ಅಪೇಕ್ಷೆ ಮಾಡುತ್ತಾರೋ ಅದೆಲ್ಲವು ಅವರಿಗೆ ಸಿಗುತ್ತದೆ. ಕೊನೆಗೆ ನನ್ನನ್ನೇ ಹೊಂದುತ್ತಾರೆ. ಮತ್ತೆ ಹಿಂತಿರುಗಿ ಬರುವುದಿಲ್ಲ.

ಆ ಭಕ್ತರು ಪ್ರತಿಯೊಂದು ಕರ್ಮಾನುಷ್ಠಾನದಲ್ಲಿ ಸ್ವಾಮಿಯಾದ ನನ್ನನ್ನೇ ಸ್ಮರಿಸುತ್ತ ನನ್ನ ಪ್ರೀತ್ಯರ್ಥವಾಗಿಯೇ ಆ ಕರ್ಮವನ್ನು ಅನುಷ್ಠಾನ ಮಾಡುತ್ತಾರೆ. ನನ್ನಲ್ಲಿಯೇ ಆ ಕರ್ಮವನ್ನು ಅರ್ಪಿಸುತ್ತಾರೆ. ಇತರ ದೇವತೆಗಳನ್ನು ನನ್ನ ಪರಿವಾರವೆಂದು ಭಾವಿಸಿ ಅವರವರ ತಾರತಮ್ಯಾನುಗುಣವಾದ ಭಕ್ತಿಯನ್ನು ಮಾಡುತ್ತಾರೆ. ಇದೇ ಶಾಸ್ತ್ರಸಮ್ಮತವಾದ ಮಾರ್ಗ.

ಇನ್ನು ಕೆಲವರು ನನ್ನನ್ನೇ ಜೀವನೆಂದು ತಿಳಿಯುವ ಮೂಲಕ ನನ್ನನ್ನು ದ್ವೇಷ ಮಾಡುತ್ತಾರೆ. ವಾಸ್ತವಿಕವಾಗಿ ನಾನು ಯಾರಿಂದಲೂ ಸಂಪೂರ್ಣವಾಗಿ ತಿಳಿದುಕೊಳ್ಳಲಿಕ್ಕೆ ಶಕ್ಯನಲ್ಲ. ಅಂತಹ ನನಗೆ ಅಲ್ಪರಾದ ಜೀವರಿಂದ ಐಕ್ಯವು ಎಷ್ಟು ಮಾತ್ರಕ್ಕೂ ಇರುವುದಿಲ್ಲ. ಆದರೆ ಇದನ್ನು ತಿಳಿಯದವರು ಐಕ್ಯವನ್ನು ಉಪಾಸನೆ ಮಾಡುತ್ತಾರೆ. ಇದು ನನ್ನ ದ್ವೇಷವೇ ಆಗಿದೆ. ಈ ತರಹದ ದ್ವೇಷ ಮಾಡಿದರೂ ನನಗೆ ಯಾವ ತರಹದ ಮನಃಖೇದವೂ ಇಲ್ಲ. ಯಾಕೆಂದರೆ ನಾನೇ ಅಂಥ ವಿಪರೀತ ಜ್ಞಾನವನ್ನು ಅವರ ಯೋಗ್ಯತೆಗೆ ಅನುಗುಣವಾಗಿ ಅವರಿಗೆ ಕೊಟ್ಟಿದ್ದೇನೆ.

ಎಲ್ಲ ಜೀವರುಗಳಿಗೂ ನನಗೂ ಮಧ್ಯದಲ್ಲಿ ಪರದೆಯಂತೆ ಪ್ರಕೃತಿಯೆಂಬ ಆವರಣವು ಇರುವುದಾದರೆ, ಜೀವರಿಗೆ ಹೇಗೆ ನನ್ನ ಜ್ಞಾನವು ಬರುವುದಿಲ್ಲವೋ ಹಾಗೆ ನನಗೆ ಇತರ ಜೀವರುಗಳ ಜ್ಞಾನ ಇಲ್ಲವೆಂದು ತಿಳಿಯಬೇಡ. ನಾನು ನನ್ನ ಶಕ್ತಿಯಿಂದ ಎಲ್ಲವನ್ನು ತಿಳಿದುಕೊಂಡಿದ್ದೇನೆ. ಜೀವನು ಮಾತ್ರ ನನ್ನನ್ನು ತಿಳಿದುಕೊಂಡಿಲ್ಲ. ಆ ವಿಪರೀತ ಜ್ಞಾನಕ್ಕೆ ಕಾಮಕ್ರೋಧಾಧಿಗಳು ಕೂಡ ಅವಾಂತರ ಕಾರಣಗಳಾಗಿವೆ.

ಯಾರಿಗೆ ತಮ್ಮ ಪಾಪದ ರಾಶಿಯು ನಾಶವಾಗಿ ಪರಿಪಕ್ವಾವಸ್ಥೆಯು ಬಂದಿರುತ್ತದೋ ಅವರು ಕಾಮಕ್ರೋಧಗಳಿಂದ ಮುಕ್ತರಾಗಿ ನನ್ನನ್ನೇ ದೃಢ ಸಂಕಲ್ಪದಿಂದ ಏಕಾದಶ್ಯಾದಿ ಉಪವಾಸಾದಿ ವ್ರತಗಳನ್ನು ಅನುಷ್ಠಾನ ಮಾಡುತ್ತ ಭಜನೆ ಮಾಡುತ್ತಾರೆ. ಕೆಲವರು ಜರಾಮರಣಾದಿಗಳಿಂದ ಬಿಡುಗಡೆಯಾಗಿ ಶಾಶ್ವತ ಆನಂದಾವಿರ್ಭಾವ ಎಂಬ ಫಲಲಾಭವಾಗಬೇಕೆಂದು ನನ್ನನ್ನು ಆಶ್ರಯಿಸಿ ಪ್ರಯತ್ನ ಮಾಡುತ್ತಾರೆ. ಏಕಾಂತ ಭಕ್ತರು ಅಂಥ ಮೋಕ್ಷವನ್ನು ಸಹ ಅಪೇಕ್ಷಿಸದೆ ಕೇವಲ ನನ್ನ ಪ್ರೀತಿಯನ್ನೇ ಉದ್ದೇಶಿಸಿ ಪ್ರಯತ್ನ ಮಾಡುತ್ತಾರೆ. ಅವರು ಉತ್ತಮಾ-ಧಿಕಾರಿಗಳು.

ಈ ಎರಡು ಅಧಿಕಾರಿಗಳು ಕೂಡ ಪರಬ್ರಹ್ಮ, ಅಧ್ಯಾತ್ಮ, ಅಧಿಭೂತ, ಅಧಿದೈವ, ಮತ್ತು ಅಧಿಯಜ್ಞರನ್ನು ಸರಿಯಾಗಿ ತಿಳಿಯುತ್ತಾರೆ. ಯಾವ ಜನ್ಮದಲ್ಲಿ ಪ್ರಾರಬ್ಧ ಕರ್ಮದ ಅವಸಾನವಾಗುತ್ತದೋ ಆವಾಗ ಸಾಯುವ ಕಾಲಕ್ಕೆ ನನ್ನನ್ನು ಸ್ಮರಿಸುತ್ತಾರೆ. ಇದರಿಂದ ಅವರಿಗೆ ಮೋಕ್ಷವಾಗುತ್ತದೆ. ಇಲ್ಲಿಗೆ ಏಳನೆ ಅಧ್ಯಾಯದ ಉಪನ್ಯಾಸವು ಮುಗಿಯಿತು. (ಹದಿನೈದನೇ ದಿನದ ಉಪನ್ಯಾಸವು ಮುಗಿಯಿತು.)

***

# ಎಂಟನೆಯ ಅಧ್ಯಾಯ

ಅರ್ಜುನನು, "ಬ್ರಹ್ಮ, ಅಧ್ಯಾತ್ಮ, ಕರ್ಮ, ಅಧಿಭೂತ, ಅಧಿದೈವ ಮತ್ತು ಅಧಿಯಜ್ಞಗಳ ಅರ್ಥವನ್ನು ವಿವರಣ ಮಾಡು. ಹಾಗೆಯೇ ಸಾಯುವ ಕಾಲಕ್ಕೆ ನಿನ್ನನ್ನು ಹೇಗೆ ಸ್ಮರಿಸಬೇಕು? ಯಾಕೆ ಸ್ಮರಿಸಬೇಕು? ಎಂಬುದನ್ನು ಉಪದೇಶ ಮಾಡು" ಎಂದು ಶ್ರೀಕೃಷ್ಣನನ್ನು ಪ್ರಾರ್ಥಿಸಿದನು.

ಶ್ರೀಕೃಷ್ಣನು ಉಪದೇಶ ಮಾಡುತ್ತಾನೆ: "ಸರ್ವತ್ರ ವ್ಯಾಪ್ತವಾದ ಸ್ವರೂಪವನ್ನೇ ಬ್ರಹ್ಮನೆಂದು ಹೇಳುತ್ತಾರೆ. ದೇಹಾಂತರ್ಗತ ಭಗವದ್ರೂಪವೇ ಅಧಿಯಜ್ಞ. ಅಧ್ಯಾತ್ಮನೆಂದರೆ ಜೀವ. ಅಧಿಭೂತವೆಂದರೆ ನಾಶಶೀಲವಾದ ದೇಹೇಂದ್ರಿಯಾದಿ ವಸ್ತು. ಅಧಿದೈವತವೆಂದರೆ ಸಕಲ ಜೀವೋತ್ತಮರಾದ ಬ್ರಹ್ಮದೇವರು. ಕರ್ಮವೆಂದರೆ ಪರಮಾತ್ಮನ ಜಗತ್ಸೃಷ್ಟ್ಯಾದಿ ವ್ಯಾಪಾರ ಎಂದು ತಿಳಿ.

ಅಂತ್ಯಕಾಲದಲ್ಲಿ ನನ್ನನ್ನೇ ಸ್ಮರಿಸುತ್ತಾ ಶರೀರವನ್ನು ಪರಿತ್ಯಾಗ ಮಾಡಿದವನು ನನ್ನನ್ನೇ ಹೊಂದುತ್ತಾನೆ. ಸಾಯುವ ಕಾಲಕ್ಕೆ ಯಾವವಸ್ತುವನ್ನು ಸ್ಮರಿಸುತ್ತಾನೋ ಅವನು ಅದನ್ನೇ ಹೊಂದುತ್ತಾನೆ."

ಇದಕ್ಕೆ ದೃಷ್ಟಾಂತ: ಭರತ ಮಹಾರಾಜನು ಧರ್ಮದಿಂದ ರಾಜ್ಯ ಪರಿಪಾಲನ ಮಾಡಿ ವಿರಕ್ತನಾಗಿ ಎಲ್ಲವನ್ನು ಪರಿತ್ಯಾಗ ಮಾಡಿ ಪುಲಹಾಶ್ರಮದಲ್ಲಿ ವಾಸ ಮಾಡುತ್ತಾ ದೇವರನ್ನು ಭಕ್ತಿಪೂರ್ವಕವಾಗಿ ಆರಾಧನ ಮಾಡುತ್ತಾ ಇರುವಾಗ, ಒಂದು ದಿವಸ ಗರ್ಭಿಣಿಯಾದ ಒಂದು ಹೆಣ್ಣು ಜಿಂಕೆಯು ಆ ಆಶ್ರಮಕ್ಕೆ ನೀರು ಕುಡಿಯಲಿಕ್ಕಾಗಿ ಬಂದು ನೀರಿಗಿಳಿದು ನೀರು ಕುಡಿಯುತ್ತಿತ್ತು. ಸಿಂಹದ ಗರ್ಜನೆಯನ್ನು ಕೇಳಿ ಭಯದಿಂದ ಆ ಜಿಂಕೆಯು ಗರ್ಭ ವಿಮೋಚನೆಯಾಗಿ ಆಗ ಹುಟ್ಟಿದ ಶಿಶುವು ನೀರಿನ ಪ್ರವಾಹದಲ್ಲಿ ಹೋಗುತ್ತಿರುವುದನ್ನು ನೋಡಿದ ಕೃಪಾಳುವಾದ ರಾಜನು ಆ ಶಿಶುವನ್ನು ಸ್ವೀಕರಿಸಿ ಬಹು ಪ್ರೇಮದಿಂದ ಸಾಕಿದನು. ಅದೇ ಜಿಂಕೆಯಲ್ಲಿ ಸರ್ವದಾ ಆಸಕ್ತನಾಗಿ ಸಾಯುವ ಕಾಲಕ್ಕೆ ಅದನ್ನೇ ಸ್ಮರಿಸಿ ದೇಹವನ್ನು ಬಿಟ್ಟನು. ಇದರಿಂದ ಆತನಿಗೆ ಮುಂದಿನ ಜನ್ಮವು ಜಿಂಕೆಯ

ಯೋನಿಯಲ್ಲಿ ಆಯಿತು. ಇದರಂತೆ ಯಾರು ಯಾವುದನ್ನು ಸ್ಮರಿಸುತ್ತಾರೋ, ಅವರು ಬರುವ ಜನ್ಮದಲ್ಲಿ ಅದನ್ನೇ ಹೊಂದುತ್ತಾರೆಂದು ತಿಳಿದುಕೊಳ್ಳಬೇಕು.

"ಎಲೋ ಅರ್ಜುನಾ! ಸರ್ವಕಾಲದಲ್ಲಿ ನನ್ನನ್ನೇ ಸ್ಮರಣೆ ಮಾಡುತ್ತಾ ನನ್ನ ದೃಢವಾದ ಸಂಸ್ಕಾರವುಳ್ಳವನಾಗಿ ಇದ್ದರೆ ಅಂತ್ಯಕಾಲದಲ್ಲಿ ನನ್ನನ್ನೇ ಸ್ಮರಿಸ-ಬಹುದು. ಇಲ್ಲವಾದರೆ ಆಗ ಸ್ಮರಣೆ ಬರುವುದು ಅಸಾಧ್ಯವಾದೀತು. ಪರೀಕ್ಷೆಯಲ್ಲಿ ಸರಿಯಾಗಿ ಬರೆದರೆ ಪುರುಷನು ಪಾಸಾಗುತ್ತಾನೆ. ಪರೀಕ್ಷೆಯಲ್ಲಿ ಸರಿಯಾಗಿ ಬರೆಯಬೇಕಾದರೆ ಹಿಂದೆ ಅಭ್ಯಾಸ ಮಾಡಿದವನೇ ಆಗಿರಬೇಕು. ಇಲ್ಲವಾದರೆ ಪರೀಕ್ಷೆಯ ಸಮಯದಲ್ಲಿ ಬರೆಯಲು ಸಾಧ್ಯವಾಗಲಿಕ್ಕಿಲ್ಲ. ಇದೇ ರೀತಿ ಸರ್ವದಾ ಪರಮಾತ್ಮನ ಸ್ಮರಣೆ ಮಾಡುತ್ತಾ ಅಭ್ಯಾಸ ಮಾಡುತ್ತಿದ್ದರೆ ಮಾತ್ರ ಅಂತ್ಯಕಾಲದಲ್ಲಿ ಸ್ಮರಣೆ ಮಾಡಲು ಸಾಧ್ಯವಾಗುತ್ತದೆ. 'ಅಂತ್ಯಕಾಲದಲ್ಲಿ ಮರಣದ ಪ್ರಯುಕ್ತವಾದ ದುಃಖವು ಇರುವಾಗ ಪರಮಾತ್ಮನ ಸ್ಮರಣೆಯು ಹೇಗೆ?' ಎಂದು ನೀನು ಕೇಳಬಹುದು. ಆದರೆ ಶರೀರಾಭಿಮಾನವನ್ನು ಬಿಟ್ಟು ಭಕ್ತಿಪೂರ್ವಕವಾಗಿ ನನ್ನ ಸ್ಮರಣೆ ಮಾಡಿಕೊಂಡವರಿಗೆ ಶರೀರವಿಯೋಗದಿಂದಲೂ ದುಃಖವಾಗು-ವುದಿಲ್ಲ.

ಪರಮಾತ್ಮನನ್ನು ಸಾಯುವಾಗಲೂ, ಇತರ ಕಾಲಕ್ಕೂ ಚಿಂತನ ಮಾಡುವ ಕ್ರಮ ಇದು: ಪರಮಾತ್ಮನು ಸರ್ವಜ್ಞನೂ, ಅನಾದಿಯೂ ಆಗಿದ್ದಾನೆ. ಎಲ್ಲರಿಗೂ ಶಾಸನ ಮಾಡುವನಾಗಿದ್ದಾನೆ. ಅಣುವಸ್ತುವಿಗಿಂತಲೂ ಅಣುವಾಗಿದ್ದಾನೆ. ಎಲ್ಲ ವಿಶ್ವಕ್ಕೂ ಧಾರಣಪೋಷಣ ಕರ್ತನಾಗಿದ್ದಾನೆ. ಸಂಪೂರ್ಣವಾಗಿ ತಿಳಿಕೊಳ್ಳಲು ಅಶಕ್ಯನಾಗಿದ್ದಾನೆ. ಉದಿಸಿ ಬರುವ ಸೂರ್ಯನಂತೆ ಪ್ರಕಾಶಮಾನವಾದ ಅಪ್ರಾಕೃತರೂಪ ಉಳ್ಳವನಾಗಿದ್ದಾನೆ – ಎಂಬುದಾಗಿ ಧ್ಯಾನ ಮಾಡಬೇಕು."

ಬ್ರಾಹ್ಮಣನಾದವನು ಗಾಯತ್ರಿ ಜಪವನ್ನು ಸರ್ವದಾ ವಿಶೇಷವಾಗಿ ಮಾಡಬೇಕೆಂದು ಶಾಸ್ತ್ರವಿದೆ. ಗಾಯತ್ರಿ ಜಪ ಮಾಡುವ ಕಾಲಕ್ಕೆ ಏನು ಧ್ಯಾನ ಮಾಡಬೇಕೋ ಅದನ್ನೇ ಶ್ರೀಕೃಷ್ಣನು ಸರ್ವದಾ ಧ್ಯಾನ ಮಾಡಬೇಕೆಂದು ಹೇಳುತ್ತಿದ್ದಾನೆ. '**ತತ್** = ತತತ್ವಾತ್ ತತ್, ಅಂದರೆ ಸರ್ವತ್ರ ವ್ಯಾಪ್ತನಾಗಿದ್ದಾನೆ.

**ಸವಿತುಃ** = ಷೂಞ್ ಪ್ರಾಣಿಪ್ರಸವನೇ ಎಂಬ ಧಾತುವಿನಿಂದ ಸಮಸ್ತ ಜಗತ್ಸೃಷ್ಟಿಕರ್ತನು. **ವರೇಣ್ಯಂ** = ಉತ್ತಮವಾದ (ವರ) ಸುಖರೂಪನು (ಣ) ಮತ್ತು ಜ್ಞಾನರೂಪನು (ಯ). **ಭರ್ಗಃ** = ಪೋಷಣಕರ್ತನು (ಭರ್) ಮತ್ತು ಚೇಷ್ಟಕನು (ಗ). **ದೇವಸ್ಯ** = ಕ್ರೀಡಾದಿ ಗುಣಪೂರ್ಣನು; **ಧೀಮಹಿ** = ಇಂಥ ಪರಮಾತ್ಮನ ರೂಪವನ್ನು ಧ್ಯಾನ ಮಾಡುವ. **ಧಿಯೋ ಯೋ ನಃ ಪ್ರಚೋದಯಾತ್** = ಯಾವ ಪರಮಾತ್ಮನು ನಮ್ಮ ಬುದ್ಧಿಗಳಿಗೆ ಪ್ರೇರಕನಾಗಿದ್ದಾನೋ.' ಇಷ್ಟು ಗಾಯತ್ರಿ ಅರ್ಥ.

ಇಲ್ಲಿ ಪಂಚಭೇದಗಳು ಹೇಳಲ್ಪಟ್ಟಿವೆ. ನಮ್ಮ ಬುದ್ಧಿಗೆ ಪರಮಾತ್ಮನು ಪ್ರೇರಕನು ಎಂದು ಹೇಳುವಾಗ ನಮ್ಮ ಬುದ್ಧಿಗಳು ಪ್ರೇರ್ಯರು, ಆತನು ಪ್ರೇರಕನೆಂದು ಹೇಳುವ ಮೂಲಕ ಜಡ–ಈಶ್ವರ ಭೇದವು ಹೇಳಲ್ಪಟ್ಟಿತು. ನಃ ಎಂಬ ಶಬ್ದವು ನಮ್ಮ ಎಂಬ ಅರ್ಥವನ್ನು ಹೇಳುತ್ತದೆ. 'ನಮ್ಮ' ಎಂಬಲ್ಲಿ ಬಹುವಚನ ಇರುವುದರಿಂದ ಜೀವರುಗಳ ಪರಸ್ಪರ ಭೇದವು ಹೇಳಲ್ಪಟ್ಟಿತು. ಧಿಯಃ ಎಂಬ ಶಬ್ದವು ಬುದ್ಧಿಗಳನ್ನು ಎಂಬ ಅರ್ಥವನ್ನು ಹೇಳುತ್ತದೆ. ಬುದ್ಧಿಗಳನ್ನು ಎಂಬಲ್ಲಿ ಬಹುವಚನವಿರುವುದರಿಂದ ಜಡಗಳ ಪರಸ್ಪರ ಭೇದವು ಹೇಳಲ್ಪಟ್ಟಿತು. ನಃ ಧಿಯಃ = 'ನಮ್ಮ ಬುದ್ಧಿಗಳನ್ನು' ಎಂಬುದಾಗಿ ಜೀವ ಜಡಗಳಿಗೆ ಭೇದವು ಹೇಳಲ್ಪಟ್ಟಿತು. ಈ ರೀತಿ ಪಂಚಭೇದವು ಹೇಳಲ್ಪಟ್ಟಿತು.

ಪರಮಾತ್ಮನು ನಿರ್ಗುಣನಲ್ಲ. ಗುಣಪರಿಪೂರ್ಣನೆಂದು ಈ ಗಾಯತ್ರಿಯಲ್ಲಿ ಹೇಳಲ್ಪಡುತ್ತದೆ. ಇಲ್ಲಿ ಸರ್ವತ್ರ ವ್ಯಾಪ್ತಿ, ಸಕಲ ಜಗತ್ತಿನ ಸೃಷ್ಟಿಕರ್ತೃತ್ವ, ಸರ್ವ ಜಗತ್ಪೋಷಕತ್ವ, ಸರ್ವಚೇಷ್ಟಕತ್ವ, ಪೂರ್ಣಜ್ಞಾನ, ಪೂರ್ಣಾನಂದ, ಕ್ರೀಡಾದಿ ಗುಣಗಳು, ಸರ್ವಧ್ಯೇಯತ್ವ, ಸರ್ವಬುದ್ಧಿಪ್ರೇರಕತ್ವ ಇತ್ಯಾದಿ ಗುಣಗಳು ಹೇಳಲ್ಪಟ್ಟಿವೆ. ಆದುದರಿಂದ ಪರಮಾತ್ಮನು ಗುಣಪರಿಪೂರ್ಣನೆಂದು, ನಿರ್ಗುಣನು ಅಲ್ಲವೆಂದು ಅಭಿಪ್ರಾಯವಾಯಿತು. ಈ ಗಾಯತ್ರಿಯು ಸಕಲ ವೇದಗಳಿಗೆ ಮೂಲವಾದದು. ಈ ಗಾಯತ್ರಿಯ ವ್ಯಾಖ್ಯಾನವೇ ಸಮಸ್ತವೇದಗಳು. ಆದ್ದರಿಂದ ಸಮಸ್ತ ವೇದಗಳ ಸಾರವು ಇದೇ. ಇದಕ್ಕೆ ವಿರುದ್ಧಗಳಾಗಿ ಹೇಳುವ ವಾದಿಗಳ ಮತವು ಗಾಯತ್ರಿಗೂ, ಅದರ

ವ್ಯಾಖ್ಯಾನರೂಪವಾದ ವೇದಕ್ಕೂ ಸಮ್ಮತವಲ್ಲ ಎಂಬುದಾಗಿ ಸುಲಭವಾಗಿ ಒಂದು ಗಾಯತ್ರಿಯ ಅರ್ಥವನ್ನು ತಿಳಿದುಕೊಂಡ ಮಾತ್ರದಿಂದಲೇ ತಿಳಿಯಲು ಶಕ್ಯವಾಗಿದೆ. ಈ ಗಾಯತ್ರಿಗೆ ಇದಕ್ಕೆ ವಿರುದ್ಧವಾಗಿ ಜೀವಬ್ರಹ್ಮೈಕ್ಯ ಮತ್ತು ನಿರ್ಗುಣತ್ವ ಪರವಾಗಿ ಅರ್ಥ ಮಾಡಲು ಅವಕಾಶವೇ ಇಲ್ಲ. ಇಷ್ಟು ಸ್ಪಷ್ಟವಾಗಿ, ಹಿಂದೆ ಹೇಳಿದ ರೀತಿಯಿಂದ ಈ ಗಾಯತ್ರಿ ಮಂತ್ರವು ಪಂಚಭೇದವನ್ನು ಗುಣಪೂರ್ಣತ್ವವನ್ನು ಹೇಳುತ್ತದೆ.

ಇದೇ ಗಾಯತ್ರ್ಯರ್ಥವನ್ನೇ ಧ್ಯಾನಕ್ಕಾಗಿ “ಕವಿಂ ಪುರಾಣಂ” ಎಂಬ ಶ್ಲೋಕದಿಂದ ಶ್ರೀಕೃಷ್ಣನು ವಿವರಿಸುತ್ತಾನೆ. ‘ಅನುಶಾಸಿತಾರಮ್’ ಅಂದರೆ ಪ್ರೇರಕನೆಂದರ್ಥ. ಅದು ಧಿಯೋ ಯೋ ನಃ ಪ್ರಚೋದಯಾತ್ ಎಂಬುದರ ವಿವರಣೆ. ಭರ್ಗಃ ಎಂಬಲ್ಲಿ ಸರ್ವಧಾರಕತ್ವಪೋಷಕತ್ವಗಳು ಹೇಳಲ್ಪಟ್ಟಿದೆ. ಅದರ ವಿವರಣೆ “ಸರ್ವಸ್ಯ ಧಾತಾರಂ” ಎಂಬುದಾಗಿ. ವರೇಣ್ಯಂ ಎಂಬುದರಿಂದ ಉತ್ತಮ ಸುಖ, ಉತ್ತಮ ಜ್ಞಾನವು ಪರಮಾತ್ಮನಿಗೆ ಹೇಳಲ್ಪಟ್ಟಿದೆ. ಕವಿಂ ಎಂಬುದರಿಂದ ಪೂರ್ಣಜ್ಞಾನಸ್ವರೂಪನು ಎಂದು ಅದರ ವ್ಯಾಖ್ಯಾನವಾಗಿ ಹೇಳಲ್ಪಟ್ಟಿದೆ. ಗಾಯತ್ರಿ ಜಪ ಮಾಡುವ ಕಾಲಕ್ಕೆ ಉದಯಿಸಿ ಬರುವ ಸೂರ್ಯನಂತೆ ಇರತಕ್ಕ ಪರಮಾತ್ಮನನ್ನು ಧ್ಯಾನ ಮಾಡಬೇಕೆಂದು ಗಾಯತ್ರಿಯ ಧ್ಯಾನಶ್ಲೋಕದಲ್ಲಿ ಇದೆ. ಅದನ್ನೇ “ಆದಿತ್ಯವರ್ಣಂ” ಎಂಬ ಶ್ಲೋಕದಿಂದ ಪರಮಾತ್ಮನು ಹೇಳುತ್ತಾನೆ. ಈ ರೀತಿಯಾಗಿ ಗಾಯತ್ರ್ಯರ್ಥದ ಧ್ಯಾನವೇ ಸಮಸ್ತ ಪುರುಷಾರ್ಥಪ್ರದವೆಂದು ಶ್ರೀಕೃಷ್ಣನ ಅಭಿಪ್ರಾಯವು.

“ಯೋಗಿಗಳು ಎರಡು ಪ್ರಕಾರ ಇದ್ದಾರೆ: ರಾಜಯೋಗಿಗಳು ಮತ್ತು ಹಠಯೋಗಿ-ಗಳು ಎಂದು. ಹಠಯೋಗಿಗಳೆಂದರೆ ಪ್ರಾಣಾಯಾಮಾದಿಗಳಿಂದ ವಾಯುಜಯವನ್ನು ಮಾಡಿದವರು. ಇವರಿಗೆ ಸ್ವಲ್ಪ ಜ್ಞಾನ ಅಪೂರ್ಣವಾಗಿದ್ದರೂ ಬೇಗನೆ ಅಲ್ಪವಾದ ಮುಕ್ತಿಯು ಸಿಗುತ್ತದೆ. ರಾಜಯೋಗಿಗಳು ಶಾಸ್ತ್ರಶ್ರವಣ, ಮನನ, ಧ್ಯಾನಗಳಿಂದ ಕ್ರಮಶಃ ಪರಮಾತ್ಮನಲ್ಲಿ ಮನಸ್ಸನ್ನಿಡುತ್ತ ಬಹುಕಾಲ ಈ ತರಹ ಸಾಧನ ಮಾಡಿ ತಮ್ಮ ಯೋಗ್ಯವಾದ ಪೂರ್ಣಜ್ಞಾನವನ್ನು ಹೊಂದಿ ಪೂರ್ಣವಾದ ಮುಕ್ತಿಯನ್ನು ಪಡೆಯುತ್ತಾರೆ.

ಈ ತರಹ ಎರಡು ಯೋಗಿಗಳ ಮಧ್ಯದಲ್ಲಿ ಹಠಯೋಗಿಯಾದವನು ಎಪ್ಪತ್ತೆರಡು ಸಹಸ್ರ ನಾಡಿಗಳ ವಾಯುಸಂಚಾರದ್ವಾರಗಳನ್ನು ಸಂಯಮನ ಮಾಡಿ ಮನಸ್ಸನ್ನು ಪರಮಾತ್ಮನಲ್ಲಿ ನಿಲ್ಲಿಸಿ ತನ್ನ ಪ್ರಾಣವನ್ನು ಶಿರಸ್ಸಿನಲ್ಲಿ ಧಾರಣ ಮಾಡಿ ಓಂ ಎಂದು ಏಕಾಕ್ಷರವುಳ್ಳ ಮಂತ್ರವನ್ನು ಹೇಳುತ್ತ ನನ್ನನ್ನು ಸ್ಮರಿಸುತ್ತ ದೇಹವನ್ನು ಬಿಟ್ಟು ಉತ್ತಮ ಗತಿಯಾದ ನನ್ನನ್ನು ಹೊಂದುತ್ತಾನೆ.

ಸಾಯುವ ಕಾಲಕ್ಕೆ ನೆನೆಯಬೇಕಾದ ಪರಮಾತ್ಮನ ರೂಪವನ್ನು ಈ ತರಹ ತಿಳಿದುಕೊಳ್ಳಬೇಕು: ಸಮಸ್ತ ವೇದಗಳಿಂದ ಆ ಪರಮಾತ್ಮನು ವೇದ್ಯನಾಗಿದ್ದಾನೆ. ವೇದಗಳನ್ನು ತಿಳಿದವರು ಆ ಪರಮಾತ್ಮನನ್ನು ಹೇಳುತ್ತಾರೆ. ವಿಷಯರಾಗವನ್ನು ಬಿಟ್ಟ ಸನ್ಯಾಸಿಗಳು ಆ ಪರಮಾತ್ಮನನ್ನು ಪ್ರವೇಶ ಮಾಡುತ್ತಾರೆ. ಅದಕ್ಕಾಗಿ ಬ್ರಹ್ಮಚರ್ಯ ವ್ರತವನ್ನು ಆಚರಿಸುತ್ತಾರೆ. ಇಷ್ಟು ಶ್ರೇಷ್ಠವಾದದ್ದು ಪರಮಾತ್ಮನ ಸ್ವರೂಪ. ಇಂಥ ಸ್ವರೂಪವನ್ನು ಸ್ಮರಣೆ ಮಾಡಬೇಕೆಂದು ನಿನಗೆ ಹೇಳುತ್ತಿದ್ದೇನೆ. ನನ್ನನ್ನು ಸ್ಮರಿಸಿದವನಿಗೇನೇ ನನ್ನ ಪ್ರಾಪ್ತಿಯಾಗಿ ಪುನರ್ಜನ್ಮ ಇಲ್ಲದಂತಾಗಿ ಮೋಕ್ಷವೆಂಬ ಸಿದ್ಧಿಯು ದೊರಕುತ್ತದೆ. ನನ್ನ ಲೋಕವನ್ನು ಬಿಟ್ಟು ಪುನಃ ಯಾವ ಲೋಕಕ್ಕೆ ಹೋದರೂ ಸಂಸಾರಕ್ಕೆ ಬರಬೇಕಾಗುತ್ತದೆ. ನನ್ನನ್ನು ಹೊಂದಿದರೆ ಮಾತ್ರ ಪುನರ್ಜನ್ಮವಿಲ್ಲ. ನನ್ನ ಮಹಿಮೆಯೇ ಅದಕ್ಕೆ ಕಾರಣ.

ನನ್ನ ಮಹಿಮೆಯು ಎಂಥದೆಂದರೆ, ಈ ಮನುಷ್ಯರ ಒಂದು ವರ್ಷವು ದೇವತೆಗಳಿಗೆ ಒಂದು ದಿವಸವಾಗುತ್ತದೆ. ಈ ದೇವತೆಗಳ ಮುನ್ನೂರಾ ಅರವತ್ತು ದಿವಸಗಳು ಸೇರಿ ದೇವತೆಗಳ ಒಂದು ವರ್ಷವಾಗುತ್ತದೆ. ದೇವತೆಗಳ ಇಂತಹ ಹನ್ನೆರಡು ಸಾವಿರ ವರ್ಷಗಳಾದರೆ ಕೃತ, ತ್ರೇತಾ, ದ್ವಾಪರ ಮತ್ತು ಕಲಿಯಿಂದ ಕೂಡಿದ ಒಂದು ಚತುರ್ಯುಗವಾಗುತ್ತದೆ. ಇಂತಹ ನಾಲ್ಕು ಯುಗಗಳು ಸಹಸ್ರವಾದರೆ ಬ್ರಹ್ಮದೇವರ ಒಂದು ಹಗಲು ಆಗುತ್ತದೆ. ಈ ಲೆಕ್ಕದಿಂದ ಬ್ರಹ್ಮ ದೇವರಿಗೆ ನೂರು ವರ್ಷವಾದರೆ ಅದು ನನಗೆ ಹಗಲು. ಆ ಹಗಲಿನಲ್ಲಿ ನಾನು ಸೃಷ್ಟಿ ಮಾಡುತ್ತೇನೆ. ಇಷ್ಟೇ ನೂರು ವರುಷ ಪ್ರಳಯಕಾಲ ಅದು ನನಗೆ ರಾತ್ರಿ ಎಂದು ಹೇಳಲ್ಪಡುತ್ತದೆ. ಈ ಹಗಲು ರಾತ್ರಿಯ ಲೆಕ್ಕದಿಂದ ನನಗೆ ಮಾತ್ರ ಆಯುಷ್ಯವನ್ನು ಲೆಕ್ಕಮಾಡತಕ್ಕದ್ದಲ್ಲ. ನಾನು ಅನಾದಿಯು, ಅನಂತನು.

ಈ ತರಹದ ಪ್ರತಿ ದಿವಸವೂ ಬೆಳಗಾಗುವಾಗ ಸೃಷ್ಟಿಯನ್ನು, ರಾತ್ರಿ ಕಾಲದಲ್ಲಿ ಸಂಹಾರವನ್ನು ಮಾಡುತ್ತ ಯಾವಾಗಲೂ ನಾನು ಒಂದೇ ರೀತಿಯಾಗಿ ಇರುತ್ತೇನೆ. ನನ್ನ ಅಧೀನರಾದ ಪ್ರಾಣಿಗಳು ಹುಟ್ಟುತ್ತ ಸಾಯುತ್ತ ಇರುತ್ತಾರೆ. ಈ ಎಲ್ಲ ವಸ್ತುಗಳ ದೆಸೆಯಿಂದಲೂ ಬೇರೆಯಾದವನು ನಾನು. ಯಾವ ವಸ್ತುಗಳಿಗೆ ನಾಶವಾದರೂ ನನಗೆ ನಾಶವಿಲ್ಲ. ಆದ್ದರಿಂದ ನನಗೆ ಅಕ್ಷರ ಎಂದು ಹೆಸರು. ನಾನೇ ಉತ್ತಮಗತಿ ಸ್ವರೂಪನಾಗಿದ್ದೇನೆ. ನನ್ನ ಲೋಕವೇ ಪುನರಾವೃತ್ತಿ ರಹಿತವಾದ ಉತ್ತಮ ಲೋಕವಾಗಿದೆ. ಅಂಥ ನನ್ನನ್ನು ಹೊಂದಬೇಕಾದರೆ ಶ್ರೇಷ್ಠವಾದ ಭಕ್ತಿ ಒಂದೇ ಸಾಧನವು.

ಇನ್ನು ಸಾಯುವ ಕಾಲಕ್ಕೆ ಪರಬ್ರಹ್ಮ ಪ್ರಾಪ್ತಿಯ ಮಾರ್ಗವನ್ನು ಸ್ಮರಿಸಬೇಕು. ಆ ಮಾರ್ಗವನ್ನು ಹೇಳುತ್ತೇನೆ, ಕೇಳು: ವಹ್ನಿದೇವನ ಮಕ್ಕಳು ಇಬ್ಬರು. ಅಗ್ನಿ ಮತ್ತು ಜ್ಯೋತಿಸ್ಸು ಎಂಬುದಾಗಿ. ಆ ಜ್ಯೋತಿಸ್ಸಿಗೆ ಅರ್ಚಿ ಎಂತಲೂ ಹೆಸರಿದೆ. ಮೊದಲು ಈ ದೇವತೆಗಳ ಲೋಕಕ್ಕೆ ಹೋಗಬೇಕು. ಅದರ ಮೇಲೆ ಹಗಲಿಗೆ ಅಭಿಮಾನಿಯ ದೇವತೆಯ ಲೋಕ, ಶುಕ್ಲಪಕ್ಷಾಭಿಮಾನಿ ದೇವತೆಯ ಲೋಕ, ಉತ್ತರಾಯಣ ಕಾಲಾಭಿಮಾನಿಯ ದೇವತೆಯ ಲೋಕಗಳನ್ನು ಕ್ರಮದಿಂದ ಹೊಂದಿ ಚತುರ್ಮುಖ ಬ್ರಹ್ಮದೇವರ ಲೋಕಕ್ಕೆ ಹೋಗಿ ಪ್ರಳಯಕಾಲದಲ್ಲಿ ಚತುರ್ಮುಖ ಬ್ರಹ್ಮದೇವರಿಂದ ಕೂಡಿ ಪರಮಾತ್ಮನನ್ನು ಹೊಂದುವುದು. ಈ ಮಾರ್ಗದಿಂದ ಹೋದವರಿಗೆ ಪುನರಾವೃತ್ತಿ ಇಲ್ಲ. ಈ ಮಾರ್ಗವು ಬ್ರಹ್ಮಸಾಕ್ಷಾತ್ಕಾರವಾದವರಿಗೆ ಮಾತ್ರ ಹೊಂದಲು ಸಾಧ್ಯವಾದದು. ಅವರು ಸಾಯುವ ಕಾಲಕ್ಕೆ ಈ ಮಾರ್ಗವನ್ನು ಸ್ಮರಿಸಬೇಕು.

ಇನ್ನೊಂದು ಕರ್ಮಿಗಳ ಮಾರ್ಗವಿದೆ. ಅದು ಹೀಗೆ: ಮೊದಲು ಧೂಮಾಭಿಮಾನಿ ದೇವತೆಯ ಲೋಕ, ದಕ್ಷಿಣಾಯನ ಕಾಲಾಭಿಮಾನಿ ದೇವತೆಯ ಲೋಕಗಳನ್ನು ಕ್ರಮದಿಂದ ಹೊಂದಿ ಚಂದ್ರಲೋಕಕ್ಕೆ ಹೋಗಿ ಸೇರುತ್ತಾರೆ. ಅಲ್ಲಿಂದ ಪುಣ್ಯ ಮುಗಿದ ಮೇಲೆ ವಾಪಸು ಭೂಮಿಗೆ ಬರುತ್ತಾರೆ.''

ದೇಹವನ್ನು ಪರಿತ್ಯಾಗ ಮಾಡಲು ಜ್ಞಾನಿಗಳಿಗೆ ಉತ್ತರಾಯಣಕಾಲವು ಶ್ರೇಷ್ಠವೆಂದು ಆವಾಗ ದೇಹ ಪರಿತ್ಯಾಗ ಮಾಡಿದಾಗ ಮೋಕ್ಷವಾಗುವದೆಂದು,

ದಕ್ಷಿಣಾಯನ ಕಾಲದಲ್ಲಿ ದೇಹ ಬಿಟ್ಟರೆ ಸ್ವರ್ಗ ಮಾತ್ರವೆಂದು ಲೋಕ ಪ್ರಸಿದ್ಧಿ ಇದೆ. ಇದರ ತತ್ವ ಹೀಗಿದೆ: 'ದಕ್ಷಿಣಾಯನ, ಉತ್ತರಾಯಣವೆಂದು ಹೆಸರುಳ್ಳ ಸೂರ್ಯರಶ್ಮಿಗಳು ದೇಹದೊಳಗಿರತಕ್ಕ ನಾಡಿಗಳಲ್ಲಿದ್ದಾವೆ. ಆ ಎರಡು ರಶ್ಮಿಗಳ ಪೈಕಿ ಉತ್ತರಾಯಣ ರಶ್ಮಿ ಸಂಬಂಧವಾದ ನಾಡಿಯಲ್ಲಿ ಸಂಚರಿಸುತ್ತ ಮೂರ್ಧನ್ಯ ಸ್ಥಾನಕ್ಕೆ ಜೀವನು ಬಂದು ಅಲ್ಲಿ ದೇಹವನ್ನು ಪರಿತ್ಯಾಗ ಮಾಡಿ ಹೋದರೆ ಬ್ರಹ್ಮಪ್ರಾಪ್ತಿ ಆಗುವುದು. ದಕ್ಷಿಣಾಯನ ರಶ್ಮಿ ನಾಡಿದ್ವಾರ ಉತ್ಕ್ರಮಣವಾದರೆ ಸ್ವರ್ಗ' ಎಂದು ಅದರ ರಹಸ್ಯವಾದ ಅರ್ಥ. ಉತ್ತರಾಯಣ ದಕ್ಷಿಣಾಯನ ಕಾಲಗಳು ಕೂಡ ಸಾಮಾನ್ಯ ಕಾರಣಗಳು ಹೊರತು ಮುಖ್ಯ ಕಾರಣಗಳಲ್ಲ. ದಕ್ಷಿಣಾಯನ ಕಾಲದಲ್ಲಿ ದೇಹ ಬಿಟ್ಟರೂ ಬ್ರಹ್ಮಜ್ಞಾನಿಗಳಿಗೆ ಮೋಕ್ಷ ಉಂಟೇ ಉಂಟು. ಉತ್ತರಾಯಣ ಕಾಲದಲ್ಲಿ ದೇಹ ಬಿಟ್ಟರೆ ಮೋಕ್ಷದಲ್ಲಿ ವಿಶೇಷ ಫಲ ಉಂಟೆಂದು ಅಭಿಪ್ರಾಯ. ಅದಕ್ಕಾಗಿ ಭೀಷ್ಮರು ಉತ್ತರಾಯಣ ಕಾಲದ ನಿರೀಕ್ಷೆ ಮಾಡಿದರು.

"ಎಲೋ ಅರ್ಜುನಾ! ಈ ವಿಷಯಗಳನ್ನು ನೀನು ಸರಿಯಾಗಿ ತಿಳಿದು ಎಲ್ಲಾ ಕಾಲದಲ್ಲಿ ಯೋಗಾಭ್ಯಾಸ ಮಾಡುತ್ತ ನನ್ನ ಸ್ಮರಣೆ ಮಾಡು. ಈ ಅಧ್ಯಾಯದಲ್ಲಿ ಹೇಳಿದ ವಿಷಯಗಳನ್ನು ತಿಳಿದರೆ ಸಮಸ್ತ ವೇದಗಳ, ಸಮಸ್ತ ಯಜ್ಞಗಳ, ತಪಸ್ಸು ಮತ್ತು ದಾನಗಳ ಪುಣ್ಯಫಲಕ್ಕಿಂತಲೂ ಹೆಚ್ಚಿನ ಪುಣ್ಯವನ್ನು ಹೊಂದಿ ಶ್ರೇಷ್ಠವಾದ ಸ್ಥಾನವನ್ನು ಯೋಗಿಯಾದವನು ಹೊಂದುತ್ತಾನೆ. (ಹದಿನಾರನೇ ದಿನದ ಉಪನ್ಯಾಸವು ಮುಗಿಯಿತು)

ಎಂಟನೇ ಅಧ್ಯಾಯವು ಇಲ್ಲಿಗೆ ಮುಗಿಯಿತು.

***

# ಒಂಭತ್ತನೆಯ ಅಧ್ಯಾಯ

ಶ್ರೀಕೃಷ್ಣ ಪರಮಾತ್ಮನು ಉಪದೇಶ ಮಾಡುತ್ತಾನೆ: "ಎಲೋ ಅರ್ಜುನಾ! ಜ್ಞಾನ ಮತ್ತು ವಿಶೇಷ ಜ್ಞಾನ ಇವುಗಳನ್ನು ನಿನಗೆ ಹೇಳುತ್ತೇನೆ. ಈ ಉಪದೇಶಕ್ಕೆ ಅಸೂಯೆ ಇಲ್ಲದವು ಮಾತ್ರ ಅರ್ಹ. ಒಳ್ಳೆ ಗುಣಗಳನ್ನು ಕೆಟ್ಟದ್ದನ್ನಾಗಿ ಭಾವಿಸುವಿದೇ ಅಸೂಯೆ. ಈ ದೋಷ ಇಲ್ಲದಿದ್ದವನೇ ಅಧಿಕಾರಿಯು. ಈ ದೋಷ ಉಳ್ಳವನಿಗೆ ಎಷ್ಟು ಒಳ್ಳೇ ಉಪದೇಶ ಮಾಡಿದರೂ ಅವನು ವಿಪರೀತವಾಗಿ ಭಾವಿಸುವ ಪ್ರಯುಕ್ತ ಆ ಉಪದೇಶವು ವ್ಯರ್ಥವಾಗಬಹುದು. ನೀನು ಆ ದೋಷ ಉಳ್ಳವನಲ್ಲ. ನೀನು ನನ್ನ ಉಪದೇಶದಂತೆ ತಿಳಿದು ಅನುಷ್ಠಾನ ಮಾಡಿ ಮೋಕ್ಷವನ್ನು ಪಡೆಯತಕ್ಕ ಅಧಿಕಾರಿಯಾಗಿದ್ದಿ.

ನಾನು ನಿನಗೆ ಉಪದೇಶ ಕೊಡತಕ್ಕ ವಿದ್ಯೆ ರಾಜವಿದ್ಯೆ– ಅಂದರೆ ರಾಜನು ಹೇಗೆ ಸರ್ವರಿಗಿಂತ ಶ್ರೇಷ್ಠನೋ ಹಾಗೆ ಈ ವಿದ್ಯೆಯು ಸರ್ವ ವಿದ್ಯೆಗಳಿಗಿಂತ ಶ್ರೇಷ್ಠವಾಗಿದೆ. ಇದು ಅತ್ಯಂತ ರಹಸ್ಯವಾದದ್ದೂ, ಸಮಸ್ತ ಪಾಪಪರಿಹಾರಕವಾದ್ದ– ರಿಂದ ಪವಿತ್ರವೂ ಆಗಿದೆ. ಸರ್ವ ಇಂದ್ರಿಯಗಳಿಗೂ ಪ್ರೇರಕನಾದ ಪರಮಾತ್ಮನನ್ನು ಪ್ರತ್ಯಕ್ಷವಾಗಿ ತಿಳಿಸಿಕೊಡಲು ಸಾಧನವಾಗಿದೆ. ಸರ್ವಧಾರಕನಾದ ಪರಮಾತ್ಮನ ಪ್ರೀತಿಗೆ ಸಾಧನವಾಗಿದೆ. ಈ ವಿದ್ಯೆಯನ್ನು ಹೆಚ್ಚು ಆಯಾಸವಿಲ್ಲದೆ ಸಂಪಾದಿಸಲು ಶಕ್ಯವಿದೆ. ಇದರಲ್ಲಿ ಶ್ರದ್ಧೆ ಇಲ್ಲದ ಪುರುಷರು ನನ್ನನ್ನು ಹೊಂದದೆ ಜನ್ಮಮರಣಾದಿವುಳ್ಳ ಸಂಸಾರಮಾರ್ಗದಲ್ಲಿ ಬೀಳುತ್ತಾರೆ." ಇಷ್ಟು ಹೇಳಿ ಶ್ರೀಕೃಷ್ಣನು ಆ ವಿದ್ಯೆಯನ್ನು ಉಪದೇಶ ಕೊಡಲು ಆರಂಭಿಸುತ್ತಾನೆ:

"ನಾನು ಎಲ್ಲ ದೇಶದಲ್ಲಿ ವ್ಯಾಪ್ತನಾಗಿದ್ದೇನೆ. ವೇದದಲ್ಲಿಯೂ

**'ಯಚ್ಚ ಕಿಂಚಿತ್ ಜಗತ್ಸರ್ವಂ ದೃಶ್ಯತೇ ಶ್ರೂಯತೇಽಪಿ ವಾ ।**

**ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ ॥'**

ಎಂಬುದಾಗಿ ಇದೇ ವಿಷಯವನ್ನು ಹೇಳಿದೆ. ನಾನು ಸರ್ವತ್ರ ಅಪ್ರತ್ಯಕ್ಷವಾದ ದೇಹದಿಂದ ಇದ್ದೇನೆ. ನನ್ನನ್ನು ಎಲ್ಲಾ ಪ್ರಾಣಿಗಳು ಆಶ್ರಯಿಸಿಕೊಂಡಿದ್ದಾವೆ. ನಾನು ಅವರನ್ನು ಆಶ್ರಯಿಸಿಕೊಂಡಿಲ್ಲ. ನನ್ನಲ್ಲಿ ಇತರ ವಸ್ತುಗಳು ಆಶ್ರಯಿಸಿ–

ಕೊಂಡಿರುವಾಗ ಆ ವಸ್ತುವಿನ ಧರ್ಮವು ನನ್ನಲ್ಲಿ, ನನ್ನ ಧರ್ಮವು ಆ ವಸ್ತುವಿನಲ್ಲಿ ಸೇರುವುದೋ ಎಂಬ ಶಂಕೆ ಬೇಡ. ಲೋಕದಲ್ಲಿ ವಹ್ನಿ ಅಥವಾ ಜಲಗಳಿಂದ ಸಂಯುಕ್ತವಾದ ಭೂತಲದಲ್ಲಿ ಔಷ್ಣ್ಯ ಅಥವಾ ಶೈತ್ಯ ಎಂಬ ವಹ್ನಿ ಅಥವಾ ಜಲಗಳ ಗುಣಗಳು ಭೂತಲಕ್ಕೆ ಸಂಕ್ರಮಿಸುವುದಾದರೂ ಲೋಕ ವಿಲಕ್ಷಣನಾಗಿ ವಿಚಿತ್ರ ಶಕ್ತಿ ಉಳ್ಳವನಾದ ಪ್ರಯುಕ್ತ ನನಗೆ ಎಲ್ಲ ಪದಾರ್ಥಗಳ ಸಂಬಂಧದಿಂದಲೂ ಪರಸ್ಪರ ಧರ್ಮ ಸಂಕ್ರಾಂತಿಯು ಆಗುವದಿಲ್ಲ. ನಾನು ನನ್ನ ದೇಹವು ಒಂದೇ. ನನಗೇನು ಲಕ್ಷಣವೋ ಅದೇ ನನ್ನ ದೇಹದ ಲಕ್ಷಣವೂ ಆಗಿದೆ. ಆದುದರಿಂದ ನನ್ನ ದೇಹವು ಜಡವಲ್ಲ, ಚೇತನ ಸ್ವರೂಪವಾಗಿದೆ. ಆದುದರಿಂದಲೇ ದೇಹ ವಿಶಿಷ್ಟನಾದ ನಾನು ವ್ಯಾಪ್ತನಾದರೂ ಯಾರಿಗೂ ಕಾಣಿಸಿಕೊಳ್ಳುವುದಿಲ್ಲ.

ಸರ್ವತ್ರ ಆಕಾಶದಲ್ಲಿ ಸಂಚಾರ ಮಾಡತಕ್ಕ ವಾಯುವಿನಲ್ಲಿ ಆವಾವ ಪದಾರ್ಥದ ಅಶುಚಿತ್ವಾದಿ ದೋಷಗಳು ವಾಯುವಿಗೆ ಇರುವುದಿಲ್ಲ. (ನಾವು ಮಡಿಯಲ್ಲಿದ್ದಾಗ ಮೈಲಿಗೆಯಲ್ಲಿರತಕ್ಕವರ ಸ್ಪರ್ಶಮಾಡಿ ಗಾಳಿಯು ನಮ್ಮನ್ನು ಮುಟ್ಟುತ್ತದೆ. ಇದರಿಂದ ನಾವು ಮೈಲಿಗೆ ಆಗುವದಿಲ್ಲ.) ಗಾಳಿಯು ಹೇಗೆ ಇತರ ಪದಾರ್ಥಗಳ ಸಂಬಂಧ ಇದ್ದರೂ ಇತರ ಪದಾರ್ಥಗಳ ಧರ್ಮಗಳನ್ನು ಉಳ್ಳದ್ದಲ್ಲವೋ ಹಾಗೆಯೇ ನಾನು ಕೂಡ ಎಲ್ಲ ವಸ್ತುಗಳ ಸಂಬಂಧ-ವುಳ್ಳವನಾದರೂ ಆ ವಸ್ತುಗಳ ಧರ್ಮಸಂಬಂಧ ನನಗಿಲ್ಲ."

ಇಷ್ಟರವರೆಗೆ ವ್ಯಾಪ್ತತ್ವವೆಂಬ ತನ್ನ ಮಹಿಮೆಯನ್ನು ಹೇಳಿ ಜಗತ್ಸ್ರಷ್ಟೃತ್ವ, ಸಂಹಾರಕತ್ವ ಎಂಬ ಮಹಿಮೆಯನ್ನು ಇನ್ನು ಮೇಲೆ ಹೇಳುತ್ತಾನೆ. ಈ ಮಹಿಮೆಯು ಹಿಂದಿನ ಅಧ್ಯಾಯದಲ್ಲಿ ಹೇಳಲ್ಪಟ್ಟಿದ್ದರೂ ಪುನಃ ಇಲ್ಲಿ ಹೇಳುವುದರಿಂದ ಆ ಸ್ರಷ್ಟೃತ್ವ ಮತ್ತು ಸಂಹಾರತ್ವ ಮಹಿಮೆಯು ಇನ್ನೊಬ್ಬರಿಗೆ ಇಲ್ಲದೆ ಕೇವಲ ಕೃಷ್ಣನಿಗೆ ಇರುವುದೆಂದು ಸಿದ್ಧವಾಗುತ್ತದೆ. **"ಸಿದ್ಧೇ ಸತಿ ಆರಂಭೋ ನಿಯಮಾಯ"** ಎಂಬ ನಿಯಮದ ಪ್ರಕಾರ ಒಮ್ಮೆ ಹೇಳಿದ್ದನ್ನು ಮತ್ತೊಮ್ಮೆ ಹೇಳಿದರೆ ಅದರ ನಿಯಮವನ್ನು ಸೂಚಿಸಿದ ಹಾಗಾಗುತ್ತದೆ. ಪ್ರಕೃತದಲ್ಲಿ ಕೃಷ್ಣನಿಗೆ ಆ ಮಹಿಮೆ ಹೊರತು ಇನ್ನೊಬ್ಬರಿಗೆ ಇಲ್ಲವೆಂಬ

ನಿಯಮವು ತಿಳಿಯಲ್ಪಡುತ್ತದೆ. ಲೋಕದಲ್ಲಿ ಒಂದು ದೇಶಕ್ಕೆ ಒಂದು ಕಾಲದಲ್ಲಿ ಒಬ್ಬನು ರಾಜನಿದ್ದರೆ ಇನ್ನೊಂದು ದೇಶದಲ್ಲಿ ಇನ್ನೊಂದು ಕಾಲದಲ್ಲಿ ಇನ್ನೊಬ್ಬನು ಅಧಿಪತಿಯಾಗಿ ಬರುತ್ತಾನೆ. ಅದರಂತೆ ಒಂದು ಕಲ್ಪದಲ್ಲಿ ಕೃಷ್ಣನು ಸ್ರಷ್ಟೃತ್ವಾದಿ ಮಹಿಮೆ ಉಳ್ಳವನಾಗಿದ್ದರೆ, ಇನ್ನೊಂದು ಕಲ್ಪದಲ್ಲಿ ಇನ್ನೊಬ್ಬನಾಗಬಹುದು ಎಂಬ ಶಂಕೆಯನ್ನು ನಿವಾರಿಸುವುದಕ್ಕೋಸ್ಕರ ಅರ್ಜುನನನ್ನು ಕುರಿತು ಶ್ರೀಕೃಷ್ಣ ಪರಮಾತ್ಮ ಹೇಳುತ್ತಾನೆ:

"ಎಲೋ ಕುಂತಿಪುತ್ರನಾದ ಅರ್ಜುನನೇ! ಪ್ರಳಯಕಾಲದಲ್ಲಿ ಎಲ್ಲ ಪ್ರಾಣಿಗಳು ಪ್ರಕೃತಿಯಲ್ಲಿ ಹೋಗಿ ಸೇರುತ್ತವೆ. ಆ ಪ್ರಕೃತಿಯು ನನ್ನಲ್ಲಿ ಸೇರುತ್ತದೆ. ಕಲ್ಪಾದಿಯಲ್ಲಿ ನನ್ನ ಅಧೀನನಾದ ಪ್ರಕೃತಿಯನ್ನು ನಿಮಿತ್ತವಾಗಿಟ್ಟುಕೊಂಡು ಸೃಷ್ಟಿಮಾಡುತ್ತೇನೆ. ಇದೇ ರೀತಿ ಸೃಷ್ಟಿ ಪ್ರಳಯಗಳನ್ನು ಮಾಡುತ್ತಾ ಇರುತ್ತೇನೆ. 'ಇಂಥ ಸ್ರಷ್ಟೃತ್ವ ಸಂಹರ್ತೃತ್ವ ಎಂಬ ಮಹಿಮೆಯನ್ನು ನಾನು ನೋಡಲಿಲ್ಲ. ಆದುದರಿಂದ ಹೇಗೆ ಒಪ್ಪಲಿ?' ಎಂದು ಕೇಳಬೇಡ. ಆಪ್ತೋಪದೇಶದಿಂದ ಇಂಥ ವಿಷಯವನ್ನು ನಂಬಬೇಕು. ಇಲ್ಲವಾದರೆ 'ನೀನು ಕುಂತಿಯ ಮಗನಾಗಿದ್ದಿ' ಎಂಬುದು ನಿನಗೆ ಪ್ರತ್ಯಕ್ಷವಾಗಲಿಲ್ಲ. ಹೀಗಿರುವಾಗ ನೀನು ಕುಂತೀಪುತ್ರನೆಂದು ಒಪ್ಪಲು ಹೇಗೆ ಸಾಧ್ಯವಾದೀತು? ಅದನ್ನು ಆಪ್ತೋಪದೇಶ-ದಿಂದ ಒಪ್ಪುವದಾದರೆ ನನ್ನ ಸೃಷ್ಟೃತ್ವಾದಿ ಮಹಿಮೆಯನ್ನು ಆಪ್ತೋಪದೇಶ-ದಿಂದಲೇ ಒಪ್ಪಬೇಕಾಗುವುದು.

ಆ ವಿಷಮವಾದ ಸೃಷ್ಟಿಯನ್ನು ಮಾಡಿದರೂ ನನಗೆ ಪಾಪಪುಣ್ಯಗಳ ಸಂಬಂಧವು ಬರುವುದಿಲ್ಲ. ನನಗೆ ಆಸಕ್ತಿಯಿಲ್ಲ ಅರ್ಥಾತ್ ರಾಗದ್ವೇಷಗಳಿಲ್ಲ. ಉದಾಸೀನ ಪುರುಷನಂತೆ ಅನಾಸಕ್ತನಾಗಿ ಕರ್ಮ ಮಾಡುತ್ತೇನೆ."

ಒಬ್ಬ ಉದಾಸೀನ ಪುರುಷನು ಇಬ್ಬರು ಪರಸ್ಪರ ಯುದ್ಧ ಮಾಡತಕ್ಕ ಪುರುಷರನ್ನು ನೋಡುತ್ತಿದ್ದರೂ ಅವರ ಜಯಾಪಜಯಗಳ ಅಪೇಕ್ಷೆ ಇಲ್ಲದವನಾದ ಪ್ರಯುಕ್ತ ಜಯಾಪಜಯಗಳಿಂದ ಹರ್ಷ ಶೋಕಗಳನ್ನು ಹೊಂದುವುದಿಲ್ಲ. ಇದಕ್ಕೆ ಅನಾಸಕ್ತಿಯೇ ಕಾರಣ. ನಾವು ಪವಿತ್ರವಾದ

ಗಂಗಾಜಲದಲ್ಲಿ ಸ್ನಾನ ಮಾಡುವಾಗ ನಮ್ಮ ಅಪವಿತ್ರವಾದ ಕಾಲನ್ನು ಗಂಗಾಜಲವೆಂಬ ತೀರ್ಥದಲ್ಲಿ ಇಡುತ್ತೇವೆ. ಇದರಿಂದ ಪಾಪವು ಸಂಭವಿಸುವುದಿಲ್ಲ. ಆ ಪಾದಸ್ಪರ್ಶವನ್ನು ಒಬ್ಬ ದ್ವೇಷಿಯ ಮೇಲೆ ಮಾಡುವಂತೆ ಗಂಗಾಜಲದಲ್ಲಿ ದ್ವೇಷಮೂಲಕವಾಗಿ ಮಾಡದಿದ್ದ ಕಾರಣ ಅದು ಪಾಪಕ್ಕೆ ಕಾರಣವಾಗುವದಿಲ್ಲ. ಅದರಂತೆ ಶ್ರೀಕೃಷ್ಣಪರಮಾತ್ಮನು ತಾನು ಅನಾಸಕ್ತನಾದ ಪ್ರಯುಕ್ತ ಕರ್ಮಲೇಪವು ತನಗಿಲ್ಲವೆಂದು ಹೇಳುತ್ತಿದ್ದಾನೆ.

ಮತ್ತೆ ಶ್ರೀಕೃಷ್ಣ ಪರಮಾತ್ಮನು ಹೀಗೆ ಉಪದೇಶಿಸುತ್ತಾನೆ: "ಪ್ರಕೃತಿಯಿಂದ ಚರಾಚರ ಜಗತ್ತನ್ನು ಸೃಷ್ಟಿಮಾಡಿದರೂ ಜಗತ್ಸೃಷ್ಟಿಗೆ ಪ್ರಕೃತಿಯು ಮುಖ್ಯವಲ್ಲ. ನಾನು ಅಧ್ಯಕ್ಷನಾಗಿ ನನ್ನ ಅಧೀನವಾದ ಪ್ರಕೃತಿಯಿಂದ ಸೃಷ್ಟಿ ಮಾಡುವ ಪ್ರಯುಕ್ತ ಜಗತ್ಸೃಷ್ಟಿಗೆ ಮುಖ್ಯ ಕಾರಣನು ನಾನೆ. ಇಷ್ಟು ಮಹಿಮೆಯುಳ್ಳ ನನ್ನನ್ನು ತಿಳಿಯದೆ ಇರತಕ್ಕ ಮೂಢರು ತಿರಸ್ಕಾರ ಮಾಡುತ್ತ ಇದ್ದಾರೆ. ಮನುಷ್ಯರಂತೆ ನಾನು ತೋರಿಸಿಕೊಳ್ಳುವದೇ ನನ್ನ ಮಹಿಮೆಯು ತಿಳಿಯದೆ ಇರಲು ಕಾರಣ. ನಾನು ನನ್ನ ಈಶ್ವರ ಸ್ವರೂಪವನ್ನೇ ಜಗತ್ತಿಗೆ ತೋರಿಸಿದ್ದರೆ ಭ್ರಾಂತಿಯು ಬರುತ್ತಿದ್ದಿಲ್ಲ. ಆದರೆ ನಾನು ಮನುಷ್ಯರಲ್ಲಿ ಬೆರೆತು ಮನುಷ್ಯರು ಮಾಡತಕ್ಕ ಧರ್ಮಗಳನ್ನು ಮಾಡಿ ತೋರಿಸುತ್ತಿದ್ದೇನೆ. ಯಾಕೆಂದರೆ ಲೋಕವು ಶ್ರೇಷ್ಠ ಪುರುಷರು ಮಾಡಿದ್ದನ್ನು ಅನುಸರಿಸುತ್ತದೆ. ಅದಕ್ಕಾಗಿ ನಾನು ಮನುಷ್ಯರಂತೆ ನಟನೆ ಮಾಡುತ್ತಿದ್ದೇನೆ. ನಾನು ಈಶ್ವರ ರೂಪವನ್ನೇ ತೋರಿಸುತ್ತಿದ್ದರೆ ಜನರು ಬೆದರಿ ಬಿಟ್ಟು ನನ್ನ ಸಮೀಪದಿಂದ ದೂರ ಓಡಿಹೋಗುತ್ತಿದ್ದರು. ಅವರಿಗೆ ಧರ್ಮ ಆಚರಣೆಯನ್ನು ಮಾಡಿ ತೋರಿಸಲಿಕ್ಕೆ ಅಶಕ್ಯವಾಗುತ್ತಿತ್ತು. ಹಾಗೆಯೇ ಸ್ತ್ರೀ ಮೊದಲಾದ ವಿಷಯದಲ್ಲಿ ಆಸಕ್ತಿ ಇಡಬಾರದೆಂಬ ಧರ್ಮವನ್ನು ಜನರಿಗೆ ತಿಳಿಸಬೇಕಾಗಿದ್ದರೆ ಮನುಷ್ಯರಂತೆ ನಟನ ಮಾಡಿ ಸ್ತ್ರೀಸಂಗದಿಂದ ಆಗುವ ದುಃಖವನ್ನು ತೋರಿಸಬೇಕಾಗುತ್ತದೆ. ಅದನ್ನೇ ನಾನು ರಾಮಾವತಾರದಲ್ಲಿ ಸೀತಾವಿಯೋಗದಿಂದ ತೋರಿಸಿದ್ದು. ಈಶ್ವರ ರೂಪದಿಂದ ನಾನು ಅವತಾರ ಮಾಡಿದ್ದರೆ ಸೀತಾವಿಯೋಗಾದಿಗಳು, ಅದರಿಂದ

ಆಗುವ ದುಃಖಗಳು ಮುಂತಾದವುಗಳನ್ನು ತೋರಿಸಲಿಕ್ಕೆ ಅಶಕ್ಯವಾಗುತ್ತದೆ. ಇದಕ್ಕಾಗಿ ನಾನು ಮನುಷ್ಯರಂತೆ ತೋರಿಸಿಕೊಳ್ಳುತ್ತೇನೆ.

ಇದರಿಂದಾಗಿ ಅಯೋಗ್ಯ ಜೀವರು ಮೂಢರಾಗಿ ನನ್ನನ್ನು ತಿಳಿಯದೆ ತಿರಸ್ಕಾರ ಮಾಡುತ್ತಾರೆ. ಅಯೋಗ್ಯ ಜನರು ನನ್ನನ್ನು ತಿರಸ್ಕಾರಮಾಡುವದು ನನಗೆ ಇಷ್ಟವೇ. ಅವರು ಅದರಿಂದ ನರಕಾದ್ಯನರ್ಥವನ್ನು ಹೊಂದಲಿಕ್ಕೆ ಯೋಗ್ಯರೇ ಆಗಿದ್ದಾರೆ. ಅವರಿಗೆ ಅಂಥ ಗತಿ ಪ್ರಾಪ್ತಿ ಆಗಬೇಕೆಂತಲೇ ನಾನು ಅವತಾರ ಮಾಡಿದ್ದೆಂದು "ವಿನಾಶಾಯ ಚ ದುಷ್ಕೃತಾಂ" ಎಂದು ಹೇಳಿದ್ದೇನೆ. ಅವರು ನನ್ನನ್ನು ತಿರಸ್ಕಾರ ಮಾಡಿದ್ದರಿಂದ ಅವರ ಆಶೆಯು ಮತ್ತು ಕರ್ಮವು ವ್ಯರ್ಥವಾಗುತ್ತವೆ. ಅವರಿಗೆ ಒಳ್ಳೆ ಜ್ಞಾನವೇ ಬರಲಾರದು. ಅವರು ಜ್ಞಾನಕ್ಕೆ ಯೋಗ್ಯರೇ ಅಲ್ಲ. ಅವರು ರಾಕ್ಷಸ–ಆಸುರ ಸ್ವಭಾವವುಳ್ಳವರಾಗಿದ್ದಾರೆ."

ಹಿಂದಕ್ಕೆ ವಿರೋಚನನೆಂಬ ದೈತ್ಯನು ಮತ್ತು ದೇವೇಂದ್ರನು ಸೇರಿ ಚತುರ್ಮುಖ ಬ್ರಹ್ಮದೇವರಲ್ಲಿ ಗುರುಕುಲವಾಸ ಮಾಡಿದರು. ಅವರಿಬ್ಬರಿಗೂ ಒಂದೇ ಉಪದೇಶವನ್ನು ಚತುರ್ಮುಖ ಬ್ರಹ್ಮದೇವರು ನೀಡಿದರು: 'ಕಣ್ಣಿನಲ್ಲಿ ಯಾವ ಪುರುಷ ತೋರುತ್ತಾನೋ ಅವನೇ ಬ್ರಹ್ಮ' ಎಂದು. ಇಂದ್ರನು ಕಣ್ಣಿನಲ್ಲಿ ನಿಯಾಮಕನಾಗಿ ಪರಮಾತ್ಮನು ಇದ್ದಾನೆ ಎಂದು ತಿಳಿದನು. ವಿರೋಚನನು ತತ್ವಜ್ಞಾನ ಯೋಗ್ಯತೆ ಇಲ್ಲದವನಾದ ಪ್ರಯುಕ್ತ, ಅಸುರಸ್ವಭಾವದವನಾದ ಕಾರಣ ವಿಪರೀತವಾದ ಅರ್ಥವನ್ನು ಆ ಉಪದೇಶದಿಂದ ತಿಳಿದುಕೊಂಡನು: 'ಒಬ್ಬ ಪುರುಷನ ಕಣ್ಣಿನ ಮಧ್ಯದಲ್ಲಿ ನೋಡಿದರೆ ಮತ್ತೊಬ್ಬನ ಪ್ರತಿಬಿಂಬವು ಕಾಣುತ್ತದೆ. ಆ ಪ್ರತಿಬಿಂಬವು ಮನುಷ್ಯರದೇ ಆದ ಕಾರಣ ಕಣ್ಣಿನಲ್ಲಿ ಕಾಣುವ ಬ್ರಹ್ಮನೆಂದರೆ ಈ ಜೀವನೇ ಆಗಿದ್ದಾನೆ. ಜೀವಬ್ರಹ್ಮೈಕ್ಯವನ್ನೇ ಬ್ರಹ್ಮದೇವರು ಉಪದೇಶ ಕೊಟ್ಟರು' ಎಂದು. ಆದುದರಿಂದ ನನ್ನ ತಿರಸ್ಕಾರ ಮಾಡುವ ಅಯೋಗ್ಯ ಜೀವರಿಗೆ ಎಂದಿಗೂ ತತ್ವಜ್ಞಾನವು ಬರಲಾರದು.

ನನ್ನಲ್ಲಿ ದೋಷಗಳಿರುವದರಿಂದ ಅವರು ನನ್ನನ್ನು ತಿರಸ್ಕಾರ ಮಾಡುತ್ತಾರೆಂದು ಶಂಕಿಸಬೇಡ. ಮಹಾತ್ಮರುಗಳು, ದೈವಸ್ವಭಾವವುಳ್ಳವರು

ನನ್ನನ್ನು ವಿಶೇಷವಾದ ಭಕ್ತಿಯಿಂದ ಸೇವಿಸುತ್ತಾರೆ. ನನ್ನ ನಾಮೋಚ್ಚಾರಣ, ನನ್ನ ಸ್ತೋತ್ರಪಾಠ, ನನ್ನ ಮಂತ್ರಗಳ ಜಪ, ನನ್ನ ಪೂಜೆಯನ್ನೇ ಮಾಡುತ್ತ ಏಕಾದಶ್ಯಾದಿ ವಿಷ್ಣುವ್ರತದಲ್ಲಿ ದೃಢದೀಕ್ಷೆವುಳ್ಳವರಾಗಿ ಯಾವಾಗಲೂ ನನ್ನಲ್ಲಿಯೇ ಮನಸ್ಸನ್ನಿಟ್ಟು ಭಕ್ತಿಯಿಂದ ನನಗೆ ನಮಸ್ಕಾರ ಮಾಡುವವರಾಗಿ ಉಪಾಸನೆ ಮಾಡುತ್ತಾರೆ. ಕೆಲವರು ಶ್ರವಣ, ಮನನ, ನಿಧಿಧ್ಯಾಸನವೆಂಬ ಜ್ಞಾನಯಜ್ಞದಿಂದ ನನ್ನನ್ನು ಪೂಜೆಮಾಡುತ್ತಾರೆ. 'ನಾನು ಸರ್ವತ್ರ ವ್ಯಾಪ್ತನಾಗಿ ಒಬ್ಬನೇ ಇದ್ದೇನೆ. ಎಲ್ಲ ವಸ್ತುಗಳಿಗಿಂತಲೂ ಬೇರೆಯಾಗಿದ್ದೇನೆ. ಶುಕ್ಲ, ನೀಲ, ಪೀತ ಮೊದಲಾದ ಅನೇಕ ವರ್ಣಗಳುಳ್ಳವ-ನಾಗಿದ್ದೇನೆ' ಎಂದು ಉಪಾಸನೆ ಮಾಡುತ್ತಾರೆ.

ನನ್ನಲ್ಲಿಯೇ ದೋಷವಿರುತ್ತಿದ್ದರೆ ದೈವ ಸ್ವಭಾವವುಳ್ಳ ಮಹಾತ್ಮರು ಕೂಡ ನನ್ನನ್ನು ಅಸುರರಂತೆ ತಿರಸ್ಕಾರವನ್ನೇ ಮಾಡಬೇಕಾಗಿತ್ತು. ಆದುದರಿಂದ ನಾನು ನಿರ್ದುಷ್ಟ-ನಾಗಿದ್ದರೂ ಅವರವರ ಸ್ವಭಾವಕ್ಕೆ ಅನುಗುಣವಾಗಿ ಅಸುರರು, ರಾಕ್ಷಸರು ನನ್ನನ್ನು ತಿರಸ್ಕಾರ ಮಾಡುತ್ತಾರೆಂದು ತಿಳಿಯಬೇಕು.

"ಇಷ್ಟರವರೆಗೆ ಜ್ಞಾನೋಪದೇಶವನ್ನು ಮಾಡಿದೆನು. ಇನ್ನು ಮೇಲೆ ವಿಶೇಷ ಜ್ಞಾನಕ್ಕಾಗಿ ಉಪದೇಶ ಮಾಡುತ್ತೇನೆ. ನಾನು ಜಗತ್ಸೃಷ್ಟಿಯೆಂಬ ಕೃತಿಯಿಂದಾಗಿ **ಕ್ರತು** ಎಂಬ ಹೆಸರುಳ್ಳವನಾಗಿದ್ದೇನೆ. ಲೋಕದಲ್ಲಿ ಕ್ರತು ಎಂದರೆ ಯಜ್ಞಕ್ಕೆ ಅಂಗವಾದ ಕರ್ಮಗಳು. ಅವುಗಳಿಗೂ ನಾನು ನಿಯಾಮಕನಾಗಿದ್ದೇನೆ. ಇರುವುದೆಲ್ಲವನ್ನೂ ನಾನು ತಿಳಿದುಕೊಂಡಿರುವುದರಿಂದ **ಯಜ್ಞ** ಎಂಬ ಶಬ್ದದಿಂದ ವಾಚ್ಯನಾಗಿದ್ದೇನೆ. ದೇವತೆಗಳನ್ನು ಉದ್ದೇಶಿಸಿ ದ್ರವ್ಯತ್ಯಾಗ ಮಾಡುವ ಪ್ರಧಾನ ಕರ್ಮವೇ ಲೋಕದಲ್ಲಿ ಯಜ್ಞವೆಂದು ಹೇಳಲ್ಪಡುತ್ತದೆ. ಆ ಕರ್ಮಕ್ಕೆ ನಾನು ನಿಯಾಮಕನಾಗಿದ್ದೇನೆ. ಪಿತೃಗಳಿಗೆ ತಿಲೋದಕಾದಿ ದಾನವೇ ಸ್ವಧಾ. ಅದಕ್ಕೆ ನಾನು ನಿಯಾಮಕನಾಗಿದ್ದೇನೆ. ಅಂದರೆ ತಿಲೋದಕ ಪಿಂಡಪ್ರದಾನಗಳನ್ನು ಮಾಡುವ ಕಾಲಕ್ಕೆ ನಿಯಾಮಕನಾದ ನನ್ನನ್ನೇ ಸ್ಮರಿಸಿ ನನ್ನ ಪ್ರೀತ್ಯರ್ಥವಾಗಿಯೇ ಕೊಡಬೇಕು. ಯಾವ ಯೋನಿಯಲ್ಲಿ ಹುಟ್ಟಿದ್ದರೂ ಅವರವರ ಪಿತೃಗಳಿಗೆ ಮೃಷ್ಟಾನ್ನ ಭೋಜನ ಸಿಗುವಂತೆ ಮಾಡತಕ್ಕವನು ನಾನೇ. ಅಲ್ಲದೇ ನನ್ನನ್ನು ನಾನೇ ಧರಿಸಿಕೊಳ್ಳುವ ಪ್ರಯುಕ್ತ ನನಗೆ **ಸ್ವಧಾ** ಎಂದು ಹೆಸರು.

ನಾನು ಔಷಧಿಗಳಲ್ಲಿದ್ದು ರೋಗಪರಿಹಾರ ಮಾಡತಕ್ಕವನು. ನಾನೇ ಸಂಸಾರದುಃಖದಿಂದ ನೊಂದವರಿಗೆ ಆಶ್ರಯನು. ಆದ್ದರಿಂದ **ಔಷಧ** ಎಂಬ ಹೆಸರು ನನಗಿದೆ. ಎಲ್ಲವನ್ನೂ ತಿಳಿದು ರಕ್ಷಣ ಮಾಡುವ ಪ್ರಯುಕ್ತ ನನಗೆ **ಮಂತ್ರ** ಎಂದು ಹೆಸರು. ಮಂತ್ರ ಪ್ರತಿಪಾದ್ಯನೂ ಮಂತ್ರಗಳಿಗೆ ಸ್ವಾಮಿಯೂ ನಾನೇ. ಎಲ್ಲ ವಸ್ತುಗಳಿಗಿಂತ ಜ್ಯೇಷ್ಠವಾದ ಪ್ರಯುಕ್ತ ನನಗೆ **ಆಜ್ಯ** ಎಂದು ಹೆಸರಿದೆ. ಆಜ್ಯಕ್ಕೆ ಸ್ವಾಮಿಯಾದವನು ನಾನೇ. ಸ್ವತಃ ಪ್ರವೃತ್ತಿ ಇಲ್ಲದೇ ಇರತಕ್ಕ ಜಗತ್ತಿಗೆ ಪ್ರವರ್ತಕನಾದ ಕಾರಣ ನನಗೆ **ಅಗ್ನಿ** ಎಂದು ಹೆಸರು. ನಾನು ಅಗ್ನಿಗೆ ನಿಯಾಮಕನೂ ಆಗಿದ್ದೇನೆ. ಹೋಮದ್ರವ್ಯಕ್ಕೆ ನಿಯಾಮಕನಾಗಿದ್ದೇನೆ. ಯಜ್ಞದಲ್ಲಿ ನಾನು ಆಹೂತನಾಗುವ ಪ್ರಯುಕ್ತ ನನಗೆ **ಹುತ** ಎಂದು ಹೆಸರು.

ನಾನು ಜಗತ್ತಿಗೆ ತಂದೆ, ತಾಯಿ, ಪೋಷಕ ಮತ್ತು ಪೂಜ್ಯನೂ ಆಗಿದ್ದೇನೆ. ತಿಳಿದುಕೊಳ್ಳಲಿಕ್ಕೆ ಯೋಗ್ಯವಾದ ವಸ್ತು ಮತ್ತು ಪವಿತ್ರವಾದ ವಸ್ತು ನಾನಾಗಿದ್ದೇನೆ. ವೇದ್ಯವಾದ ವಸ್ತುವಿಗೆ ವೇದ್ಯತ್ವವನ್ನೂ, ಪವಿತ್ರವಾದ ವಸ್ತುವಿಗೆ ಪವಿತ್ರತ್ವವನ್ನೂ ಕೊಟ್ಟವನು ನಾನೇ. ಓಂ ಎಂಬ ಪ್ರಣವದಿಂದ ನಾನೇ ಪ್ರತಿಪಾದ್ಯನಾಗಿದ್ದೇನೆ. ನಾನು ಅರ್ಚಿಸಲಿಕ್ಕೆ ಯೋಗ್ಯನಾದ ಪ್ರಯುಕ್ತ **ಋಕ್** ಶಬ್ದದಿಂದಲೂ ಎಲ್ಲರಿಗೂ ಸಮಾನನಾಗಿರುವ ಪ್ರಯುಕ್ತ **ಸಾಮ** ಶಬ್ದದಿಂದಲೂ ಯಜ್ಞದಿಂದ ಪೂಜಿಸಲ್ಪಡು-ವವನಾದ ಪ್ರಯುಕ್ತ **ಯಜುಸ್** ಶಬ್ದದಿಂದಲೂ ಕರೆಯಲ್ಪಡುತ್ತೇನೆ. ಋಕ್ ಸಾಮ ಯಜುರ್ವೇದದಿಂದ ನಾನೇ ಪ್ರತಿಪಾದ್ಯನು. ಆ ಋಗಾದಿ ವೇದಗಳಿಗೆ ನಿಯಾ-ಮಕನು ನಾನೇ. ಸಜ್ಜನರಿಗೆ ಗತಿಯು ಅಂದರೆ ಹೊಂದಲಿಕ್ಕೆ ಯೋಗ್ಯನಾದವನು ನಾನೇ. ಎಲ್ಲರನ್ನೂ ಪೋಷಿಸುವವನು ನಾನೇ. ನಾನೇ ಪ್ರಭು. ನಾನೇ ಸರ್ವಜ್ಞ.

ಲೋಕದಲ್ಲಿ ಪ್ರಭುಗಳಾದವರಿಗೆ ಕಾರ್ಯಮಾಡಲು ಸಮರ್ಥರಾದವರಿಗೆ ಯಾವ ಕಾಲದಲ್ಲಿ ಯಾವ ಕರ್ಮವನ್ನು ಮಾಡಬೇಕೆಂದು ಸ್ವತಃ ತಿಳಿಯುವುದಿಲ್ಲ. ಇನ್ನೊಬ್ಬರು ತಿಳಿಸಿದರೆ ಅದನ್ನು ಮಾಡುತ್ತಾರೆ. ಕೆಲವರಿಗೆ ತಿಳಿಸಿದರೂ ಕೂಡ ಆ ಕಾರ್ಯವನ್ನು ಮಾಡಲು ಸಾಮರ್ಥ್ಯವಿರುವುದಿಲ್ಲ. ನಾನು ಹಾಗಲ್ಲ. ನಾನು ಸರ್ವಜ್ಞನಾಗಿ, ಸ್ವತಃ ಮಾಡಲು ಸಮರ್ಥನೂ ಆಗಿದ್ದೇನೆ. ಭೀತರಾದವರು ಮೊರೆಹೊಂದಲು ನಾನೇ ಯೋಗ್ಯ. ಅವರಿಗೆ ನಾನು ಆಶ್ರಯನಾಗಿದ್ದೇನೆ. ಕೆಲವರು

ತಮ್ಮ ಆಶ್ರಿತರನ್ನು ಅವರ ಆಪತ್ಕಾಲದಲ್ಲಿ ಬಿಟ್ಟುಬಿಡುತ್ತಾರೆ. ಆಪತ್ತಿನಲ್ಲಿದ್ದವರ ಸಂಬಂಧ ಮಾಡಿದರೆ ತಮಗೆ ಆಪತ್ತು ಬರುತ್ತದೇನೋ ಎಂದು ಭಯದಿಂದ ದೂರ ಹೋಗುತ್ತಾರೆ. ನಾನು ಹಾಗಲ್ಲ. ನಾನು ಅಂಥವರಿಗೆ ಆಶ್ರಯ ಕೊಡುತ್ತೇನೆ. ಲೋಕದಲ್ಲಿ ಪ್ರತ್ಯುಪಕಾರವನ್ನು ಅಪೇಕ್ಷಿಸಿ ಉಪಕಾರ ಮಾಡುತ್ತಾರೆ. ನಾನು ಹಾಗಲ್ಲ. ಪ್ರತ್ಯುಪಕಾರ ನಿರಪೇಕ್ಷನಾಗಿ ಉಪಕಾರವನ್ನು ಮಾಡುತ್ತಿದ್ದೇನೆ.

ನಾನು ಸೃಷ್ಟಿಕರ್ತನಾದ ಪ್ರಯುಕ್ತ **ಪ್ರಭವ**ನೆಂದು ಹೆಸರುಳ್ಳವನಾಗಿದ್ದೇನೆ. ಲಯ-ಕರ್ತನಾದ ಪ್ರಯುಕ್ತ **ಪ್ರಳಯ**ನೆಂಬ ಹೆಸರುಳ್ಳವನಾಗಿದ್ದೇನೆ. ನನ್ನನ್ನು ಹೊಂದಿದ-ವರು ನನ್ನನ್ನು ಬಿಟ್ಟು ಬೇರೆ ಕಡೆಗೆ ಹೋಗುವದಿಲ್ಲ. ಅದಕ್ಕಾಗಿ ನಾನು **ಸ್ಥಾನ** ಎಂಬ ಶಬ್ದದಿಂದ ವಾಚ್ಯನಾಗಿದ್ದೇನೆ. ಪ್ರಕೃತ್ಯಾದಿ ಜಗತ್ತು ನನ್ನನ್ನು ಆಶ್ರಯಿಸಿ-ಕೊಂಡಿರುವ ಪ್ರಯುಕ್ತ ನಾನು **ನಿಧನ**ಶಬ್ದವಾಚ್ಯನಾಗಿದ್ದೇನೆ.

ಈ ಜಗತ್ತನ್ನು ವ್ಯಕ್ತಮಾಡುವ ಪ್ರಯುಕ್ತ ನಾನು **ಬೀಜ**ಶಬ್ದ-ವಾಚ್ಯನಾಗಿದ್ದೇನೆ. ನಾನು ಅವಿಕಾರಿಯಾಗಿದ್ದೇನೆ. ಸೂರ್ಯನಲ್ಲಿದ್ದು ಜಗತ್ತಿಗೆ ತಾಪವನ್ನು ಕೊಡುತ್ತೇನೆ. ನಾನು ಕಾಲದಲ್ಲಿದ್ದು ಮಳೆಯನ್ನು ಸೃಷ್ಟಿಮಾಡುತ್ತೇನೆ, ಮಳೆಯನ್ನು ನಿಲ್ಲಿಸುತ್ತೇನೆ. ಜಗತ್ತಿನ ಜೀವನಕ್ಕೆ ಕಾರಣನಾದ ಪ್ರಯುಕ್ತ ನಾನು **ಅಮೃತ** ಶಬ್ದವಾಚ್ಯನಾಗಿದ್ದೇನೆ. ರೋಗಾದಿಗಳಿಂದ ಪ್ರಾಣಿಗಳನ್ನು ಸಂಹಾರ ಮಾಡುವ ಪ್ರಯುಕ್ತ **ಮೃತ್ಯು**ಶಬ್ದವಾಚ್ಯನಾಗಿದ್ದೇನೆ. ಸತ್ ಹಾಗೂ ಅಸತ್ ಎಂದರೆ ಕಾರ್ಯ ಮತ್ತು ಕಾರಣ ವಸ್ತುಗಳೆರಡಕ್ಕೂ ನಿಯಾಮಕನಾದ್ದರಿಂದ **ಸತ್ ಅಸತ್** ಶಬ್ದವಾಚ್ಯನಾಗಿದ್ದೇನೆ.

ನಾನು ಇಷ್ಟು ಮಹಿಮೆ ಉಳ್ಳವನಾದರೂ ಕೂಡಾ ತ್ರೈವಿದ್ಯರೆಂಬ ಅಧಿಕಾರಿಗಳು ಮೂರು ವೇದಗಳಲ್ಲಿ ಮೇಲೆ ಮೇಲೆ ತೋರತಕ್ಕ ಅರ್ಥದಿಂದ ಇತರ ದೇವತೆಗಳನ್ನು ಉದ್ದೇಶಿಸಿ ಯಜ್ಞಮಾಡಿ ಸ್ವರ್ಗವನ್ನು ಅಪೇಕ್ಷಿಸುತ್ತಾರೆ. ಅವರು ಪುಣ್ಯ ಇರುವ ತನಕ ಸ್ವರ್ಗಲೋಕದಲ್ಲಿ ದೇವಭೋಗಗಳನ್ನು ಭೋಗಿಸಿ ಪುಣ್ಯ-ಕ್ಷೀಣವಾದ ಮೇಲೆ ಈ ಮರ್ತ್ಯಲೋಕಕ್ಕೆ ಬಂದು ಸೇರುತ್ತಾರೆ. ಆದ್ದರಿಂದ ತ್ರೈವಿದ್ಯರು ಮೇಲೆ ಹೋಗುತ್ತಾರೆ ಮತ್ತೆ ಕೆಳಗೆ ಬರುತ್ತಾರೆ. ಅವರಿಗೆ ಮೋಕ್ಷವು ಸಿಗಲಾರದು.

ಆದರೆ ಶುದ್ಧ ಭಾಗವತರು ಮಾತ್ರ ಅನನ್ಯ ಭಕ್ತಿಯಿಂದ ಅಂದರೆ ನನ್ನನ್ನು ಸರ್ವೋತ್ತಮನೆಂದು ಇತರ ದೇವತೆಗಳನ್ನು ಪರಿವಾರ ದೇವತೆಗಳೆಂದು ತಿಳಿದು ನನ್ನಲ್ಲಿ ಸರ್ವೋತ್ತಮವಾದ ಭಕ್ತಿಯನ್ನು, ಇತರರಲ್ಲಿ ತಾರತಮ್ಯಾನುಗುಣ ಭಕ್ತಿಯನ್ನು ಮಾಡುತ್ತ ನನ್ನಲ್ಲಿ ಉಪಾಸನ ಮಾಡುತ್ತಾರೆ. ನಿತ್ಯದಲ್ಲಿಯೂ ನನ್ನಲ್ಲಿಯೇ ಮನಸ್ಸುಳ್ಳ ಅಂಥವರ ಯೋಗಕ್ಷೇಮವನ್ನು ನಾನೇ ವಹಿಸುತ್ತೇನೆ. ಯೋಗವೆಂದರೆ ಅಪ್ರಾಪ್ತ ಪ್ರಾಪ್ತಿ; ಅಂದರೆ ಮೋಕ್ಷಪ್ರಾಪ್ತಿ. ಅದರ ಕ್ಷೇಮವೆಂದರೆ ಆ ಮೋಕ್ಷಕ್ಕೆ ಶಾಶ್ವತತ್ವವನ್ನು ಕೊಡುತ್ತೇನೆ. ಅಂದರೆ ಪುನರಾವೃತ್ತಿ ಇಲ್ಲದೆ ಇರುವ ಮಹಾಪುರುಷಾರ್ಥರೂಪವಾದ ಮೋಕ್ಷವನ್ನು ಕೊಡುತ್ತೇನೆ. ಸಾಂಸಾರಿಕ ಯೋಗಕ್ಷೇಮವನ್ನು ವಹಿಸುವ ನಿಯಮವಿಲ್ಲ. ಅವರವರ ಕರ್ಮಾನುಸಾರ ಸಂಸಾರದಲ್ಲಿರಬೇಕಾಗುತ್ತದೆ. ಪ್ರಾರಬ್ಧಪಾಪವು ಅಂಥ ಭಕ್ತರಿಗೆ ಇಲ್ಲದಿದ್ದ ಪಕ್ಷದಲ್ಲಿ ಅವರ ಐಹಿಕ ಯೋಗಕ್ಷೇಮವನ್ನು ವಹಿಸುತ್ತೇನೆ" ಎಂದು ಶ್ರೀಕೃಷ್ಣ ಪರಮಾತ್ಮನು ಉಪದೇಶಿಸುತ್ತಾನೆ.

ಈ ವಿಷಯದಲ್ಲಿ ಕಂಚಿಯಲ್ಲಿ ನಡೆದ ಇತಿಹಾಸವನ್ನು ತಿಳಿಯಬೇಕು: ಒಬ್ಬ ವಿಷ್ಣುಭಕ್ತನು ನಿತ್ಯದಲ್ಲಿ ಶಿಷ್ಯರಿಗೆ ವೇದಾಂತ ಪ್ರವಚನವನ್ನು ಮಧ್ಯಾಹ್ನದವರೆಗೆ ಮಾಡುತ್ತಾ, ನಂತರದಲ್ಲಿ ದೇವರ ಪೂಜೆ, ಪಂಚಯಜ್ಞಾದಿ ಸ್ವಧರ್ಮಾಚರಣೆಯನ್ನು ಮಾಡುತ್ತಿದ್ದನು. ಅವನ ಯೋಗಕ್ಷೇಮವನ್ನು ಕಂಚೀ ವರದರಾಜನೇ ವಹಿಸುತ್ತಿದ್ದನು. ಅಂದರೆ ಯಾರಿಗಾದರೂ ಧನಿಕರಿಗೆ ಪ್ರೇರಣೆ ಮಾಡಿ ಅವರ ಮುಖಾಂತರ ಈ ವಿಷ್ಣುಭಕ್ತನಿಗೆ ಬೇಕಾದ ವಸ್ತುವನ್ನು ಕೊಡಿಸು-ತ್ತಿದ್ದನು. ಒಂದು ದಿವಸ ಇವನನ್ನು ಪರೀಕ್ಷೆ ಮಾಡುವುದಕ್ಕಾಗಿ ವರದರಾಜನು ಯಾರಿಗೂ ಪ್ರೇರಿಸಲಿಲ್ಲ. ಆ ದಿವಸ ಪ್ರವಚನವನ್ನು ಮುಗಿಸುವ ಕಾಲಕ್ಕೆ ಪಾಕಶಾಲೆಯಲ್ಲಿ ಯಾವ ಸಿದ್ಧತೆಯೂ ಆಗಲಿಲ್ಲ. ತನ್ನ ಅವಸ್ಥೆಯನ್ನು ನೋಡಿ ಮನಸ್ಸಿಗೆ ಕ್ಲೇಶವನ್ನು ಹೊಂದಿ 'ಯೋಗಕ್ಷೇಮಂ ವಹಾಮ್ಯಹಂ' ಎಂಬ ಶ್ರೀಕೃಷ್ಣನ ಮಾತು ಸುಳ್ಳೆಂದು ಭಾವಿಸಿದನು. ಅಂಗಾರವನ್ನು ತಂದು ಮಸಿಯಿಂದ ಆ ಶ್ಲೋಕವನ್ನು ಅಳಿಸಿದನು. ಅನಂತರ ಹೀಗೆ ಯೋಚಿಸುತ್ತ ಕಂಚಿವರದರಾಜನ

ದೇವಸ್ಥಾನದಲ್ಲಿ ತಿರುಗುತ್ತಿರುವಾಗ ದೇವರ ಮುಖದಲ್ಲಿ ಮಸಿಯು ಕಂಡು ಬಂತು. ಇದೇನು ಎಂದು ಊಹಿಸುತ್ತ ವಿಚಾರ ಮಾಡುತ್ತ ಅಲ್ಲಿಯೇ ಕುಳಿತಿದ್ದನು.

ಅಷ್ಟರಲ್ಲಿ ಒಬ್ಬ ಪುರುಷನು ಹನ್ನೆರಡು ಎತ್ತುಗಳನ್ನೂ, ಒಂದು ವರ್ಷಕ್ಕೆ ಬೇಕಾಗುವ ಎಲ್ಲಾ ವಸ್ತುಗಳನ್ನೂ ಆ ವಿಷ್ಣುಭಕ್ತನ ಮನೆಗೆ ತಂದು ಅವನ ಹೆಂಡತಿಯಲ್ಲಿ ಒಪ್ಪಿಸಿ ಅವಳಿಗೆ ನಮಸ್ಕಾರ ಮಾಡಿ ವಾಪಸು ಹೋಗುವಷ್ಟರಲ್ಲಿಯೇ ಅಂತರ್ಧಾನವನ್ನು ಹೊಂದಿದನು. ಆ ಪುರುಷನು ಅಂತರ್ಧಾನ ಹೊಂದುವುದನ್ನು ನೋಡಿ ಆ ಸ್ತ್ರೀಯು ಬೆರಗಾದಳು. ಸಾಕ್ಷಾತ್ ವರದರಾಜನೇ ಅನುಗ್ರಹಿಸಲಿಕ್ಕೆ ಬಂದಿದ್ದಾನೆಂದು ಭಾವಿಸಿದಳು. ತನ್ನ ಪತಿಯನ್ನು ಬರಹೇಳಲು ಒಬ್ಬ ದೂತನನ್ನು ಕಳುಹಿಸಿಕೊಟ್ಟಳು. ತಾನು ಅಡಿಗೆಯನ್ನು ಆರಂಭಿಸಿದಳು.

ಪತಿಯು ಬಂದು ಎಲ್ಲ ವೃತ್ತಾಂತವನ್ನು ಕೇಳಿ ತಿಳಿದುಕೊಂಡು ಬಹಳ ಆಶ್ಚರ್ಯಪಟ್ಟನು. ಬಹಳ ಸಂತೋಷಪಟ್ಟನು. ಮತ್ತಿಷ್ಟು ಪರಮಾತ್ಮನಲ್ಲಿ ಭಕ್ತಿಯನ್ನು ಅಭಿವೃದ್ಧಿ ಮಾಡಿಕೊಂಡು ಆ ಗೀತಾ ಶ್ಲೋಕಕ್ಕೆ ಹಚ್ಚಿದ ಮಸಿಯನ್ನು ತೊಳೆದನು. ಕಂಚಿ ವರದರಾಜನ ದರ್ಶನಕ್ಕಾಗಿ ಹೋದನು. ಆವಾಗ ಮಸಿ ಇಲ್ಲದ್ದನ್ನು ನೋಡಿ **"ಗೀತಾ ಮೇ ಪರಮಂ ರೂಪಂ =** ಗೀತೆಯು ನನ್ನ ಉತ್ತಮ ಸ್ವರೂಪವಾಗಿದೆ" ಎಂದು ಗೀತಾಮಾಹಾತ್ಮ್ಯೆಯಲ್ಲಿ ಹೇಳಿದ್ದು ನಿಜ-ವೆಂದು ತಿಳಿದನು. ಅನಂತರ ನಿತ್ಯದಲ್ಲಿಯೂ ಹಿಂದಿನಕ್ಕಿಂತಲೂ ವಿಶೇಷ ಆಸಕ್ತಿಯಿಂದ ಗೀತಾ ಪ್ರವಚನವನ್ನು ಮಾಡುತ್ತಿದ್ದನು.

ಈ ದೃಷ್ಟಾಂತದಿಂದ ಪರಮಾತ್ಮನು ತನ್ನ ಭಕ್ತರ ಐಹಿಕ ಯೋಗಕ್ಷೇಮವನ್ನು ವಹಿಸುತ್ತಾನೆಂದು ತಿಳಿಯಬಹುದು. ಶಾಶ್ವತವಾದ ಮೋಕ್ಷವೆಂಬ ಯೋಗಕ್ಷೇಮ-ವನ್ನು ವಹಿಸುವದು ನಿಶ್ಚಿತ, ಅದರಲ್ಲಿ ಸಂದೇಹವೇ ಇಲ್ಲ. ಐಹಿಕ ಯೋಗಕ್ಷೇಮ-ವನ್ನು ಕೆಲವರಿಗೆ ಕೊಡಬಹುದು. ಪ್ರಾರಬ್ಧ ಪಾಪ ಉಳ್ಳವರಿಗೆ ಕೊಡದೆ ಇರಬಹುದು ಎಂದು ತಿಳಿಯಬೇಕು.

"ಈ ತರಹದ ಶುದ್ಧ ಭಾಗವತರು ನನ್ನನ್ನೇ ಹೊಂದುವದು ಮಾತ್ರವಲ್ಲದೆ ಅವರು ಏನು ಅಪೇಕ್ಷಿಸುತ್ತಾರೋ ಅದೆಲ್ಲವು ಸಿಗುತ್ತದೆ. ಇತರ ದೇವತೆಗಳನ್ನು

ಉದ್ದೇಶಿಸಿ ಯಜ್ಞಮಾಡತಕ್ಕವರು, ಪಿತೃಗಳನ್ನೇ ಉದ್ದೇಶಿಸಿ ಶ್ರಾದ್ಧಾದಿಗಳನ್ನು ಮಾಡತಕ್ಕವರು, ಭೂತಗಳನ್ನು ಉದ್ದೇಶಿಸಿ ಭೂತಗಳ ಪೂಜೆ ಮಾಡತಕ್ಕವರು, ದೇವತಾ ಪಿತೃ ಭೂತಗಳನ್ನೇ ಹೊಂದುವರೇ ಹೊರತು ನನ್ನನ್ನು ಹೊಂದಲಾರರು. ಅವರು ಶಾಸ್ತ್ರದ ವಿಧಿ ಪ್ರಕಾರ ಕರ್ಮ ಮಾಡಿಲ್ಲ. 'ನಾನು ಸರ್ವಯಜ್ಞಭೋಕ್ತನು, ಸರ್ವರಿಗೂ ಸ್ವಾಮಿಯಾಗಿದ್ದೇನೆ' ಎಂಬ ವಿಷಯವೇ ಅವರಿಗೆ ತಿಳಿಯಲಾರದು. ಅದಕ್ಕಾಗಿ ನನ್ನ ಪ್ರಾಪ್ತಿಯು ಅವರಿಗಿಲ್ಲ.

'ಮಹಾಪುರುಷನಾದ ನನ್ನ ಪೂಜೆ ಮಾಡುವುದು ಅಲ್ಪಶಕ್ತಿ ಉಳ್ಳ ಜನರಿಗೆ ಸಾಧ್ಯವೇ?' ಎಂದು ಸಂಶಯ ಮಾಡಬೇಡ. ನನ್ನ ಪೂಜೆ ಮಾಡುವುದು ಸುಲಭವಾಗಿದೆ. ಶಾಸ್ತ್ರವಿಹಿತ ಪತ್ರ, ಪುಷ್ಪ, ಫಲ ಮತ್ತು ನೀರಿನಿಂದ ಭಕ್ತಿ-ಪೂರ್ವಕವಾಗಿ ನನಗೆ ಪೂಜಿಸಿದರೆ ನಾನು ಅದನ್ನು ಸ್ವೀಕರಿಸುತ್ತೇನೆ. ಪೂರ್ಣ-ಕಾಮನಾದ ನನಗೆ ಯಾವುದರ ಅಪೇಕ್ಷೆಯೂ ಇಲ್ಲ. ಆದುದರಿಂದ ನಾನು ಭಕ್ತಿಯಿಂದಲೇ ಸಂತುಷ್ಟನಾಗುತ್ತೇನೆ. ಪೂಜಾಸಾಧನವಾದ ವಸ್ತುಗಳು ಅವರವರ ಶಕ್ತ್ಯಾನುಸಾರ ಇದ್ದರೆ ಸಾಕು.

ವಿಹಿತಕರ್ಮವನ್ನು ಏನು ಮಾಡುತ್ತೀಯೋ, ಏನು ಹೋಮ ಮಾಡುತ್ತೀಯೋ, ಸತ್ಪಾತ್ರನಿಗೆ ಏನು ದಾನ ಮಾಡುತ್ತೀಯೋ, ಏನು ತಪಸ್ಸು ಮಾಡುತ್ತೀಯೋ ಅದೆಲ್ಲವನ್ನು ನನಗೆ ಅರ್ಪಿಸು. ಇದರಿಂದ ಕರ್ಮಬಂಧದಿಂದ ಮುಕ್ತನಾಗುವಿ.

ಇಲ್ಲಿ ಪತ್ರ-ಪುಷ್ಪ-ಫಲ-ತೋಯ ಶಬ್ದಗಳಿಗೆ ಇನ್ನೊಂದು ಅರ್ಥವನ್ನು ತಿಳಿದು-ಕೊಳ್ಳಬೇಕು. ಪತ್ರವೆಂದರೆ **"ಛಂದಾಂಸ್ಯಸ್ಯ ಪರ್ಣಾನಿ"** ಎಂದು ಶ್ರೀಕೃಷ್ಣಪರಮಾತ್ಮನು ಇನ್ನು ಮುಂದೆ ಹೇಳುವಂತೆ ವೇದಗಳೇ ಜಗದ್ವೃಕ್ಷದ ಎಲೆಗಳು. ಆದುದರಿಂದ ಪತ್ರ ಸಮರ್ಪಣೆಯೆಂದರೆ ಸಕಲ ವೇದಗಳನ್ನು ಶಕ್ತ್ಯನುಸಾರ ಅಧ್ಯಯನ ಮಾಡಿ ಅರ್ಥವನ್ನು ತಿಳಿದುಕೊಂಡು ಸಕಲವೇದ-ಪ್ರತಿಪಾದ್ಯನು ಪರಮಾತ್ಮನೆಂದು ತಿಳಿದುಕೊಳ್ಳುವುದು. ಇನ್ನು ಪುಷ್ಪಸಮರ್ಪಣೆ ಎಂದರೆ **"ಅಹಿಂಸಾ ಪ್ರಥಮಂ ಪುಷ್ಪಂ"** ಇತ್ಯಾದಿ ಪ್ರಮಾಣಗಳಲ್ಲಿ ಹೇಳಿರುವ

ಅಹಿಂಸಾ, ಇಂದ್ರಿಯನಿಗ್ರಹ, ಸರ್ವಭೂತದಯಾ, ಕ್ಷಮಾ, ಜ್ಞಾನ, ತಪಸ್ಸು, ಸತ್ಯ, ಮತ್ತು ಧ್ಯಾನ ಎಂಬ ಪರಮಾತ್ಮನಿಗೆ ಅತ್ಯಂತ ಪ್ರೀತಿಕರವಾದ ಎಂಟು ಪುಷ್ಪಗಳನ್ನು ಆಚರಣೆ ಮಾಡುವುದು. ಇದರಿಂದ ವಿಶೇಷವಾದ ಪುಷ್ಪವನ್ನು ಸಮರ್ಪಿಸಿದಂತಾಯಿತು. ಫಲಸಮರ್ಪಣೆಯೆಂದರೆ ಫಲತ್ಯಾಗಪೂರ್ವಕವಾಗಿ ಕರ್ಮಾನುಷ್ಠಾನ ಮಾಡುವುದು. ತೋಯಸಮರ್ಪಣೆಯೆಂದರೆ ಹೃದಯದಲ್ಲಿ ಪರಮಾತ್ಮನ ರೂಪವನ್ನು ಧ್ಯಾನಿಸುತ್ತ ಆನಂದಭಾಷ್ಪಧಾರೆಯನ್ನು ಸುರಿಸುವುದೇ ಆಗಿರುತ್ತದೆ ಎಂದು ತಿಳಿಯಬೇಕು. (ಹದಿನೇಳನೇ ದಿವಸದ ಉಪನ್ಯಾಸವು ಮುಗಿಯಿತು.)

***

ಶ್ರೀಕೃಷ್ಣ ಪರಮಾತ್ಮನು ಅರ್ಜುನನಿಗೆ ಉಪದೇಶ ಮಾಡುತ್ತಿದ್ದಾನೆ: "ಎಲೋ ಅರ್ಜುನಾ! ನಾನು ಮಹಾಪುರುಷನಾದ ಪ್ರಯುಕ್ತ ನನ್ನ ಪೂಜೆಯು ಅಲ್ಪರಿಂದ ಮಾಡಲು ಸಾಧ್ಯವಿಲ್ಲವೆಂದು ನೀನು ಶಂಕಿಸಿದ್ದಕ್ಕೆ ಪತ್ರ ಪುಷ್ಪಾದಿಗಳಿಂದ ಭಕ್ತಿಯಿಂದ ಅವರವರ ಶಕ್ತ್ಯನುಸಾರ ಅವರು ಪೂಜಾ ಮಾಡಿದ್ದನ್ನು ನಾನು ಸ್ವೀಕರಿಸುತ್ತೇನೆ ಎಂದು ಸಮಾಧಾನ ಹೇಳಿದೆನು. ಇಷ್ಟೇ ಅಲ್ಲದೆ ಮನುಷ್ಯನು ತನ್ನ ಕುಟುಂಬ ಪೋಷಣಾದಿ ಎಲ್ಲಾ ಅವಶ್ಯಕ ಕರ್ಮವನ್ನು ಏನು ಮಾಡುತ್ತಾನೋ ಅದನ್ನು ಅರ್ಪಿಸಿದರೂ ಸಾಕು. ಅಂದರೆ ಕುಟುಂಬ ಪೋಷಣೆಯನ್ನು ಭಗವಂತನ ಪೂಜೆಯೆಂದು ತಿಳಿದು ಭಕ್ತಿಪೂರ್ವಕವಾಗಿ ನನಗೆ ಅರ್ಪಿಸಿದರೆ ನಾನು ಪ್ರೀತ-ನಾಗುತ್ತೇನೆ.

ದೊಡ್ಡ ಯಜ್ಞಾದಿ ಕರ್ಮಗಳನ್ನು ಮಾಡಲು ಶಕ್ಯವಿಲ್ಲದಿದ್ದರೆ ಬೇಡ. ನೀನು ಏನು ಊಟ ಮಾಡುತ್ತಿ ಅದನ್ನು ಮೊದಲು ನನಗೆ ಅರ್ಪಿಸಿದರೆ ಆಯಿತು. ಅಂತೂ ನೀನು ಏನು ಮಾಡುತ್ತೀಯೋ – ದಾನ, ತಪಸ್ಸು, ಹೋಮ, ಮುಂತಾದದ್ದು ಅದೆಲ್ಲವನ್ನು ನನಗೆ ಅರ್ಪಣ ಮಾಡು. ಭಕ್ತಿಪೂರ್ವಕವಾದ ಈ ತರಹದ ಪೂಜೆಯಿಂದಲೂ ನಾನು ನಿನ್ನನ್ನು ಮುಕ್ತನನ್ನಾಗಿ ಮಾಡುತ್ತೇನೆ.

ನಾನು ಭಕ್ತರ ಮೇಲೆ ಪ್ರೀತಿ ಉಳ್ಳವನೆಂದು ಹೇಳಿದಾಗ ಅಭಕ್ತರಲ್ಲಿ ದ್ವೇಷ ಮಾಡತಕ್ಕವನೆಂದು ಅರ್ಥಮಾಡಿಕೊಂಡು, 'ಲೋಕದಲ್ಲಿ ಪ್ರಭುಗಳು ಅಲ್ಪಭಕ್ತರಿಗೆ ಬೇಕಾದಷ್ಟು ಕೊಟ್ಟು ಅನುಗ್ರಹಿಸುವರು. ಸ್ವಲ್ಪ ದ್ವೇಷ ಮಾಡಿದವನ ಮೇಲೆ ವಿಪರೀತ ಸಿಟ್ಟಿಗೆದ್ದು ಅವನನ್ನು ಶಿಕ್ಷಿಸುವರು. ಅದೇ ರೀತಿ ನಾನು ಕೂಡ ಅಲ್ಪ ಭಕ್ತನಲ್ಲಿ ಬಹಳ ಪ್ರೇಮ ಮಾಡುವುದು, ಸ್ವಲ್ಪ ದ್ವೇಷವುಳ್ಳವನಿಗೆ ಬಹಳ ಶಿಕ್ಷೆ ಕೊಡುವುದನ್ನು ಮಾಡುತ್ತಾ ವಿಷಮನಾಗಿದ್ದೇನೆ' ಎಂದು ಶಂಕಿಸಬೇಡ. ನಾನು ಅವರ ಭಕ್ತಿಗೆ ಸಮಾನವಾದ ಪ್ರೇಮ ಮಾಡತಕ್ಕವನು; ದ್ವೇಷಕ್ಕೆ ಸರಿಯಾದ ಶಿಕ್ಷೆ ಕೊಡತಕ್ಕವನು. ದೈತ್ಯರನ್ನು ಸಂಹಾರ ಮಾಡುತ್ತೇನೆ, ದೇವತೆಗಳನ್ನು ರಕ್ಷಣ ಮಾಡುತ್ತೇನೆ ಎಂಬ ಕಾರಣದಿಂದ ದೈತ್ಯ ಜಾತಿಯ ಮೇಲೆ ದ್ವೇಷವಿದೆ, ದೇವ-ಜಾತಿಯ ಮೇಲೆ ಪಕ್ಷಪಾತವಿದೆಯೆಂದು ತಿಳಿದುಕೊಳ್ಳಬೇಡ. ದೈತ್ಯಜಾತಿಯಲ್ಲಿ ಹುಟ್ಟಿದ ಪ್ರಹ್ಲಾದನ ಮೇಲೆ ನನಗೆ ತುಂಬಾ ಪ್ರೇಮವಿದೆ. ಆದುದರಿಂದ ದೈತ್ಯ ಅಥವಾ ದೇವಜಾತಿಯ ಪಕ್ಷಪಾತವು ನನಗಿಲ್ಲ.

ಭಕ್ತರು ಯಾವ ಜಾತಿಯಲ್ಲೇ ಇರಲಿ ಅವರ ಮೇಲೆ ಪ್ರೇಮ ಮಾಡುವುದು ನನ್ನ ಸ್ವಭಾವ. ಅಗ್ನಿಯು ತನ್ನ ಸಮೀಪದಲ್ಲಿರುವವರ ಶೀತಬಾಧೆಯನ್ನು ಪರಿಹರಿ-ಸುತ್ತದೆ. ದೂರ ಹೋದವರ ಶೀತಬಾಧೆಯನ್ನು ಪರಿಹರಿಸುವದಿಲ್ಲ. ಕಲ್ಪವೃಕ್ಷವು ತನ್ನ ಸೇವೆ ಮಾಡಿದವರಿಗೆ ಫಲವನ್ನು ಕೊಡುತ್ತದೆ. ಸೇವೆ ಮಾಡದಿದ್ದವರಿಗೆ ಕೊಡುವದಿಲ್ಲ. ಹೀಗೆ ಮಾಡುವುದರಿಂದ ಅಗ್ನಿ ಮತ್ತು ಕಲ್ಪವೃಕ್ಷಗಳ ಮೇಲೆ ವೈಷಮ್ಯ ದೋಷಗಳನ್ನು ಯಾರೂ ಆರೋಪಿಸುವದಿಲ್ಲ. ಆ ರೀತಿ ಮಾಡುವದು ಅವುಗಳ ಸ್ವಭಾವ. ಹಾಗೆಯೇ ಭಕ್ತರ ಭಕ್ತ್ಯನುಸಾರವಾಗಿ ಅವರನ್ನು ಉದ್ಧಾರ ಮಾಡುವದು, ದ್ವೇಷಿಗಳ ದ್ವೇಷಕ್ಕೆ ಅನುಸಾರವಾಗಿ ಅವರನ್ನು ಶಿಕ್ಷಿಸುವದು ರಾಗದ್ವೇಷ ಮೂಲಕವಲ್ಲ, ನನ್ನ ಸ್ವಭಾವವೇ ಆಗಿದೆ. ಇದನ್ನೂ ವೈಷಮ್ಯ ದೋಷವೆಂದು ಹೇಳುವದಾದರೆ ಲೋಕದಲ್ಲಿ ರಾಜಾದಿಗಳು ಮತ್ತು ಯಮದೇವರು ಕೂಡ ವೈಷಮ್ಯ ದೋಷಗಳುಳ್ಳವರಾಗಬೇಕಾಗುತ್ತದೆ. ಯಮದೇವರು ಪಾಪಿಗಳ ಪಾಪಾನುಸಾರ-ವಾಗಿ ಶಿಕ್ಷೆ ಕೊಡುತ್ತಾರೆ. ಈ ಯಮದೇವರಿಗೆ ಸಮವರ್ತಿ ಎಂದು ಹೆಸರು

ಪ್ರಸಿದ್ಧವಾಗಿದೆ. ಸಮವರ್ತಿಯೆಂದರೆ ಎಲ್ಲರಿಗೂ ಸಮಾನವಾಗಿ ಇರತಕ್ಕವನು ಎಂದರ್ಥ. ಕೆಲವರಿಗೆ ಶಿಕ್ಷೆ, ಕೆಲವರಿಗೆ ಸ್ವರ್ಗಸುಖ ಈ ತರಹವಾದ ವಿಷಮವಾದ ಫಲವನ್ನು ಕೊಟ್ಟರೂ ಅವರವರ ಕರ್ಮಕ್ಕನುಗುಣವಾಗಿ ಆವಾವ ಫಲವನ್ನು ಕೊಡುವ ಪ್ರಯುಕ್ತ ಯಮದೇವರಿಗೆ ಸಮವರ್ತಿಯೆಂಬ ಹೆಸರು ಯುಕ್ತವೇ ಆಗಿದೆ. ರಾಜರುಗಳು ಕೂಡ ಪ್ರಜೆಗಳ ಸೇವೆ ಅಥವಾ ಅಪರಾಧಕ್ಕೆ ಅನುಸಾರವಾಗಿ ರಕ್ಷಣ ಅಥವಾ ಶಿಕ್ಷೆ ಮಾಡುತ್ತಿದ್ದಾರೆ. ಆ ರಾಜರುಗಳೂ ಸ್ತುತ್ಯರೇ ಆಗಿರುತ್ತಾರೆ. ಈ ದೃಷ್ಟಾಂತಗಳಿಂದ ನಾನು ಎಲ್ಲ ಪ್ರಾಣಿಗಳಲ್ಲೂ ಸಮದೃಷ್ಟಿ ಉಳ್ಳವನೆಂದು ತಿಳಿದುಕೊಳ್ಳಬೇಕು.

ನನ್ನನ್ನು ಸಂತೋಷಪಡಿಸಲಿಕ್ಕೆ ಭಕ್ತಿಯೇ ಮುಖ್ಯ ಸಾಧನವು. ದೇವತೆಗಳು, ಋಷಿಗಳು ನನ್ನಲ್ಲಿ ಬಹಳ ಭಕ್ತಿ ಮಾಡುತ್ತಾರೆ. ಒಮ್ಮೊಮ್ಮೆ ತಮ್ಮ ಯೋಗ್ಯತೆಯನ್ನು ಮೀರಿ ನನ್ನ ಸೇವೆ ಮಾಡುತ್ತಾರೆ. ಇದಕ್ಕೆ ಉದಾಹರಣೆ, ಶೇಷದೇವರ ಅವತಾರಿಯಾದ ಲಕ್ಷ್ಮಣ. ಅವನು ನನ್ನ ರಾಮಾವತಾರ ಕಾಲದಲ್ಲಿ ತನ್ನ ಯೋಗ್ಯತೆ ಮೀರಿ ಸೇವೆ ಮಾಡಿದನು. ಯೋಗ್ಯತೆ ಮಿಕ್ಕಿ ಮಾಡಿದ ಪುಣ್ಯವನ್ನು ನಾನು ಸಹಿಸುವದಿಲ್ಲ. ಅವರವರ ಯೋಗ್ಯತೆಗೆ ಸರಿಯಾಗಿ ಅವರವರು ಇರಬೇಕೆಂದೇ ನನ್ನ ಸಂಕಲ್ಪ. ಈ ಯೋಗ್ಯತೆ ಮೀರಿ ಮಾಡಿದ ಪುಣ್ಯವನ್ನು ನಾಶ ಮಾಡುವದಕ್ಕೋಸ್ಕರ ಮಹಾ ಪಾಪಕರ್ಮಗಳನ್ನು ನಾನು ಮಾಡಿಸುತ್ತೇನೆ. ಹಿಂದೊಮ್ಮೆ ಚಂದ್ರದೇವರು ಯೋಗ್ಯತೆ ಮೀರಿ ಪುಣ್ಯ ಮಾಡಿದಾಗ ಆ ಪುಣ್ಯ-ನಾಶಕ್ಕಾಗಿ ಬೃಹಸ್ಪತಿಯರ ಪತ್ನಿಯಾದ ತಾರಾದೇವಿಯರನ್ನು ಅಪಹರಿಸಿ ಆ ಪುಣ್ಯವನ್ನು ಕಳೆದುಕೊಂಡರು. ಸುಗ್ರೀವನೆಂಬ ಕಪಿಯೂ ಯೋಗ್ಯತೆ ಮಿಕ್ಕಿ ಮಾಡಿದ ಪುಣ್ಯವನ್ನು ತನ್ನ ಅಣ್ಣನಾದ ವಾಲಿಯ ಪತ್ನಿಯಾದ ತಾರೆಯನ್ನು ಅಪಹರಿಸಿ ಕಳೆದುಕೊಂಡನು. ಲಕ್ಷ್ಮಣನು ನನ್ನ ಅಣ್ಣನಾಗಿ ಬಲರಾಮ ಎಂಬ ಹೆಸರಿನಿಂದ ಅವತರಿಸಿ, ಅಣ್ಣನಾದ ಬಲರಾಮನ ಸೇವೆಯನ್ನು ನಾನು ಮಾಡಿದಾಗ ಪುಣ್ಯನಾಶ ಮಾಡಿಕೊಂಡನು.

ಈ ರೀತಿ ದೇವ, ಋಷ್ಯಾದಿಗಳು ಮಹಾದುರಾಚಾರವನ್ನು ಮಾಡಿದರೂ ಅವರನ್ನು ಸಜ್ಜನರೆಂದೇ ತಿಳಕೊಳ್ಳಬೇಕು. ಅವರು ನನ್ನ ಭಕ್ತರೇ ಆಗಿದ್ದಾರೆ.

ಅವರು ಯಥಾರ್ಥಜ್ಞಾನದ ನಿಶ್ಚಯವುಳ್ಳವರಾಗಿದ್ದಾರೆ. ಸ್ವಲ್ಪ ಕಾಲದಲ್ಲಿ ಅವರು ದುರಾ-ಚಾರ ಮಾಡಿದರೂ ಮತ್ತೆ ಕೂಡಲೇ ಧರ್ಮಮೂರ್ತಿಗಳಾಗುತ್ತಾರೆ. ಆದ್ದರಿಂದ ಅವರು ಉತ್ಕೃಷ್ಟವಾದ ಮಹಾಫಲವನ್ನೇ ಹೊಂದುತ್ತಾರೆ. ಮಧ್ಯಕಾಲದಲ್ಲಿ ಮಹಾದುರಾಚಾರ ಮಾಡಿದಾಗ್ಯೂ ಅನನ್ಯ ಭಕ್ತರಾಗಿ ಇದ್ದು ವಿಶೇಷವಾದ ಧರ್ಮಾಚರಣೆಯನ್ನು ಮಾಡುವವರಿಗೆ ಎಂದೂ ವಿನಾಶವಿಲ್ಲವೆಂದು ತಿಳಿದುಕೋ.

ಇದು ದೇವತೆಗಳಿಗೆ, ಋಷಿಗಳಿಗೆ ಮಾತ್ರ. ಮನುಷ್ಯರಾದವರು ದುರಾಚಾರಿಗಳಾದರೆ ಮಹಾಪಾಪಿಗಳಾಗಿ ಅದರ ಫಲವಾದ ನರಕವನ್ನು ಅನುಭೋಗಿಸಲೇಬೇಕಾಗುತ್ತದೆ. ದೇವಋಷ್ಯಾದಿಗಳು ದುರಾಚಾರ ಮಾಡಿದಾಗ್ಯೂ ಯೋಗ್ಯತೆ ಮೀರಿ ಮಾಡಿದ ಪುಣ್ಯವು ನಾಶವಾಗುತ್ತದೆಯಷ್ಟೇ ಹೊರತು ಪಾಪದಿಂದ ನರಕವನ್ನು ಅನುಭವಿಸುವದಿಲ್ಲ. ಇದು ಮನುಷ್ಯರಿಗಿಂತ ದೇವಋಷ್ಯಾದಿಗಳಲ್ಲಿ ಇರುವ ವಿಶೇಷ. ಮನುಷ್ಯರು ಕೂಡ ಮಹಾ ದುರಾಚಾರಿಗಳಾಗಿದ್ದು ಮಹಾತ್ಮರ ಉಪ-ದೇಶದಿಂದ ಮತ್ತೆ ಸನ್ಮಾರ್ಗಗಾಮಿಗಳಾಗಿ ನನ್ನಲ್ಲಿ ಭಕ್ತಿ ಮಾಡಿದರೆ ಅವರನ್ನು ಸಜ್ಜನರೆಂದೇ ತಿಳಿದುಕೊಳ್ಳಬೇಕು."

ದುರಾಚಾರಿಗಳಾದವರಿಗೆ ಉಪದೇಶ ಮಾಡಬಾರದೆಂದು ನಿಯಮ ಮಾಡಬಾರದು. ಹಾಗೆ ನಿಯಮ ಮಾಡಿದರೆ ಅನ್ಯೋನ್ಯಾಶ್ರಯ ದೋಷವು ಪ್ರಾಪ್ತವಾಗುವದು. ಹೇಗೆಂದರೆ ಸ್ವಾಭಾವಿಕವಾಗಿ ಜನರು ದುರಾಚಾರಿ-ಗಳಾಗಿರುತ್ತಾರೆ. ಅವರು ಉಪದೇಶ ಮಾಡದ ವಿನಹ ಸದಾಚಾರಿಗಳಾಗಲಾರರು. ಸದಾಚಾರಿಗಳಾಗದೆ ಉಪದೇಶ ಮಾಡುವದಿಲ್ಲವೆಂದು ನಿಯಮ ಮಾಡಿದರೆ 'ಹುಚ್ಚು ಬಿಡದೆ ಮದುವೆಯಾಗದು, ಮದುವೆಯಾಗದೆ ಹುಚ್ಚು ಬಿಡದು' ಎಂಬಂತೆ ಆಗುತ್ತದೆ. ಆದುದರಿಂದ ದುರಾಚಾರಿಗಳಾಗಿದ್ದರೂ ಉಪದೇಶ ಮಾಡಿ ಅವರು ಸನ್ಮಾರ್ಗಕ್ಕೆ ಬರುತ್ತಾರೆಂದು ಪರೀಕ್ಷಿಸಬೇಕು. ಸನ್ಮಾರ್ಗಕ್ಕೆ ಬರುವ ಚಿಹ್ನೆ ಕಂಡರೆ ಮತ್ತೂ ವಿಶೇಷವಾದ ಉಪದೇಶವನ್ನು ಮಾಡಬೇಕು. ಅಂಥವರನ್ನು

ಸಜ್ಜನರೆಂದೇ ಭಾವಿಸಿ ಪ್ರೇಮಪೂರ್ವಕವಾಗಿ ಅವರಿಗೆ ಉಪದೇಶಿಸಿ ಅವರನ್ನು ಉದ್ಧಾರ ಮಾಡಲು ಯತ್ನ ಮಾಡಬೇಕು.

"ನನ್ನ ಭಕ್ತಿಯ ಮಹಿಮೆ ಹೀಗಿದೆ: ಈ ಜೀವರಾಶಿಗಳು ಪಾಪಯೋನಿಗಳಾದ ಕಿರಾತ, ಊಣ, ಪುಲಿಂಗ, ಪುಲ್ಕಸ ಮೊದಲಾದ ಜಾತಿಗಳಲ್ಲಿ ಹುಟ್ಟಿದರೂ, ಹಾಗೆಯೇ ಸ್ತ್ರೀಯರಾಗಿ, ವೈಶ್ಯರಾಗಿ, ಶೂದ್ರರಾಗಿ ಹುಟ್ಟಿದರೂ ನನ್ನನ್ನು ಆಶ್ರಯಿಸಿ ನನ್ನ ಭಕ್ತಿಯ ಪ್ರಭಾವದಿಂದ ಉತ್ತಮ ಗತಿಯನ್ನೇ ಹೊಂದುತ್ತಾರೆ. ಹೀಗಿರುವಾಗ ಮಹಾಪುಣ್ಯಶಾಲಿಗಳಾದ ಬ್ರಾಹ್ಮಣರುಗಳು ಹಾಗೆಯೇ ರಾಜರ್ಷಿಗಳು ಉತ್ತಮ ಗತಿಯನ್ನು ಹೊಂದುತ್ತಾರೆಂದು ಏನು ಹೇಳತಕ್ಕದ್ದು!

ಜೀವನ ಸ್ವರೂಪವು ಬ್ರಾಹ್ಮಣನಾಗಿದ್ದು ಪಾಪಕರ್ಮಾಧೀನವಾಗಿ ಶೂದ್ರಾದಿ ದೇಹವನ್ನು, ಹಾಗೆಯೇ ಪುರುಷರು ಪಾಪಾಧೀನವಾಗಿ ಸ್ತ್ರೀದೇಹವನ್ನು ಹೊಂದುವದು ಶಾಸ್ತ್ರಸಿದ್ಧವಾದ ವಿಚಾರ. ಹಾಗೆಯೇ ಜೀವಸ್ವರೂಪದಲ್ಲಿ ಶೂದ್ರರಾಗಿದ್ದು ಪುಣ್ಯಕರ್ಮದಿಂದ ಬ್ರಾಹ್ಮಣಾದಿ ದೇಹವನ್ನು ಹೊಂದುವುದಿದೆ. ಈ ರೀತಿಯಾಗಿ ತಮ್ಮ ತಮ್ಮ ಸ್ವರೂಪಕ್ಕೆ ವಿಪರೀತವಾದ ದೇಹವನ್ನು ಪಾಪಪುಣ್ಯಗಳ ಫಲವಾಗಿ ಹೊಂದಿದ ಜೀವರು ಕೂಡ ನನ್ನನ್ನು ಆಶ್ರಯಿಸಿ ಮುಕ್ತಿಯನ್ನು ಪಡೆಯುತ್ತಾರೆ. ಹೀಗಿರುವಾಗ ತಮ್ಮ ತಮ್ಮ ಜೀವಸ್ವರೂಪಕ್ಕೆ ಯೋಗ್ಯವಾದ ದೇಹವನ್ನು ಧರಿಸಿಕೊಂಡಿರತಕ್ಕ ಬ್ರಾಹ್ಮಣಾದಿಗಳು ನನ್ನನ್ನು ಆಶ್ರಯಿಸಿ ಮುಕ್ತಿಯನ್ನು ಹೊಂದುತ್ತಾರೆಂದು ಏನು ಹೇಳತಕ್ಕದ್ದು!"

ಪುರುಷರಿಗೆ ಸ್ತ್ರೀ ದೇಹವು ಬರುವ ಹಾಗೆ ಸ್ತ್ರೀ ಸ್ವರೂಪಿಯಾದ ಜೀವನಿಗೆ ಪುರುಷ ದೇಹವೇ ಬರುವದಿಲ್ಲ. ಆದರೆ ಮಹಾಭಾರತದಲ್ಲಿ ಒಂದು ಕಥೆ ಇದೆ. ದ್ರುಪದ ಮಹಾರಾಜನು ರುದ್ರದೇವರಲ್ಲಿ ತಪಸ್ಸು ಮಾಡಿ ಗಂಡು ಮಗುವನ್ನು ಅಪೇಕ್ಷಿಸಿದಾಗ ರುದ್ರ ದೇವರು ಮೊದಲು ಸ್ತ್ರೀಯಾಗಿ ಹುಟ್ಟಿ ಮತ್ತೆ ಪುರುಷನಾಗುತ್ತಾನೆಂದು ವರ ಕೊಟ್ಟರು. ಆ ಧೈರ್ಯದಿಂದ, ರುದ್ರದೇವರ ವರಬಲದಿಂದ ಹುಟ್ಟಿದ ಹೆಣ್ಣು ಕೂಸನ್ನು ಪುರುಷವೇಷದಿಂದ ಅಲಂಕರಿಸುತ್ತ ಬೆಳೆಸಿದನು. ಯೌವನಾವಸ್ಥೆಯಲ್ಲಿ ದಶಾರ್ಣಾಧಿಪತಿಯ ಮಗಳನ್ನು ಲಗ್ನ

ಮಾಡಿದನು. ದಶಾರ್ಣಾಧಿಪತಿಯು ಆ ದ್ರುಪದ ರಾಜನ ಅನ್ಯಾಯದ ಕಥೆಯನ್ನು ತಿಳಿದು ಅದನ್ನು ಸ್ಪಷ್ಟ ಪರೀಕ್ಷಿಸಿ ಅದಕ್ಕೆ ಸರಿಯಾದ ಶಿಕ್ಷೆಯನ್ನು ಕೊಡಬೇಕೆಂದು ಉದ್ಯುಕ್ತನಾದನು. ದ್ರುಪದರಾಜನು ಬಹಳ ಚಿಂತಾಕ್ರಾಂತನಾದನು. ಆವಾಗ ತಂದೆಯ ಚಿಂತೆಯನ್ನು ನೋಡಿ ಆ ಹುಡುಗಿಯು ಮನೆಯಿಂದ ಹೊರಟೇಬಿಟ್ಟಳು.

ಅರಣ್ಯದಲ್ಲಿ ಹೋಗುತ್ತಾ ಇರುವಾಗ ತುಂಬುರು ಎಂಬ ಗಂಧರ್ವನು ಸಿಕ್ಕಿದನು. ಅವನಲ್ಲಿ ಈ ದುಃಖವನ್ನು ಹೇಳಿಕೊಂಡಾಗ ಅವನು ಕೃಪಾವಶನಾಗಿ ತನ್ನ ಪುರುಷದೇಹವನ್ನು ಆ ಸ್ತ್ರೀಗೆ ಕೊಟ್ಟು ಅವಳ ಸ್ತ್ರೀದೇಹವನ್ನು ತಾನು ಸ್ವೀಕರಿಸಿದನು. ಸ್ತ್ರೀದೇಹದಿಂದ ತುಂಬುರುವು ಅರಣ್ಯದಲ್ಲಿ ವಾಸ ಮಾಡುತ್ತಿರು-ವಾಗ ಗಂಧರ್ವಾಧಿಪತಿಯಾದ ಕುಬೇರನು ಆ ಸ್ಥಳಕ್ಕೆ ಬಂದನು. ಸ್ತ್ರೀದೇಹವುಳ್ಳ ತುಂಬುರುವೆಂಬ ಗಂಧರ್ವನು ಲಜ್ಜೆಯಿಂದ ಪೊದರುಗಳಲ್ಲಿ ಅಡಗಿಕೊಂಡು ಕುಳಿತುಕೊಂಡಿರುವಾಗ ಕುಬೇರನು ಅದನ್ನು ನೋಡಿ, 'ನೀನು ಈ ಸ್ತ್ರೀದೇಹವನ್ನೇ ಧರಿಸಿಕೊಂಡಿರು. ಮಹಾಭಾರತದ ಯುದ್ಧ ಮುಗಿಯುವ ತನಕ ನಿನಗೆ ಇದೇ ಗತಿಯಾಗಲಿ' ಎಂದು ಶಾಪಕೊಟ್ಟು ಹೋದನು. ದ್ರುಪದರಾಜನ ಮಗಳು ಗಂಧರ್ವದೇಹವನ್ನು ಸ್ವೀಕರಿಸಿ ಕೂಡಲೇ ಮನೆಗೆ ಹೋದಾಗ ಅಲ್ಲಿ ದಶಾರ್ಣಾ-ಧಿಪತಿಯಾದ ರಾಜನು ಪರೀಕ್ಷೆಗಾಗಿ ಬಂದಿದ್ದನು. ಆವಾಗ ದ್ರುಪದರಾಜನ ಮಗಳು ಗಂಡು ಆದದ್ದನ್ನು ನೋಡಿ ಆಶ್ಚರ್ಯವಾಗಿ ವಾಪಸು ಹೋದನು.

ಈ ದ್ರುಪದರಾಜನ ಮಗಳು ತಿರುಗಿ ಈ ದೇಹವನ್ನು ತುಂಬುರುವಿಗೆ ಕೊಡಲಿಕ್ಕಾಗಿ ತುಂಬುರುವಿನ ಸಮೀಪಕ್ಕೆ ಹೋದಾಗ ತುಂಬುರು ಹೇಳುತ್ತಾನೆ: 'ನನಗೆ ಕುಬೇರನ ಶಾಪವಿದೆ. ಈಗಲೇ ದೇಹವನ್ನು ವಾಪಸು ತೆಗೆದುಕೊಳ್ಳಲು ಸಾಧ್ಯವಿಲ್ಲ' ಎಂದು. ದ್ರುಪದರಾಜನ ಮಗಳು ಸಂತುಷ್ಟಳಾಗಿ ಆ ಪುರುಷದೇಹ-ದಿಂದಲೇ ತನ್ನ ಮನೆಗೆ ಹೋಗುತ್ತಾಳೆ. ಅಲ್ಲಿ ತಂದೆ ತಾಯಿಗಳು ಬಹಳ ಸಂತೋಷಪಟ್ಟರು. ಇದು ಮಹಾಭಾರತದ ಕಥೆ.

ಇಲ್ಲಿ ಸ್ತ್ರೀಗೆ ಪುರುಷದೇಹ ಬಂದುದು ಕಾಣುತ್ತದೆ. ಆದರೂ ಈ ಪುರುಷ ದೇಹದಲ್ಲಿ ತುಂಬುರು ಎಂಬ ಗಂಧರ್ವನ ಅಂಶ ಇದ್ದದರಿಂದ ಅದು ಯುಕ್ತವಾಯಿತು. ಪುರುಷನ ಅಂಶವೇ ಇಲ್ಲದೆ ಕೇವಲ ಸ್ತ್ರೀಜೀವಿಯು ಪುರುಷ

ದೇಹವನ್ನು ಹೊಂದಲಾರಳು ಎಂದು ಶ್ರೀಕೃಷ್ಣನ ಅಭಿಪ್ರಾಯ. ಆದುದರಿಂದ 'ಪುರುಷರು ಸ್ತ್ರೀಯರಾದಾಗ' ಎಂದು ಕೃಷ್ಣನು ಹೇಳಿದ್ದಾನೆ; 'ಸ್ತ್ರೀಯರು ಪುರುಷರಾದಾಗ' ಎಂದು ಹೇಳಲಿಲ್ಲ. ಪುರುಷರು ಸ್ತ್ರೀದೇಹವನ್ನು ಹೊಂದಿದರೂ ಆ ಕರ್ಮ ನಾಶವಾದಾಗ ಪುನಃ ಪುರುಷದೇಹವನ್ನೇ ಸ್ವೀಕರಿಸುತ್ತಾರೆ.

ಶ್ರೀಕೃಷ್ಣನು ಉಪದೇಶ ಮಾಡುತ್ತಾನೆ: "ಈ ಮನುಷ್ಯ ದೇಹವು ದುರ್ಲಭವಾದುದು. ಜೀವನು ಮಾಡಿದ ಪಾಪದಿಂದ ಪಶುಪಕ್ಷ್ಯಾದಿ ಯೋನಿಗಳೇ ಲೆಕ್ಕವಿಲ್ಲದಷ್ಟು ಪ್ರಾಪ್ತವಾಗುತ್ತವೆ. ಯಾವಾಗಲೋ ಒಮ್ಮೆ ಮನುಷ್ಯ ದೇಹವು ಪ್ರಾಪ್ತವಾಗುತ್ತದೆ. ಆ ಮನುಷ್ಯ ದೇಹದಲ್ಲೂ ವ್ಯರ್ಥವಾದ ಕಾಲವೇ ಹೆಚ್ಚು. ಪುರುಷನಿಗೆ ನೂರೇ ವರ್ಷ ಆಯುಷ್ಯ. ರಾಮಾವತಾರದಲ್ಲಿ ಎಲ್ಲರಿಗೂ ಸಹಸ್ರ ವರ್ಷ ಆಯುಷ್ಯವಿದ್ದರೂ ಅದು ವಿಶೇಷ ಕಾರಣದಿಂದ ಆದದ್ದು. ಸಾಮಾನ್ಯವಾಗಿ ನೂರುವರ್ಷ ಆಯುಷ್ಯವೆಂದು ನಿಯಮ. ಅದರಲ್ಲಿಯೂ ಜಿತೇಂದ್ರಿಯನಾಗದೇ ಇದ್ದವನಿಗೆ ಅರ್ಧಾಯುಷ್ಯ. ಆ ಆಯುಷ್ಯದಲ್ಲಿ ಅರ್ಧಭಾಗ ರಾತ್ರಿ. ಆಗ ಸಂಪೂರ್ಣ ನಿದ್ರಾಪರವಶನಾಗಿ ಕಾಲ ವ್ಯರ್ಥ ಮಾಡುತ್ತಾನೆ. ಉಳಿದ ಆಯುಷ್ಯದಲ್ಲಿ ಬಾಲ್ಯ ಕೌಮಾರಾದಿ ಅವಸ್ಥೆಯಲ್ಲಿ ಕ್ರೀಡೆಯಿಂದ ವ್ಯರ್ಥವಾಗಿ ಹೋಗುತ್ತವೆ. ವಾರ್ಧಕ್ಯದಲ್ಲಿ ದೇಹಬಲ, ಇಂದ್ರಿಯಬಲ ಇಲ್ಲದ ಮನುಷ್ಯನು ಅಸಮರ್ಥನಾಗಿ ಏನೂ ಮಾಡಲಾರನು. ಉಳಿದ ತಾರುಣ್ಯಾದಿ ಅವಸ್ಥೆಯಲ್ಲಿ ಕಾಮಭೋಗ ಲಂಪಟನಾಗಿ ಧರ್ಮವಿಮುಖನಾಗಿರುತ್ತಾನೆ. ಆದುದರಿಂದ ಒಳ್ಳೇ ಜಾಗ್ರತೆಯಿಂದ ಇದ್ದು ಈ ಮನುಷ್ಯಜನ್ಮವನ್ನು ಸಾರ್ಥಕ ಮಾಡಿಕೊಳ್ಳಬೇಕು. ಮನುಷ್ಯಯೋನಿ ಬಿಟ್ಟು ಯಾವ ಪಶುಪಕ್ಷ್ಯಾದಿ ಯೋನಿಯಲ್ಲಿ ಮೋಕ್ಷ ಸಾಧನವನ್ನು ಮಾಡಿಕೊಳ್ಳಲು ಸಾಧ್ಯವಿಲ್ಲ. ಮನುಷ್ಯಜನ್ಮದಿಂದ ಮಾತ್ರ ಮೋಕ್ಷವನ್ನು ಸಾಧಿಸಲು ಸಾಧ್ಯ. ಇಂಥ ದುರ್ಲಭವಾದ ಮತ್ತು ಅನಿತ್ಯವಾದ ಈ ದೇಹವನ್ನು ಹೊಂದಿದಾಗ ಆಲಸ್ಯವುಳ್ಳವನಾಗಿ ಸಾಧನ ಮಾಡದೆ ಇದ್ದರೆ ನಿನ್ನ ಉದ್ಧಾರವಾಗುವುದೇ ಅಶಕ್ಯವಾದೀತು. ಸಂಸಾರಸುಖಕ್ಕೆ ನೀನು ಮುಗ್ಧನಾಗಬೇಡ.

ಸಂಸಾರದ ಸುಖವನ್ನು ಈ ಉದಾಹರಣೆಯಿಂದ ತಿಳಿದುಕೋ: ಒಬ್ಬ ಮನುಷ್ಯನು ಅರಣ್ಯದಲ್ಲಿ ಸಂಚಾರ ಮಾಡುತ್ತಿರುವಾಗ ಹಿಂಬದಿಯಲ್ಲಿ ಹುಲಿಯು

ಬರುತ್ತಿರುವುದನ್ನು ನೋಡಿ ಭಯದಿಂದ ಓಡಿದನು. ದಾರಿಯಲ್ಲಿ ಪೊದರುಗಳಿಂದ ಮುಚ್ಚಿದ್ದ ಬಾವಿಯೊಂದನ್ನು ತಿಳಿಯದೆ ಅದರಲ್ಲಿ ತಲೆಕೆಳಗಾಗಿ ಬಿದ್ದನು. ಕಾಲಿಗೆ ಒಂದು ಆಧಾರವು ಸಿಕ್ಕಿದ್ದರಿಂದ ಅಲ್ಲಿಯೇ ಜೋತಾಡುತ್ತಿದ್ದನು. ಕೆಳಗೆ ನೋಡುವಾಗ ಒಂದು ಘಟಸರ್ಪವು ಭುಸುಗುಟ್ಟುತ್ತಿದೆ. ಮೇಲೆ ನೋಡಿದರೆ ಹುಲಿಯು ಇವನನ್ನು ಕಾಯುತ್ತಿದೆ. ಅಲ್ಲಿರತಕ್ಕ ಒಂದು ಜೇನುಗೂಡು ಇವನ ದೇಹದ ಸಂಪರ್ಕದಿಂದ ಒಡೆದುಹೋಗಿದೆ. ಅದರಲ್ಲಿರತಕ್ಕ ಜೇನುಹುಳುಗಳು ಇವನ ಸುತ್ತಮುತ್ತ ಬಂದು ಕಚ್ಚುತ್ತಿವೆ. ಈ ರೀತಿ ಕೆಳಗೆ ಸರ್ಪದ ಭಯ, ಮೇಲೆ ವ್ಯಾಘ್ರದ ಭಯ, ತಾನು ಇರುವಲ್ಲಿ ಮಧುಮಕ್ಷಿಕೆಗಳ ಪೀಡೆ. ಹೀಗಿದ್ದರೂ ಆ ಪುರುಷನು ಆ ಜೇನಿನ ಗೂಡಿನಿಂದ ಒಂದೊಂದೇ ಹನಿ ಜೇನು ಇವನ ನಾಲಿಗೆಗೆ ಬೀಳುವುದರಿಂದ ಸ್ವಲ್ಪ ಆನಂದವನ್ನು ಅನುಭವಿಸುತ್ತಿದ್ದಾನೆ. ಆದರೆ ಆ ಆನಂದವು ಬಹು ದುಃಖದಿಂದ ಕೂಡಿದ ಕಾರಣ ವಿವೇಕಿಯಾದ ಮನುಷ್ಯನಿಗೆ ಅದು ಆನಂದವೆಂದು ಅನಿಸಲಾರದು.

ಅದೇ ರೀತಿ ಈ ಮನುಷ್ಯನಿಗೆ ವಾರ್ಧಕ್ಯವೆಂಬ ಹುಲಿಯು ಹಿಂಬದಿಯಿಂದ ಓಡಿಬರುತ್ತದೆ. ಸಂಸಾರ ಅರಣ್ಯದಲ್ಲಿ ಓಡುತ್ತಿರುವ ಪುರುಷನು ಗೃಹಕೂಪದಲ್ಲಿ ಬಿದ್ದಾಗ ಕಾಲಮೃತ್ಯುವೆಂಬ ಸರ್ಪವು ಇವನ ಆಯುಷ್ಯ ಯಾವಾಗ ಮುಗಿಯುತ್ತದೆ ಎಂದು ನಿರೀಕ್ಷಿಸುತ್ತದೆ. ಹೆಂಡರು–ಮಕ್ಕಳು, ಸಂಬಂಧಿಗಳು ನನಗೆ ಅದು ಕೊಡು ಇದು ಕೊಡು ಎಂದು ಜೇನುನೊಣಗಳಂತೆ ಪೀಡಿಸುತ್ತಿವೆ. ಈ ಮಧ್ಯದಲ್ಲಿ ವಿಷಯಸುಖದ ಲೇಶವು ಜೇನುಬಿಂದುವಿನಂತೆ ತೋರುತ್ತಿದ್ದರೂ ಜ್ಞಾನಿಗಳು ಅದು ಸುಖವಲ್ಲವೆಂದೇ ಭಾವಿಸುತ್ತಾರೆ. ಇದನ್ನು ತಿಳಿದು ನೀನು ಮೂಢನಾಗದೆ ನನ್ನಲ್ಲಿ ಮನಸ್ಸಿಟ್ಟು ನನ್ನ ಭಕ್ತನಾಗಿ ನನ್ನ ಪೂಜಾನಮಸ್ಕಾರಗಳನ್ನು ಮಾಡುತ್ತ ನನ್ನನ್ನು ಹೊಂದಲು ಪ್ರಯತ್ನ ಮಾಡು. ನಿನಗೆ ನನ್ನ ಪ್ರಾಪ್ತಿಯು ಆಗುತ್ತದೆ" ಎಂದು ಉಪದೇಶಿಸಿದನು. (ಹದಿನೆಂಟನೆಯ ದಿನದ ಉಪನ್ಯಾಸವು ಮುಗಿಯಿತು) ಇಲ್ಲಿಗೆ ಒಂಭತ್ತನೇ ಅಧ್ಯಾಯ ಮುಗಿಯಿತು.

***

# ಹತ್ತನೆಯ ಅಧ್ಯಾಯ

ಶ್ರೀಕೃಷ್ಣ ಪರಮಾತ್ಮನು ಉಪದೇಶ ಮಾಡುತ್ತಾನೆ: "ಎಲೋ ಅರ್ಜುನಾ! ನನ್ನ ಶ್ರೇಷ್ಠವಾದ ಮಾತನ್ನು ಕೇಳು. ನಿನ್ನ ಹಿತಕ್ಕೋಸ್ಕರ ನಿನಗೆ ನಾನು ಉಪದೇಶ ಮಾಡುತ್ತೇನೆ. ನಿನಗೆ ಮತ್ತೆ ಮತ್ತೆ ಉಪದೇಶ ಮಾಡಬೇಕೆಂದು ನನಗನಿಸುತ್ತದೆ. ಯಾಕೆಂದರೆ ನೀನು ನನ್ನ ಉಪದೇಶವನ್ನು ಕೇಳಿ ಸಂತೋಷ ಪಡುತ್ತಿ. ನಾನು ಉಪದೇಶ ಮಾಡುವಷ್ಟು ಸಮರ್ಥವಾಗಿ ಇತರ ದೇವತೆಗಳು ಋಷಿಗಳು ನನ್ನ ಮಾಹಾತ್ಮೆಯನ್ನು ತಿಳಿಸಿಕೊಡಲು ಸಮರ್ಥರಲ್ಲ. ಅವರುಗಳು ನನ್ನ ಮಹಿಮೆ-ಯನ್ನು ತಿಳಿದಿಲ್ಲ. ಯಾಕೆಂದರೆ ಅವರನ್ನು ನಾನು ಸೃಷ್ಟಿ ಮಾಡುವಾಗ ಪರಿಮಿತ ಜ್ಞಾನ ಉಳ್ಳವರನ್ನಾಗಿ ಸೃಷ್ಟಿ ಮಾಡಿದ್ದೇನೆ. ನನ್ನ ಮಹಿಮೆಯು ಅಪರಿಮಿತ-ವಾದದ್ದು. ಆದುದರಿಂದ ನನ್ನ ಸಂಪೂರ್ಣ ಮಹಿಮೆಯನ್ನು ಅವರು ತಿಳಿಯದ ಕಾರಣ ನಾನೇ ನಿನಗೆ ಉಪದೇಶ ಕೊಡಬೇಕಾಗಿದೆ. ನನ್ನ ಅಪಾರವಾದ ಮಹಿಮೆಯ ಪೈಕಿ ಕೆಲವನ್ನು ಮಾತ್ರ ಉಪದೇಶ ಮಾಡುತ್ತೇನೆ.

ನಾನು ಉತ್ಪತ್ತಿರಹಿತನು. ನನಗೆ ಆದಿಯೇ ಇಲ್ಲ. ನಾನೇ ಎಲ್ಲರಿಗೂ ಆದಿ ಮತ್ತು ಚೇಷ್ಟಕ. ಸರ್ವಚೇಷ್ಟಕರಾದ ಮುಖ್ಯಪ್ರಾಣರಿಗೂ ನಾನು ಆದಿಯಾಗಿದ್ದೇನೆ. ನಾನು ಎಲ್ಲ ಲೋಕಕ್ಕೂ ಶ್ರೇಷ್ಠ ಈಶ್ವರನಾಗಿದ್ದೇನೆ. ನನ್ನನ್ನು ಸರಿಯಾಗಿ ತಿಳಿದವನು ಸಮಸ್ತ ಪಾಪದಿಂದ ಮುಕ್ತನಾಗುತ್ತಾನೆ. ಸದಸದ್ವಿವೇಕ ಬುದ್ಧಿಯನ್ನು, ತಿಳುವಳಿಕೆಯನ್ನು, ಅಕಾರ್ಯದ ಇಚ್ಛೆ ಉಂಟಾಗದಿರುವುದನ್ನು, ಕ್ಷಮಾಗುಣವನ್ನು, ಸತ್ಯವಚನವನ್ನು, ಇಂದ್ರಿಯ ನಿಗ್ರಹವನ್ನು, ನನ್ನಲ್ಲಿ ಆಸಕ್ತಿಯನ್ನು, ಸುಖದುಃಖ-ಗಳನ್ನು, ಸತ್ವವನ್ನು, ಅಸತ್ವವನ್ನು, ಭಯಾಭಯಗಳನ್ನು, ಪರಪೀಡನೆಯ ಅಭಾವವನ್ನು, ಸುಖದುಃಖಾದಿ ದ್ವಂದ್ವದಲ್ಲಿ ನಿರ್ವಿಕಾರತ್ವವನ್ನು, ವಿಷಯ ಸುಖದಲ್ಲಿ ಅಲಂಬುದ್ಧಿಯನ್ನು, ಬ್ರಹ್ಮಚರ್ಯಾದಿ ತಪಸ್ಸನ್ನು, ಧರ್ಮಾರ್ಜಿತವಾದ ವಿತ್ತವನ್ನು, ದಾನವನ್ನು, ಕೀರ್ತಿ-ಅಪಕೀರ್ತಿಗಳನ್ನು, ಇವೇ ಮೊದಲಾದ ಎಲ್ಲ ಧರ್ಮಗಳನ್ನು ಎಲ್ಲರೂ ನನ್ನಿಂದಲೇ ಪಡೆಯುತ್ತಾರೆ."

ಅಂದರೆ ಈ ರೀತಿ ಪರಮಾತ್ಮನು ಜ್ಞಾನಾದಿ ಗುಣಗಳನ್ನು ಕೊಡತಕ್ಕವನೆಂದು ಉಪಾಸನೆ ಮಾಡಬೇಕು. ಮಾಡಿದರೆ ಜ್ಞಾನಾದಿ ಗುಣಗಳನ್ನು ಪರಮಾತ್ಮನು ಕೊಡುತ್ತಾನೆ.

ಗಾಯತ್ರಿಯಲ್ಲಿಯೂ **"ಧಿಯೋ ಯೋ ನಃ ಪ್ರಚೋದಯಾತ್"**, 'ಜ್ಞಾನವನ್ನು ಕೊಡುವವನು ಪರಮಾತ್ಮನು' ಎಂಬ ಉಪಾಸನೆ ಇದೆ. ಈ ರೀತಿ ಉಪಾಸನೆ ಮಾಡುವವರಿಗೆ ಪರಮಾತ್ಮನು ವಿಶೇಷವಾದ ಜ್ಞಾನವನ್ನು ಕೊಡುತ್ತಾನೆ. ಆದುದರಿಂದಲೇ ಹಿಂದಿನ ಋಷಿಗಳು **"ಧಿಯೋ ಯೋ ನಃ ಪ್ರಚೋದಯಾತ್"** ಎಂಬ ಗಾಯತ್ರಿಯನ್ನು ಎಷ್ಟೋ ಸಲ ಜಪ ಮಾಡಿ 'ಜ್ಞಾನ ಕೊಡುವವನು ಪರ-ಮಾತ್ಮ' ಎಂದು ಉಪಾಸನೆ ಮಾಡಿ ಲೋಕದಲ್ಲಿ ವಿಲಕ್ಷಣ ಜ್ಞಾನವುಳ್ಳವರಾದರು. ಈಗಲೂ ಕೂಡ ಅವರ ವಂಶದಲ್ಲಿ ಹುಟ್ಟಿರತಕ್ಕ ಬ್ರಾಹ್ಮಣರು ಎಲ್ಲ ಜಾತಿಗಳಿಗಿಂತಲೂ ಬುದ್ಧಿಶಕ್ತಿಯುಳ್ಳವರಾಗಿದ್ದಾರೆ. ಇದಕ್ಕೆ ಈಗಿನವರು ಆ ರೀತಿ ಉಪಾಸನ ಮಾಡದಿದ್ದರೂ ಈ ಬ್ರಾಹ್ಮಣವಂಶದಲ್ಲಿ ಹುಟ್ಟಿದ ಹಿಂದಿನ ಋಷಿಗಳು ಆ ರೀತಿ ಉಪಾಸನ ಮಾಡಿದ ಪ್ರಭಾವವೇ ಕಾರಣ. ನಾವು ಕೂಡಾ **"ಧಿಯೋ ಯೋ ನಃ ಪ್ರಚೋದಯಾತ್"** ಎಂಬುದಾಗಿ ಬಹಳವಾಗಿ ಉಪಾಸನೆ ಮಾಡಿದರೆ ವಿಶೇಷ ಜ್ಞಾನವನ್ನು ಪಡೆಯಬಹುದು.

ಅರ್ಜುನನು ಪ್ರಶ್ನೆ ಮಾಡುತ್ತಾನೆ: "ಶ್ರೀಕೃಷ್ಣನೇ! ನೀನೇ ಎಲ್ಲರನ್ನು ಸೃಷ್ಟಿ ಮಾಡಿದ್ದೇನೆ ಎಂದು ಹೇಳುತ್ತಿ. ಅದು ಹೇಗೆ ಕೂಡುತ್ತದೆ? ಚತುರ್ಮುಖ ಬ್ರಹ್ಮದೇವರು, ಸ್ವಾಯಂಭುಮನು, ಋಷಿಗಳು ಮುಂತಾದವರು ಈ ಪ್ರಜೆಗಳನ್ನು ಸೃಷ್ಟಿ ಮಾಡಿದ್ದೆಂದು ಶಾಸ್ತ್ರದಲ್ಲಿ ಹೇಳುತ್ತದೆಯಲ್ಲವೇ?"

ಅದಕ್ಕೆ ಶ್ರೀಕೃಷ್ಣ ಪರಮಾತ್ಮನು ಉಪದೇಶ ಮಾಡುತ್ತಾನೆ: "ಎಲೋ ಅರ್ಜುನಾ! ಬ್ರಹ್ಮದೇವರಿಂದ ಪೂರ್ವಮನ್ವಂತರದಲ್ಲಿ ಹುಟ್ಟಿದ ಮರೀಚಿ, ಅತ್ರಿ, ಅಂಗೀರಸ, ಪುಲಸ್ತ್ಯ, ಪುಲಹ, ಕ್ರತು ಮತ್ತು ವಸಿಷ್ಠ ಎಂಬ ಮಹಾ ತೇಜಸ್ವಿಗಳಾದ ಏಳು ಋಷಿಗಳು, ಹಾಗೆಯೇ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬ ನಾಲ್ಕು ವಿಭಾಗದಿಂದ ಕೂಡಿದ ದೇವತೆಗಳು ಹಾಗೂ

ಸ್ವಾಯಂಭುವಾದಿ ಮನುಗಳು ನನ್ನಿಂದಲೇ ಹುಟ್ಟಿದ್ದಾರೆಂದು ತಿಳಿದುಕೋ. ಚತುರ್ಮುಖ ಬ್ರಹ್ಮದೇವರಲ್ಲಿ, ಮನುಗಳಲ್ಲಿ, ಋಷಿಗಳಲ್ಲಿ ನಾನೇ ಅಂತರ್ಯಾಮಿಯಾಗಿದ್ದು ಅವರನ್ನು ನಿಮಿತ್ತ ಮಾತ್ರ ಮಾಡಿಕೊಂಡು ಎಲ್ಲ ಪ್ರಜೆಗಳನ್ನು ನಾನೇ ಸೃಷ್ಟಿ ಮಾಡುತ್ತೇನೆ.

ಬ್ರಾಹ್ಮಣಾದಿ ನಾಲ್ಕು ವಿಭಾಗವುಳ್ಳವರು ದೇವತೆಗಳೆಂಬುದನ್ನು ಈ ರೀತಿ ವಿವರವಾಗಿ ತಿಳಿಯಬೇಕು: ನನ್ನಿಂದ ಬ್ರಾಹ್ಮಣ ಜಾತಿಯವನಾಗಿ ಚತುರ್ಮುಖ ಬ್ರಹ್ಮನು ಹುಟ್ಟಿದನು. ವಾಯು, ರುದ್ರ, ಶೇಷ, ಗರುಡ, ಇಂದ್ರ, ಮನ್ಮಥ, ವರುಣ, ಚಂದ್ರ, ಸೂರ್ಯ, ಯಮ ಇವರೇ ಮೊದಲಾದ ದೇವತೆಗಳು ನನ್ನಿಂದ ಕ್ಷತ್ರಿಯರಾಗಿ ಹುಟ್ಟಿದರು. ಆದುದರಿಂದ ಸೂರ್ಯವಂಶ, ಚಂದ್ರವಂಶದಲ್ಲಿ ಹುಟ್ಟಿದವರೆಲ್ಲರೂ ಭೂಲೋಕದಲ್ಲಿ ಕ್ಷತ್ರಿಯರಾದರು. ರುದ್ರದೇವರನ್ನು ಬಿಟ್ಟು ಉಳಿದ ಹತ್ತು ರುದ್ರರು, ನಲವತ್ತೊಂಭತ್ತು ವಾಯುಗಳು, ಅಗ್ನಿಯನ್ನು ಬಿಟ್ಟು ಉಳಿದ ಹತ್ತು ವಸುಗಳು, ನನ್ನಿಂದ ವೈಶ್ಯರಾಗಿ ಹುಟ್ಟಿದರು. ಅಶ್ವಿನಿದೇವತೆಗಳು, ಪೃಥ್ವೀ ಅಭಿಮಾನಿದೇವತೆ, ಕಾಲಮೃತ್ಯು ಎಂಬ ಹೆಸರುಳ್ಳ ದೇವತೆಗಳು ಶೂದ್ರರಾಗಿ ನನ್ನಿಂದ ಹುಟ್ಟಿದ್ದಾರೆ. ಈ ರೀತಿಯಾದ ನನ್ನ ಮಹಿಮೆಯನ್ನು ಯಾರು ತಿಳಿಯುತ್ತಾರೋ ಅವರು ನನ್ನಲ್ಲಿ ನಿಶ್ಚಲವಾದ ಧ್ಯಾನಯೋಗ ಉಳ್ಳವರಾಗುತ್ತಾರೆ. ಈ ವಿಷಯದಲ್ಲಿ ಸಂಶಯವೇ ಇಲ್ಲ.

ನಾನು ಎಲ್ಲಕ್ಕೂ ಸೃಷ್ಟಿಕರ್ತನು, ಸರ್ವಪ್ರವರ್ತಕನು ಎಂದು ತಿಳಿದು ಜ್ಞಾನಿಗಳು ನನ್ನಲ್ಲಿ ಭಕ್ತಿ ಮಾಡುತ್ತಾರೆ. ನನ್ನಲ್ಲಿ ಮನಸ್ಸನ್ನು ಇಡುತ್ತಾರೆ. ತಮ್ಮ ಜೀವನವನ್ನು ನನಗೆ ಅರ್ಪಿಸುತ್ತಾರೆ. ಎಲ್ಲ ಚೇಷ್ಟೆಗಳನ್ನು ನನ್ನ ಪ್ರೀತ್ಯರ್ಥವಾಗಿ ಮಾಡುತ್ತಾರೆ. ನನ್ನ ಮಹಿಮೆಯನ್ನು ಪರಸ್ಪರವಾಗಿ ಹೇಳಿಕೊಳ್ಳುತ್ತಾರೆ. ಒಬ್ಬರಿಗೆ ತಿಳಿಯದೆ ಇದ್ದ ಮಹಿಮೆಯನ್ನು ಇನ್ನೊಬ್ಬರು ಬೋಧಿಸುತ್ತಾರೆ. ಇದರಲ್ಲಿಯೇ ಯಾವಾಗಲೂ ಸಂತುಷ್ಟರಾಗುತ್ತಾರೆ. ವಿಷಯಸುಖದಲ್ಲಿ ಅಲಂಬುದ್ಧಿ ಉಳ್ಳವರಾಗುತ್ತಾರೆ. ಈ ರೀತಿ ನನ್ನಲ್ಲಿಯೇ ಆಸಕ್ತರಾಗಿ ಭಜನ ಮಾಡತಕ್ಕವರಿಗೆ ಪ್ರೀತಿಪೂರ್ವಕವಾಗಿ ನನ್ನ ಸಾಕ್ಷಾತ್ಕಾರವನ್ನು ಕೊಡುತ್ತೇನೆ. ಅದರಿಂದ ನನ್ನನ್ನು ಅವರು ಹೊಂದುತ್ತಾರೆ. ಅವರ ಅನುಗ್ರಹಕ್ಕಾಗಿ ಅವರಲ್ಲಿ ಅಜ್ಞಾನದಿಂದ

ಉಂಟಾದ ವಿಶೇಷ ಆಸಕ್ತಿಯನ್ನು ಅವರ ಮನಸ್ಸಿನಲ್ಲಿರುವ ನಾನು ಸಾಕ್ಷಾತ್ಕಾರವೆಂಬ ದೀಪದಿಂದ ನಾಶ ಮಾಡುತ್ತೇನೆ."

ಈ ರೀತಿ ಶ್ರೀಕೃಷ್ಣನು ಉಪದೇಶ ಮಾಡಿದಾಗ, ಅರ್ಜುನನು ಶ್ರೀಕೃಷ್ಣನನ್ನು ಸ್ತೋತ್ರಮಾಡಲು ಆರಂಭಿಸುತ್ತಾನೆ. ಇನ್ನು ವಿಶೇಷವಾದ ಮಾಹಾತ್ಮ್ಯೆಯನ್ನು ಉಪದೇಶ ಮಾಡಬೇಕೆಂಬುದು ಅರ್ಜುನನ ಅಭಿಪ್ರಾಯ. ಅದಕ್ಕಾಗಿ ಕೃಷ್ಣನನ್ನು ಸ್ತೋತ್ರ ಮಾಡಲು ಆರಂಭಿಸಿದ್ದಾನೆ. ಉಪದೇಶ ಕೊಡತಕ್ಕ ಗುರುಗಳನ್ನು ಸಂತೋಷಪಡಿಸಬೇಕಾದರೆ ಅವರನ್ನು ಸ್ತೋತ್ರಮಾಡುವದು ಮಾತ್ರವಲ್ಲದೆ ಅವರು ಉಪದೇಶ ಕೊಟ್ಟ ವಿಷಯವನ್ನು ಸ್ಮರಣೆಯಲ್ಲಿಟ್ಟುಕೊಂಡು ಅವರ ಎದುರಿನಲ್ಲಿ ಅನುವಾದ ಮಾಡಬೇಕು. ಇದರಿಂದ ಗುರುಗಳು ಸಂತುಷ್ಟರಾಗಿ ಮತ್ತೂ ಉಪದೇಶ ಕೊಡಲು ಉತ್ಸಾಹಿಗಳಾಗುತ್ತಾರೆ. ಆದುದರಿಂದ ಅರ್ಜುನನು ಶ್ರೀಕೃಷ್ಣನನ್ನು ಸ್ತೋತ್ರಮಾಡುತ್ತ ಇಷ್ಟರವರೆಗೆ ಶ್ರೀಕೃಷ್ಣನು ಉಪದೇಶ ಮಾಡಿದ ಸಾರಾಂಶವನ್ನು ಅನುವಾದ ಮಾಡುತ್ತಿದ್ದಾನೆ:

"ಎಲೋ ಶ್ರೀಕೃಷ್ಣನೇ! ಬ್ರಹ್ಮಸೂತ್ರಗಳಲ್ಲಿ ಯಾವ ಪರಬ್ರಹ್ಮನ ಜಿಜ್ಞಾಸೆಯನ್ನು ಮಾಡಬೇಕೆಂದು ನಿರ್ಣಯಿಸಿದ್ದಾರೋ ಅಂಥ ಪರಬ್ರಹ್ಮನೇ ನೀನಾಗಿದ್ದಿ. ಉತ್ತಮ ತೇಜೋರೂಪನಾಗಿದ್ದಿ. ಸರ್ವಪಾಪಪರಿಹಾರಕನಾದ ಪ್ರಯುಕ್ತ ಪರಮ ಪವಿತ್ರನಾಗಿದ್ದಿ. ನಿನ್ನನ್ನು ಪೂರ್ಣಷಡ್ಗುಣಗಳುಳ್ಳವನಾದ್ದರಿಂದ **ಪುರುಷ** ಎಂದೂ ಯಾವಾಗಲೂ ನಿರ್ವಿಕಾರನಾದ್ದರಿಂದ **ಶಾಶ್ವತ** ಎಂದೂ, ಲೋಕವಿಲಕ್ಷಣನಾದುದರಿಂದ **ದಿವ್ಯ** ಎಂದೂ, ದೇವತೆಗಳಿಗೂ ಆದಿಯಾದದ್ದರಿಂದ **ಆದಿದೇವ** ಎಂದೂ, ಉತ್ಪತ್ತಿರಹಿತನಾದ ಪ್ರಯುಕ್ತ **ಅಜ** ಎಂದೂ, ವಿವಿಧ ಜಗತ್ತಿನ ಉತ್ಪತ್ತಿಗೆ ಹೇತುವಾದ್ದರಿಂದ **ವಿಭು** ಎಂದೂ ನಿನ್ನನ್ನು ಸಮಸ್ತ ಋಷಿಗಳು, ದೇವರ್ಷಿಗಳಾದ ನಾರದರು, ಅಸಿತ ದೇವಲರೆಂಬಂಥ ಮಹರ್ಷಿಗಳು ಮತ್ತು ಶ್ರೀವೇದವ್ಯಾಸ ದೇವರು ಹೇಳುತ್ತಾರೆ. ನೀನು ಕೂಡ ಹಾಗೆ ಹೇಳುತ್ತಿ.

ಸಾಮಾನ್ಯ ಋಷಿಗಳು ಮಾತ್ರ ಹೇಳಿದ್ದಾದರೆ ನಿನ್ನಿಂದ ಸ್ವಾರ್ಥಸಾಧನೆ-ಗೋಸ್ಕರ ಋಷಿಗಳು ಸ್ತೋತ್ರ ಮಾಡುತ್ತಿದ್ದರೆಂದು ಹೇಳಬಹುದಾಗಿತ್ತು. ಆದರೆ ನಿಃಸ್ವಾರ್ಥ ಬುದ್ಧಿಯುಳ್ಳ ಪರಮಹಂಸಾಶ್ರಮಿಗಳಾದ ದೇವರ್ಷಿಗಳಾದ ನಾರದರು

ಈ ರೀತಿ ವರ್ಣನೆ ಮಾಡುತ್ತಾರೆಂದರೆ ಇದರಲ್ಲಿ ಅವಶ್ಯ ವಿಶ್ವಾಸವಿಡಬೇಕು. ಅವರೊಬ್ಬರೆ ಅಲ್ಲ, ಅನೇಕ ಮಹರ್ಷಿಗಳು ಕೂಡ ಸ್ತೋತ್ರಮಾಡುತ್ತಾರೆ. 'ಸಹಸ್ರ ಮಾತಾಡು; ಒಂದು ಬರಿಯಬೇಡ' ಎಂದು ಒಂದು ನೀತಿ ಇದೆ. ಅಂದರೆ ಬರೆಯಬೇಕಾದರೆ ಪ್ರಾಮಾಣಿಕವಾದದ್ದನ್ನೇ ಬರೆಯಬೇಕು. ಬರೆದದ್ದು ಶಾಶ್ವತವಾಗಿ ಉಳಿಯುತ್ತದೆ ಎಂದು ಅಭಿಪ್ರಾಯ. ಸಹಸ್ರಾರು ಮಂದಿ ಋಷಿಗಳು ಹೇಳುವುದು ಮಾತ್ರವಲ್ಲದೆ ಎಷ್ಟೋ ಗ್ರಂಥಗಳಲ್ಲಿ ನಿನ್ನ ಮಹಿಮೆ ಬರೆದು ಇಟ್ಟಿದ್ದಾರೆ. ಆದ್ದರಿಂದ ಇದು ಅತ್ಯಂತ ವಿಶ್ವಸನೀಯವಾಗಿದೆ.ನ್ ನಮ್ಮ ತಂದೆಯ ತಂದೆ ವೇದವ್ಯಾಸದೇವರು. ಅವರು ಪೌತ್ರರಾದ ನಮಗೆ ಎಂದಿಗೂ ಮಿಥ್ಯೋಪದೇಶ ಮಾಡಲಾರರು. ಇಷ್ಟೇ ಅಲ್ಲದೆ ನೀನು ಕೂಡ ಅದನ್ನು ಒಪ್ಪಿಕೊಂಡು ನಮಗೆ ಹೇಳುತ್ತಿ. ಅಂದಮೇಲೆ ಇದರಲ್ಲಿ ಸಂಶಯಕ್ಕೆ ಕಾರಣವೇನು? ಆದುದರಿಂದ ನಿನ್ನ ಮಹಿಮೆ ಎಲ್ಲವೂ ಸತ್ಯವೆಂದೇ ನಾನು ತಿಳಿದಿದ್ದೇನೆ.

ನಿನ್ನ ಮಹಿಮೆಯನ್ನು ದೇವತೆಗಳು, ದಾನವರು ಸಂಪೂರ್ಣವಾಗಿ ತಿಳಿದಿಲ್ಲ. ನೀನೇ ನಿನ್ನ ಮಹಿಮೆಯನ್ನು ಪೂರ್ಣವಾಗಿ ತಿಳಿದಿದ್ದಿ. ನೀನು ಪುರುಷೋತ್ತಮನಾಗಿದ್ದಿ. ಜಗತ್ಸೃಷ್ಟಿಕರ್ತನಾಗಿದ್ದಿ. ಪ್ರಾಣಿಗಳಿಗೆ ಸ್ವಾಮಿಯಾಗಿದ್ದಿ. ದೇವತೆಗಳಿಗೂ ದೇವತೆಯಾಗಿದ್ದಿ. ಇಡೀ ಜಗತ್ತಿಗೆ ಪತಿಯಾಗಿದ್ದಿ. ನೀನೇ ಸಂಪೂರ್ಣವಾಗಿ ನಿನ್ನ ಮಹಿಮೆಯನ್ನು ಹೇಳಲು ಅರ್ಹನಾಗಿದ್ದಿ. ಯಾವ ವಿಭೂತಿರೂಪಗಳಿಂದ ಎಲ್ಲ ಲೋಕಗಳನ್ನು ವ್ಯಾಪಿಸಿದ್ದೀಯೋ ಆ ನಿನ್ನ ವಿಭೂತಿ ರೂಪಗಳನ್ನು ಉಪದೇಶ ಮಾಡು. ನಿನ್ನ ಉಪದೇಶವಿಲ್ಲದೆ ನಾನು ನನ್ನ ಮನಸ್ಸಿನಲ್ಲಿ ಎಷ್ಟು ವಿಚಾರ ಮಾಡಿದರೂ ಅದು ತಿಳಿಯಲಾರದು. ಯಾವ ಯಾವ ವಸ್ತುಗಳಲ್ಲಿ ನೀನು ವಿಭೂತಿ ರೂಪದಿಂದ ಇದ್ದೀಯೋ ಅವುಗಳನ್ನು ವಿಸ್ತಾರವಾಗಿ ತಿಳಿಸು. ಅಮೃತದಂತೆ ಇರುವ ನಿನ್ನ ಉಪದೇಶವನ್ನು ಕೇಳಿ ಇನ್ನೂ ನನಗೆ ತೃಪ್ತಿ ಆಗಲಿಲ್ಲ."

ಆಗ ಶ್ರೀಕೃಷ್ಣ ಪರಮಾತ್ಮನು ಉಪದೇಶ ಮಾಡುತ್ತಾನೆ: "ಎಲೋ ಅರ್ಜುನಾ! ನನ್ನ ವಿಭೂತಿರೂಪಗಳನ್ನು ವಿಸ್ತಾರವಾಗಿ ಹೇಳಲು ಸಾಧ್ಯವಿಲ್ಲ.

ಅವುಗಳು ಅನಂತಗಳಾಗಿವೆ. ಸ್ವಲ್ಪ ಮಟ್ಟಿಗೆ ಮಾತ್ರ ಹೇಳಬಹುದು. ಸರ್ವತ್ರ ವ್ಯಾಪ್ತನಾದರೂ ನಾನು ಸಮಸ್ತ ಪ್ರಾಣಿಗಳು ಮತ್ತು ಸಮಸ್ತ ವಸ್ತುಗಳ ಒಳಗೆ ಇದ್ದೇನೆ. ಅವುಗಳಿಗೆ ಕಾರಣನು, ಸಂರಕ್ಷಕನು ಮತ್ತು ನಾಶಕನು ಆಗಿದ್ದೇನೆ.

ಹನ್ನೆರಡು ಮಂದಿ ಆದಿತ್ಯರುಗಳ ಮಧ್ಯದಲ್ಲಿ ವಿಷ್ಣುವೆಂಬ ಹೆಸರುಳ್ಳ-ವನಾಗಿ ಆದಿತ್ಯರುಗಳಿಗೆ ನಿಯಾಮಕನಾಗಿ ನಾನು ಒಂದು ರೂಪದಿಂದ ಇದ್ದೇನೆ. ಜ್ಯೋತಿರ್ವಸ್ತುಗಳ ಪೈಕಿ ಶ್ರೇಷ್ಠನಾದ ಸೂರ್ಯನಲ್ಲಿ ನಾನು ವಿಭೂತಿ ರೂಪದಿಂದ ಇದ್ದೇನೆ. ನಲ್ವತ್ತೊಂಭತ್ತು ಮರುತ್ತುಗಳ ಮಧ್ಯದಲ್ಲಿ ಮರೀಚಿ ಎಂಬ ಮರುತ್ತಿನಲ್ಲಿ ನಾನು ವಿಶೇಷವಾಗಿ ಇದ್ದೇನೆ. ನಕ್ಷತ್ರಗಳಿಗೆ ಸ್ವಾಮಿಯಾದ ಚಂದ್ರನಲ್ಲಿ ನನ್ನ ವಿಭೂತಿರೂಪವಿದೆ.

ವಿಭೂತಿರೂಪವೆಂದರೆ ಆವಾವ ವಸ್ತುಗಳ ಉತ್ಕರ್ಷಕ್ಕೆ ಕಾರಣವಾದ ಆವಾವ ವಸ್ತುಗಳಲ್ಲಿರತಕ್ಕ ನನ್ನ ರೂಪವಿಶೇಷವೇ ಎಂದರ್ಥ. ವೇದಗಳ ಮಧ್ಯದಲ್ಲಿ ಸಾಮವೇದವು ಗಾನದಿಂದ ನನ್ನನ್ನು ಸ್ತೋತ್ರ ಮಾಡುವ ಪ್ರಯುಕ್ತ ಶ್ರೇಷ್ಠವಾಗಿದೆ. ದೇವತೆಗಳ ಮಧ್ಯದಲ್ಲಿ ಇಂದ್ರನು ರಾಜನಾದ ಪ್ರಯುಕ್ತ ಶ್ರೇಷ್ಠ-ನಾಗಿದ್ದಾನೆ. ಇಂದ್ರಿಯಗಳ ಮಧ್ಯದಲ್ಲಿ ಮನಸ್ಸು ಶ್ರೇಷ್ಠವು. ಮನಸ್ಸನ್ನು ಜಯಿಸಿದರೆ ಇತರ ಇಂದ್ರಿಯಗಳನ್ನು ಜಯಿಸಬಹುದು. ಪ್ರಾಣಿಗಳಲ್ಲಿ ಬಹು-ಸ್ಮರಣಶಕ್ತಿಯಾದ ಚೇತನಾ ಇದ್ದರೆ ಉತ್ಕರ್ಷವು ಪ್ರಾಪ್ತವಾಗುವುದು.

ರುದ್ರರುಗಳ ಮಧ್ಯದಲ್ಲಿ ಶಂಕರನು ಶ್ರೇಷ್ಠನು. ಯಕ್ಷರಾಕ್ಷಸರುಗಳಲ್ಲಿ ಕುಬೇರನು ಶ್ರೇಷ್ಠನು. ವಸುಗಳ ಮಧ್ಯದಲ್ಲಿ ಅಗ್ನಿಯು ಶ್ರೇಷ್ಠನು. ಶಿಖರಗಳ ಮಧ್ಯದಲ್ಲಿ ಮೇರುಪರ್ವತವು ಶ್ರೇಷ್ಠ. ಪುರೋಹಿತರ ಮಧ್ಯದಲ್ಲಿ ದೇವೇಂದ್ರನ ಪುರೋಹಿತರಾದ ಬ್ರಹಸ್ಪತಿ ಆಚಾರ್ಯರು ಶ್ರೇಷ್ಠರು. ಸುಬ್ರಹ್ಮಣ್ಯನು ದೇವತೆಗಳ ಸೇನಾನಾಯಕನಾದುದರಿಂದ ಸೇನಾನಿಗಳಲ್ಲಿ ಅವನು ಶ್ರೇಷ್ಠ. ಸ್ಥಿರವಾಗಿರತಕ್ಕ ಜಲಾಶಯಗಳಲ್ಲಿ ಸಮುದ್ರವು ಶ್ರೇಷ್ಠ. ಮಹರ್ಷಿಗಳ ಮಧ್ಯದಲ್ಲಿ ಭೃಗುಋಷಿಯು ಶ್ರೇಷ್ಠ. ಯಾಕೆಂದರೆ ಭೃಗುಋಷಿಯು ಎಲ್ಲಾ ಲೋಕಗಳಲ್ಲಿ ಸಂಚರಿಸಿ ಆವಾವ ದೇವತೆಗಳ ಮಹತ್ವವನ್ನು ಪರೀಕ್ಷಿಸಿ ಲೋಕಕ್ಕೆ ವಿಷ್ಣು ಸರ್ವೋತ್ತಮತ್ವವನ್ನು ಪ್ರಕಾಶಿಸಿದ್ದಾನೆ.

ಓಂಕಾರವು ಎಲ್ಲಾ ಅಕ್ಷರಗಳಲ್ಲಿ ಶ್ರೇಷ್ಠ. ಓಂಕಾರವು ಸಮಸ್ತ ವೇದಾರ್ಥಗಳನ್ನು ಹೇಳತಕ್ಕದ್ದಾಗಿದೆ. ಯಜ್ಞಗಳ ಮಧ್ಯದಲ್ಲಿ ಜಪಯಜ್ಞವು ಶ್ರೇಷ್ಠ. ಜಪಯಜ್ಞದಲ್ಲಿ ಪ್ರಾಣಿಹಿಂಸಾ, ದ್ರವ್ಯದ ವೆಚ್ಚ, ದೇಹಾಯಾಸ ಮುಂತಾದ ಯಾವ ದೋಷಗಳೂ ಇರುವುದಿಲ್ಲ. ಸ್ಥಾವರ ವಸ್ತುಗಳ ಪೈಕಿ ಹಿಮಾಲಯ ಪರ್ವತವು ಶ್ರೇಷ್ಠ. ಸರ್ವವೃಕ್ಷಗಳ ಮಧ್ಯದಲ್ಲಿ ಅಶ್ವತ್ಥವು ಶ್ರೇಷ್ಠ."

ಆದುದರಿಂದಲೇ ಎಲ್ಲರೂ ಅಶ್ವತ್ಥ ಪೂಜೆಯನ್ನು ಮಾಡುತ್ತಾರೆ. ಭಾನುವಾರ, ಮಂಗಳವಾರ ಮತ್ತು ಶುಕ್ರವಾರಗಳು ಅಶ್ವತ್ಥ ವೃಕ್ಷದ ಪೂಜೆ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಬಾರದು. ಆ ದಿವಸಗಳಲ್ಲಿ ಕಲಿಯ ಪತ್ನಿಯಾದ ಅಲಕ್ಷ್ಮಿಯು ಅಶ್ವತ್ಥವೃಕ್ಷದ ಬುಡದಲ್ಲಿರುತ್ತಾಳೆ. ಇತರ ದಿವಸಗಳಲ್ಲಿ ಪೂಜಿಸ-ಬೇಕು. ಶನಿವಾರ ದಿವಸ ವಿಶೇಷವಾಗಿ ಪೂಜಿಸಬೇಕು.

ದೇವರ್ಷಿಗಳ ಮಧ್ಯದಲ್ಲಿ ನಾರದರು ಶ್ರೇಷ್ಠರು. ಅವರು ಎಲ್ಲಾ ಕಡೆ ಸಂಚಾರ ಮಾಡುತ್ತ ದೇವರ ಮಹಿಮೆಯನ್ನು ಪ್ರಚಾರ ಮಾಡುತ್ತಾರೆ. ಗಂಧರ್ವರ ಮಧ್ಯ-ದಲ್ಲಿ ಚಿತ್ರರಥನು ಶ್ರೇಷ್ಠನು. ಅಣಿಮಾದಿ ಸಿದ್ಧಿ ಉಳ್ಳವರಿಗೆ ಕಪಿಲಮುನಿಯು ಶ್ರೇಷ್ಠನು. ಕಪಿಲ ಎಂದರೆ ಸಾಕ್ಷಾತ್ ಪರಮಾತ್ಮನ ಅವತಾರ. ಕುದುರೆಗಳ ಮಧ್ಯದಲ್ಲಿ ಕ್ಷೀರಸಮುದ್ರ ಮಥನದ ಸಂದರ್ಭದಲ್ಲಿ ಹುಟ್ಟಿದ ಉಚ್ಚೈಃಶ್ರವವೆಂಬ ಕುದುರೆಯು ಶ್ರೇಷ್ಠ. ಶ್ರೇಷ್ಠ ಆನೆಗಳ ಮಧ್ಯದಲ್ಲಿ ಐರಾವತವೆಂಬ ಇಂದ್ರನ ಆನೆಯು ಅತ್ಯಂತ ಶ್ರೇಷ್ಠ. ಮನುಷ್ಯರುಗಳಲ್ಲಿ ರಾಜನು ಶ್ರೇಷ್ಠ. ಆಯುಧಗಳ ಮಧ್ಯದಲ್ಲಿ ವಜ್ರಾಯುಧವು ಶ್ರೇಷ್ಠ. ಧೇನುಗಳ ಮಧ್ಯದಲ್ಲಿ ಕಾಮಧೇನುವು ಶ್ರೇಷ್ಠ. ಎಲ್ಲಾ ಸುಖಗಳ ಮಧ್ಯದಲ್ಲಿ ಕಾಮಸುಖವು ಶ್ರೇಷ್ಠ.

ಏಕ ಶಿರಸ್ಸುಳ್ಳ ಸರ್ಪಗಳ ಮಧ್ಯದಲ್ಲಿ ವಾಸುಕಿಯು ಶ್ರೇಷ್ಠ. ಅನೇಕ ಶಿರಸ್ಸುಳ್ಳ ಸರ್ಪಗಳ ಮಧ್ಯದಲ್ಲಿ ಶೇಷದೇವರು ಶ್ರೇಷ್ಠ. ಜಲಚರ ಪ್ರಾಣಿಗಳಿಗೆ ವರುಣದೇವರು ರಾಜರಾಗಿದ್ದಾರೆ. ಪಿತೃಗಳ ಮಧ್ಯದಲ್ಲಿ ಅರ್ಯಮನು ಶ್ರೇಷ್ಠ. ಶಿಕ್ಷೆ ಮಾಡತಕ್ಕವರ ಮಧ್ಯದಲ್ಲಿ ಯಮದೇವರು ಶ್ರೇಷ್ಠ. ದೈತ್ಯರುಗಳ ಮಧ್ಯದಲ್ಲಿ ಪ್ರಹ್ಲಾದರು ಶ್ರೇಷ್ಠ. ಬಂಧನ ಮಾಡತಕ್ಕವರ ಮಧ್ಯದಲ್ಲಿ ಕಾಲನೆಂಬ ದೇವತೆಯು ಶ್ರೇಷ್ಠ. ಅವನು ಪಾಪಿಗಳನ್ನು ಬಂಧನ ಮಾಡಿ ಯಮದೇವರಿಗೆ ಒಪ್ಪಿಸುತ್ತಾನೆ.

ಮೃಗಗಳ ಮಧ್ಯದಲ್ಲಿ ಸಿಂಹವು ಶ್ರೇಷ್ಠ. ಪಕ್ಷಿಗಳ ಮಧ್ಯದಲ್ಲಿ ಗರುಡದೇವರು ಶ್ರೇಷ್ಠ. ಶುದ್ಧಿಮಾಡತಕ್ಕವರ ಮಧ್ಯದಲ್ಲಿ ವಾಯುವು ಶ್ರೇಷ್ಠ. ಶಸ್ತ್ರಧಾರಿಗಳ ಮಧ್ಯದಲ್ಲಿ ದಾಶರಥಿರಾಮನು ಶ್ರೇಷ್ಠ. ಮತ್ಸ್ಯಗಳ ಮಧ್ಯದಲ್ಲಿ ಮಕರವೆಂಬ ಮತ್ಸ್ಯವು ಶ್ರೇಷ್ಠ. ನದಿಗಳ ಮಧ್ಯದಲ್ಲಿ ಭಾಗೀರಥಿಯು ಶ್ರೇಷ್ಠ.

ಸೃಷ್ಟಿಯಾಗತಕ್ಕ ಪ್ರಾಣಿಗಳಿಗೆ ಸೃಷ್ಟಿಸ್ಥಿತಿಲಯ ಹೇತು ನಾನೇ ಆಗಿದ್ದೇನೆ. ಬೇರೆ ಕಾಲದಲ್ಲಿಯಾಗಲಿ ಬೇರೆ ದೇಶದಲ್ಲಿಯಾಗಲಿ ಇನ್ನೊಬ್ಬರು ಸೃಷ್ಟಿಸಂಹಾರ-ಕರ್ತರು ನನ್ನ ಹೊರತು ಬೇರೆ ಇಲ್ಲ. ವಿದ್ಯೆಗಳ ಮಧ್ಯದಲ್ಲಿ ಜೀವ ಮತ್ತು ಪರಮಾತ್ಮನ ಸ್ವರೂಪಗಳನ್ನು ತಿಳಿಸಿಕೊಡುವ ವೇದಾಂತ ವಿದ್ಯೆಯು ಶ್ರೇಷ್ಠವಾಗಿದೆ. ವಾದ, ಜಲ್ಪ, ವಿತಂಡಾ ಈ ಮೂರು ಕಥೆಗಳ ಮಧ್ಯದಲ್ಲಿ ತತ್ವನಿರ್ಣಯದ ಉದ್ದೇಶದಿಂದ ಗುರುಶಿಷ್ಯರು ಮಾಡತಕ್ಕ ಪರಸ್ಪರ ವಾದಕಥೆಯು ಶ್ರೇಷ್ಠ. ಎಲ್ಲಾ ಅಕ್ಷರ ಮಧ್ಯದಲ್ಲಿ ಅಕಾರವು ಶ್ರೇಷ್ಠ. ಅಕಾರವು ಪರಮಾತ್ಮನ ಪೂರ್ಣತ್ವವನ್ನು ಹೇಳುತ್ತದೆ. ಸಮಾಸಗಳ ಮಧ್ಯದಲ್ಲಿ ದ್ವಂದ್ವಸಮಾಸವು ಶ್ರೇಷ್ಠ.

ಕ್ಷಯರಹಿತನಾದ ಕಾರಣ ಅಕ್ಷಯ ಎಂದು, ಧಾರಣ ಪೋಷಣ-ಕರ್ತನಾದ್ದರಿಂದ ಧಾತೃ ಎಂದು, ಎಲ್ಲಾ ದಿಕ್ಕುಗಳಲ್ಲಿ ವ್ಯಾಪ್ತನಾಗಿರುವುದರಿಂದ ವಿಶ್ವತೋಮುಖ ಎಂದು, ರೋಗಾದಿಗಳಿಂದ ಪ್ರಾಣಿಗಳನ್ನು ನಾಶಮಾಡು-ತ್ತಿರುವದರಿಂದ ಮೃತ್ಯು ಎಂದು, ಇನ್ನು ಮೇಲೆ ಹುಟ್ಟತಕ್ಕ ಪ್ರಾಣಿಗಳಿಗೂ ಉತ್ಪಾದಕನಾದುದರಿಂದ ಉದ್ಭವ ಎಂದು ನನ್ನನ್ನು ಕರೆಯುತ್ತಾರೆ. ಕೀರ್ತಿ, ಸಂಪತ್ತು, ವಕ್ತೃತ್ವಗುಣ, ಸ್ಮರಣಶಕ್ತಿ, ಬುದ್ಧಿಶಕ್ತಿ, ಧೃತಿ ಮತ್ತು ಕ್ಷಮಾ ಇವುಗಳ ಅಭಿಮಾನಿಗಳಲ್ಲಿದ್ದು ಕೀರ್ತಿ, ಸಂಪತ್ತು ಮೊದಲಾದ ಗುಣಗಳನ್ನು ಕೊಡತಕ್ಕವನಾಗಿ ಕೀರ್ತಿ, ಶ್ರೀ, ವಾಕ್, ಸ್ಮೃತಿ, ಮೇಧಾ, ಧೃತಿ, ಕ್ಷಮಾ ಎಂಬ ನಾಮವುಳ್ಳವನು ನಾನೇ ಆಗಿದ್ದೇನೆ.

ಸಾಮಗಳ ಪೈಕಿ ಇಂದ್ರದೇವರನ್ನು ಸ್ತೋತ್ರ ಮಾಡುವ ಬೃಹತ್ ಸಾಮವು ಶ್ರೇಷ್ಠ. ಛಂದಸ್ಸುಗಳಲ್ಲಿ ಗಾಯತ್ರಿಯು ಶ್ರೇಷ್ಠ. ಮಾಸಗಳ ಮಧ್ಯದಲ್ಲಿ ಮಾರ್ಗಶೀರ್ಷ ಮಾಸವು ಶ್ರೇಷ್ಠ. ಕೇಶವಾದಿ ದ್ವಾದಶರೂಪದ ಮಧ್ಯದಲ್ಲಿ ಪ್ರಾಥಮಿಕವಾದ ಕೇಶವರೂಪವೇ ಈ ಮಾರ್ಗಶೀರ್ಷ ಮಾಸಕ್ಕೆ ನಿಯಾಮಕ.

ವಂಚನೆಗೆ ಸಾಧನಗಳಾದ ಕ್ರಯವಿಕ್ರಯಗಳ ಮಧ್ಯದಲ್ಲಿ ದ್ಯೂತವು ಶ್ರೇಷ್ಠ. ತೇಜಸ್ವಿಗಳಲ್ಲಿ ತೇಜಸ್ಸು ಎಂಬ ಗುಣವು ಶ್ರೇಷ್ಠ. ಜಯಶಾಲಿಗಳಲ್ಲಿ ಜಯಾ ಎಂಬ ಗುಣವು ಶ್ರೇಷ್ಠ. ನಿಶ್ಚಯಜ್ಞಾನಿಗಳ ಮಧ್ಯದಲ್ಲಿ ತತ್ವನಿಶ್ಚಯಜ್ಞಾನವು ಶ್ರೇಷ್ಠ. ಸತ್ವಗುಣ ಉಳ್ಳವರಲ್ಲಿ ಜ್ಞಾನ ಭಕ್ತ್ಯಾದಿ ರೂಪ ಸತ್ವಗುಣವು ಶ್ರೇಷ್ಠ. ಯಾದವರ ಮಧ್ಯದಲ್ಲಿ ವಾಸುದೇವನಾದ ನಾನು ಶ್ರೇಷ್ಠ. ಪಾಂಡವರ ಮಧ್ಯದಲ್ಲಿ ಭೀಮಸೇನನನ್ನು ಬಿಟ್ಟರೆ ನೀನು ಶ್ರೇಷ್ಠ. ಮುನಿಗಳ ಮಧ್ಯದಲ್ಲಿ ಶುಕ್ರಾಚಾರ್ಯರು ಶ್ರೇಷ್ಠ. ನಿಗ್ರಹ ಮಾಡತಕ್ಕವರಿಗೆ ದಂಡವೆಂಬುದು ಶ್ರೇಷ್ಠ ಉಪಾಯವು. ಜಯಿಸಲಿಕ್ಕೆ ಇಚ್ಛಿಸುವವರಿಗೆ ನೀತಿಯೆಂಬುದು ಶ್ರೇಷ್ಠ. ಮುಚ್ಚಿಟ್ಟು ಮಾಡಬೇಕು ಅಂತ ಇಚ್ಛೆ ಉಳ್ಳವರಿಗೆ ಮೌನವು ಶ್ರೇಷ್ಠ ಸಾಧನ. ಜ್ಞಾನವುಳ್ಳವರಿಗೆ ಸಾಕ್ಷಾತ್ಕಾರವೆಂಬ ಜ್ಞಾನವು ಶ್ರೇಷ್ಠಗುಣವು.

ಇಷ್ಟರವರೆಗೆ ಹೇಳಿದ ಎಲ್ಲಾ ಶ್ರೇಷ್ಠ ವಸ್ತುಗಳಲ್ಲಿ ನಾನು ಅಂತರ್ಯಾಮಿಯಾಗಿದ್ದು ಅವುಗಳಿಗೆ ಉತ್ಕರ್ಷವನ್ನು ಕೊಡುತ್ತ ಆವಾವ ಶ್ರೇಷ್ಠ ವಸ್ತುವಾಚಕ ಶಬ್ದಗಳಿಂದ ಬೇರೆ ಬೇರೆ ಗುಣಗಳ ನಿಮಿತ್ತದಿಂದ ವಾಚ್ಯನಾಗಿರ-ತಕ್ಕವನು ನಾನೇ. ಪ್ರತಿಯೊಂದು ಶ್ರೇಷ್ಠವಸ್ತುಗಳಿಗೂ ಶ್ರೇಷ್ಠತ್ವವನ್ನು ಕೊಡತಕ್ಕ ಆ ನನ್ನ ರೂಪಗಳೇ ವಿಭೂತಿರೂಪಗಳೆಂದು ಹೇಳಲ್ಪಡುತ್ತವೆ. ಎಲ್ಲಾ ವಸ್ತುಗಳಿಗೆ ಕಾರಣವಾದ ಪ್ರಕೃತಿ ಕಾಲಾದಿಗಳಲ್ಲಿ ನಾನೇ ನಿಯಾಮಕನಾಗಿ ಇದ್ದೇನೆ.

ನನ್ನನ್ನು ಬಿಟ್ಟು ಚರಾಚರವಾದದ್ದು ಯಾವುದೂ ಇಲ್ಲ. ನನ್ನ ದಿವ್ಯ ವಿಭೂತಿ ರೂಪಗಳಿಗೆ ಅಂತ್ಯವೇ ಇಲ್ಲದಿದ್ದ ಕಾರಣ ಕೆಲವು ಮಾತ್ರ ಇಷ್ಟರವರೆಗೆ ಹೇಳಲ್ಪಟ್ಟಿತು. ಸಾಮಾನ್ಯವಾಗಿ ಇಷ್ಟು ತಿಳಿದುಕೋ – ಲೋಕದಲ್ಲಿ ಯಾವುದು ಸಂಪತ್ತು, ಕೀರ್ತಿ, ಜ್ಞಾನ, ಬಲ, ಮುಂತಾದ ಗುಣಗಳಿಂದ ಶ್ರೇಷ್ಠವೆಂದು ಹೇಳಲ್ಪಡುತ್ತದೋ ಅದೆಲ್ಲ ನನ್ನ ಅಂತರ್ಯಾಮಿ ರೂಪದಿಂದಲೇ ಕೂಡಿದ್ದಾಗಿ ಶ್ರೇಷ್ಠವೆಂದು ಹೇಳಲ್ಪಡುತ್ತದೆ. ಪ್ರತಿಯೊಂದು ಶ್ರೇಷ್ಠವಸ್ತುವಿನಲ್ಲಿ ನನ್ನ ವಿಭೂತಿ ರೂಪವಿದೆ ಎಂದು ತಿಳಿ.

ನಿನಗೆ ಇನ್ನೂ ವಿಶೇಷಫಲಪ್ರದವಾದ ನನ್ನ ಮಹಿಮೆಯ ಜ್ಞಾನವನ್ನು ಹೇಳುತ್ತೇನೆ: ಪರಮಾತ್ಮನಾದ ನನ್ನ ಅನಂತಾಂಶಗಳ ಮಧ್ಯದಲ್ಲಿ ಕೇವಲ

ಒಂದಂಶದಿಂದಲೇ ಎಲ್ಲಾ ಜಗತ್ತನ್ನು ನಾನು ವ್ಯಾಪಿಸಿದ್ದೇನೆ. ಸರ್ವಾಂಶದಿಂದ ವ್ಯಾಪಿಸಲು ಇಂಥ ಜಗತ್ತುಗಳು ಲಕ್ಷಾಂತರ ಇದ್ದರೂ ಸಾಲದು. ಈ ರೀತಿ ನನ್ನ ಮಹಿಮೆಯನ್ನು ತಿಳಿ. ಮಹಾಧಿಕಾರಿಯಾದ ಪ್ರಯುಕ್ತ ಈ ಜ್ಞಾನಕ್ಕೆ ನೀನು ಯೋಗ್ಯನಾಗಿದ್ದಿ."

ಇಷ್ಟು ಪರಮಾತ್ಮನ ವಿಭೂತಿ ರೂಪವನ್ನು ಉಪದೇಶಿಸಿ ಈ ಅಧ್ಯಾಯವನ್ನು ಮುಗಿಸಿದನು.

# ಹನ್ನೊಂದನೆಯ ಅಧ್ಯಾಯ

ಅರ್ಜುನನು ಶ್ರೀಕೃಷ್ಣ ಪರಮಾತ್ಮನಲ್ಲಿ ವಿಜ್ಞಾಪನ ಮಾಡಿಕೊಳ್ಳುತ್ತಾನೆ: "ಶ್ರೀಕೃಷ್ಣನೇ ಪರಮ ಗುಹ್ಯವಾದ ಅಧ್ಯಾತ್ಮವಿದ್ಯೆಯನ್ನು ನನ್ನ ಅನುಗ್ರಹಕ್ಕೋಸ್ಕರ ಉಪದೇಶ ಕೊಟ್ಟಿ. ನನಗೆ ಇದ್ದ ಮೋಹವು ನಾಶವಾಯಿತು. ನಿನ್ನಿಂದ ಜಗತ್ಸೃಷ್ಟಿ ಸಂಹಾರಾದಿ ಮಹಿಮೆಗಳು ಆಗುತ್ತವೆಂಬ ನಿನ್ನ ಮಹಿಮೆಯನ್ನು ನಿನ್ನಿಂದ ಕೇಳಿದೆನು. ಇನ್ನು ಅನೇಕ ಮಹಿಮೆಗಳನ್ನು ತಿಳಿದುಕೊಂಡೆನು. ಏನು ಮಹಿಮೆಯನ್ನು ನೀನು ಹೇಳಿದೆಯೋ ಅಂಥ ಮಹಿಮೆಯಿಂದ ಕೂಡಿದ ಈಶ್ವರ ರೂಪವನ್ನು ನೋಡಬೇಕೆಂದು ಇಚ್ಛಿಸುತ್ತೇನೆ. ನಾನು ನೋಡಲು ಶಕ್ಯವೆಂದು ಭಾವಿಸುವದಾದರೆ ಅದನ್ನು ನನಗೆ ತೋರಿಸು" ಎಂದು ಪ್ರಾರ್ಥಿಸಿದನು.

ಶ್ರೀಕೃಷ್ಣ ಪರಮಾತ್ಮನು ಅರ್ಜುನನ್ನು ಕುರಿತು ಹೇಳುತ್ತಾನೆ: "ಎಲೋ ಅರ್ಜುನಾ! ನನ್ನ ಶತಸಹಸ್ರಾದಿ ರೂಪಗಳನ್ನು ನೋಡು. ಆ ರೂಪಗಳು ಲೋಕ ವಿಲಕ್ಷಣವಾದವೂ, ನಾನಾ ಪ್ರಕಾರವುಳ್ಳವೂ, ಅನೇಕ ವರ್ಣ, ಅನೇಕ ಆಕಾರದಿಂದ ಕೂಡಿದವುಗಳೂ ಆಗಿವೆ. ನನ್ನ ದೇಹದಲ್ಲಿ ಆದಿತ್ಯರುಗಳನ್ನು, ವಸುಗಳನ್ನು, ರುದ್ರರನ್ನು, ಅಶ್ವಿನೀ ದೇವತೆಗಳನ್ನು, ಮರುತ್ತುಗಳನ್ನು ಮತ್ತು ಇಷ್ಟರವರೆಗೆ ನೋಡದೆ ಇದ್ದ ಅತ್ಯಾಶ್ಚರ್ಯವಾದ ಅನೇಕ ವಸ್ತುಗಳನ್ನು ಕೂಡಾ ನೋಡು. ನನ್ನ ಉದರದಲ್ಲಿ ಚರಾಚರಾತ್ಮಕವಾದ ಸಮಸ್ತ ಜಗತ್ತು ಇದೆ. ಏನೇನನ್ನು ನೋಡಬೇಕೆಂದು ಇಚ್ಛಿಸುತ್ತೀಯೋ ಅದೆಲ್ಲವನ್ನು ನೋಡು. ಆದರೆ ಈ ಪ್ರಾಕೃತ ಚಕ್ಷುಸ್ಸಿನಿಂದ ನನ್ನನ್ನು ನೋಡಲು ನೀನು ಸಮರ್ಥನಲ್ಲ. ನಿನಗೆ ದಿವ್ಯ ಚಕ್ಷುಸ್ಸನ್ನು ಕೊಡುತ್ತೇನೆ."

ಈ ಪ್ರಕಾರ ಹೇಳುತ್ತ ಶ್ರೀಕೃಷ್ಣನು ದಿವ್ಯ ಚಕ್ಷುಸ್ಸನ್ನು ಕೊಟ್ಟು ತನ್ನ ದಿವ್ಯವಾದ ಈಶ್ವರರೂಪವನ್ನು ಅರ್ಜುನನಿಗೆ ತೋರಿಸಿದನು. ಅನಂತವಾದ ಕಣ್ಣು, ಮುಖ ಮುಂತಾದ ಅವಯುವಗಳುಳ್ಳ, ನೋಡಲಿಕ್ಕೆ ಅತ್ಯಾಶ್ಚರ್ಯಕರವಾದ, ಅನಂತ ದಿವ್ಯ ಆಭರಣಗಳುಳ್ಳ. ಎತ್ತಲ್ಪಟ್ಟ ಅನಂತ ದಿವ್ಯ ಆಯುಧಗಳುಳ್ಳ, ದಿವ್ಯವಾದ ಮಾಲ್ಯ, ವಸ್ತ್ರ, ಗಂಧಗಳನ್ನು ಧರಿಸಿದ, ಅನಂತನಾದ ಪರಮಾತ್ಮನನ್ನು

ಅರ್ಜುನನು ನೋಡಿದ. ದ್ಯುಲೋಕದಲ್ಲಿ ಸಹಸ್ರಸೂರ್ಯರು ಏಕಕಾಲದಲ್ಲಿ ಉದಯಿಸಿದರೆ ಎಷ್ಟು ಪ್ರಕಾಶವಾಗುವದೋ ಅಂಥ ಪ್ರಕಾಶವೂ ಶ್ರೀಕೃಷ್ಣನ ಈ ಪ್ರಕಾಶಕ್ಕೆ ಸಮಾನವಾಗುವುದಿಲ್ಲ. ಇಂಥ ಶ್ರೀಕೃಷ್ಣನ ಉದರದಲ್ಲಿ ಅನಂತಭೇದದಿಂದ ಕೂಡಿದ ಎಲ್ಲ ಜಗತ್ತನ್ನು ನೋಡಿ ಆಶ್ಚರ್ಯಚಕಿತನಾಗಿ ರೋಮಾಂಚನವುಳ್ಳವನಾಗಿ ದಂಡಪ್ರಣಾಮ ಮಾಡಿ ಅಂಜಲಿಬದ್ಧವುಳ್ಳವನಾಗಿ ಶ್ರೀಕೃಷ್ಣನನ್ನು ಪ್ರಾರ್ಥಿಸುತ್ತಾನೆ.

ಇಲ್ಲಿ ಅರ್ಜುನನು ದಿವ್ಯ ಚಕ್ಷುಸ್ಸಿನಿಂದ ನೋಡಿದ ಎಲ್ಲಾ ಪ್ರಮೇಯವು ಸತ್ಯವೇ ಆಗಬೇಕು. ಸುಳ್ಳನ್ನು ತೋರಿಸುವ ಚಕ್ಷುಸ್ಸು ದಿವ್ಯವಾಗಲಾರದು. ಆ ದಿವ್ಯ ಚಕ್ಷುಸ್ಸಿನಿಂದ ಸರ್ವ ಜಗತ್ತನ್ನು, ಪರಮಾತ್ಮನ ಅನಂತಗುಣಗಳನ್ನು, ಅನಂತ ರೂಪಗಳನ್ನು ಅರ್ಜುನನು ನೋಡಿದ್ದಾನೆ. ಆದುದರಿಂದ ಈ ಜಗತ್ತು, ಪರಮಾತ್ಮ, ಅವನ ಗುಣಗಳು ಎಲ್ಲವೂ ಸತ್ಯವೆಂದೇ ನಿಶ್ಚಯವಾಗುತ್ತದೆ. ಗೀತೆಯು ಜಗನ್ಮಿಥ್ಯಾತ್ವವನ್ನು, ನಿರ್ಗುಣ ಬ್ರಹ್ಮನನ್ನು ಹೇಳಲಿಕ್ಕೆ ಹೊರಟಿದೆಯೆಂಬ ವಾದವು ಯುಕ್ತವಲ್ಲವೆಂದು ಚೆನ್ನಾಗಿ ಇಲ್ಲಿ ತಿಳಿಯುತ್ತದೆ. (ಹತ್ತೊಂಭತ್ತನೇ ದಿನದ ಉಪನ್ಯಾಸದ ಮುಗಿಯಿತು.)

***

ಅರ್ಜುನನು ವಿಶ್ವರೂಪವನ್ನು ದರ್ಶನ ಮಾಡುತ್ತಾ ತನ್ನ ಅನುಭವವನ್ನು ಶ್ರೀಕೃಷ್ಣ ಪರಮಾತ್ಮನಲ್ಲಿ ನಿವೇದನ ಮಾಡುತ್ತಾನೆ: "ಎಲೋ ಶ್ರೀಕೃಷ್ಣನೇ! ನಿನ್ನ ದೇಹದಲ್ಲಿ ಚತುರ್ಮುಖ ಬ್ರಹ್ಮದೇವರನ್ನು, ಅವರ ತೊಡೆಯಲ್ಲಿರತಕ್ಕ ರುದ್ರ-ದೇವರನ್ನು, ಆ ದೇವರುಗಳನ್ನು ಆಶ್ರಯಿಸಿದ ಸಮಸ್ತ ದೇವತೆಗಳನ್ನು, ಋಷಿಗಳನ್ನು, ಸರ್ಪಗಳನ್ನು, ಚರಾಚರಾತ್ಮಕ ಸಮಸ್ತ ಪ್ರಾಣಿಗಳನ್ನು ನೋಡುತ್ತಿದ್ದೇನೆ. ಎಲೋ ಜಗದೀಶ್ವರನೇ! ನಿನ್ನ ಅನೇಕ ಬಾಹುಗಳನ್ನು, ಅನೇಕ ಉದರ, ವಕ್ತ್ರ, ನೇತ್ರಗಳನ್ನು ನೋಡುತ್ತಿದ್ದೇನೆ. ಹಿಂದೆ, ಮುಂದೆ, ಎರಡು

ಪಾರ್ಶ್ವಗಳಲ್ಲಿ ನಿನ್ನ ಅನಂತ ರೂಪಗಳನ್ನು ನೋಡುತ್ತಿದ್ದೇನೆ. ನೀನು ಸಮಸ್ತದಲ್ಲಿಯೂ ವ್ಯಾಪಿಸಿದ್ದಿ.

ಎಲೋ ದೇವನೇ! ನಿನ್ನ ಎಲ್ಲಾ ರೂಪಗಳ ಶಿರಸ್ಸಿನಲ್ಲಿ ಕಿರೀಟಗಳನ್ನು, ಬಾಹುಗಳಲ್ಲಿ ಗದೆಗಳನ್ನು, ಹಸ್ತಗಳಲ್ಲಿ ಚಕ್ರಗಳನ್ನು ನೋಡುತ್ತಿದ್ದೇನೆ. ನೀನು ಒಂದು ತೇಜೋರಾಶಿಯಾಗಿ ಕಾಣಿಸುತ್ತಿದ್ದಿ. ನಿನ್ನ ಕಾಂತಿಯು ಅಸಾಧಾರಣ-ವಾದದ್ದು. ಪ್ರಕಾಶಮಾನವಾದ ಅಗ್ನಿ ಮತ್ತು ಸೂರ್ಯರಿಗೆ ಸಮಾನವಾದ ಪ್ರಭೆಯುಳ್ಳವನಾಗಿದ್ದಿ. ನೀನು ಇಂಥವನು ಅಂಥವನು ಅಂತ ನಿಶ್ಚಯ ಮಾಡಲಿಕ್ಕೆ ಸಾಧ್ಯವಿಲ್ಲದಂತೆ ಆಗಿದೆ. ಆದರೂ ನಿನ್ನ ಅನುಗ್ರಹದಿಂದ ಸ್ವಲ್ಪವಾದರೂ ನೋಡುತ್ತಾ ಇದ್ದೇನೆ.

ಎಲೋ ದೇವನೇ! ನೀನು ನಾಶರಹಿತನಾದ ಪರಬ್ರಹ್ಮನಾಗಿದ್ದಿ. ನೀನು ಈ ಜಗತ್ತಿಗೆ ಮುಖ್ಯ ಆಶ್ರಯನಾಗಿದ್ದಿ. ನೀನು ಹ್ರಾಸರಹಿತನಾಗಿಯೂ, ಶಾಶ್ವತವಾದ ಧರ್ಮರಕ್ಷಣೆ ಮಾಡತಕ್ಕವನಾಗಿಯೂ, ನಿರ್ವಿಕಾರನೂ, ಪುರುಷಸೂಕ್ತದಲ್ಲಿ ಹೇಳಲ್ಪಟ್ಟ ಪುರುಷನೂ ಆಗಿದ್ದಿ."

ಇಲ್ಲಿ ವಿಶೇಷಾಂಶ ತಿಳಿಯತಕ್ಕದ್ದೇನೆಂದರೆ, ಅರ್ಜುನನು ಶ್ರೀಕೃಷ್ಣನನ್ನು **ಶಾಶ್ವತಧರ್ಮಗೋಪ್ತಾ** ಎಂದು ಸ್ತೋತ್ರ ಮಾಡಿದ್ದಾನೆ. ಇದರಿಂದ ಧರ್ಮವು ಶಾಶ್ವತವಾದದ್ದು ಎಂದು ತಿಳಿಯುತ್ತದೆ. ಅಂದರೆ ಕೆಲವು ಆಧುನಿಕರು 'ಧರ್ಮವನ್ನು ಈಗಿನ ಕಾಲಕ್ಕೆ ಸರಿಯಾಗಿ ಪರಿವರ್ತನೆ ಮಾಡಬೇಕು. ಸಣ್ಣ ಮಕ್ಕಳಾಗಿದ್ದಾಗ ನಮಗೆ ಮಾಡಿಸಿದ ಅಂಗಿಯನ್ನೇ ದೊಡ್ಡವರಾದ ಮೇಲೆ ಹಾಕಿಕೊಳ್ಳಲು ಸಾಧ್ಯವಾಗುವುದಿಲ್ಲ. ಆ ಕಾಲಕ್ಕೆ ಸರಿಯಾಗಿ ಬೇರೆ ಅಂಗಿಯನ್ನು ಮಾಡಿಸಿಕೊಳ್ಳಬೇಕಾಗುತ್ತದೆ. ಹಿಂದಿನ ಕಾಲಕ್ಕೆ ಉಚಿತವಾದ ಧರ್ಮವನ್ನು ಆ ಕಾಲದ ಋಷಿಗಳು ಧರ್ಮಶಾಸ್ತ್ರಗಳಲ್ಲಿ ನಿರ್ಣಯಿಸಿದರು. ಈಗಿನ ಕಾಲಕ್ಕೆ ತಕ್ಕಂತೆ ನಾವು ಪರಿವರ್ತಿಸಿಕೊಳ್ಳಬೇಕು' ಎನ್ನುತ್ತಾರೆ. ಆದರೆ ಗೀತೆಯ ಅಭಿಪ್ರಾಯ ಧರ್ಮವು ಶಾಶ್ವತವಾದದ್ದು. ಕಾಲಕಾಲಕ್ಕೆ ಬದಲಾಯಿಸತಕ್ಕದ್ದಲ್ಲ. ಹಿಂದಿನ ಕಾಲಕ್ಕೆ ಆ ಋಷಿಗಳು ಆ ಕಾಲಕ್ಕೆ ಯೋಗ್ಯವಾಗಿ ತಮ್ಮ ಬುದ್ಧಿಶಕ್ತಿಯಿಂದ ವಿಮರ್ಶಿಸಿ ಧರ್ಮಸ್ವರೂಪ ನಿರ್ಣಯ ಮಾಡಿದ್ದಲ್ಲ. ಶಾಶ್ವತವಾದ ವೇದದಿಂದ

ಪ್ರತಿಪಾದಿಸಲ್ಪಟ್ಟ ಶಾಶ್ವತವಾದ ಧರ್ಮವನ್ನು ಲೋಕಕ್ಕೆ ಋಷಿಗಳು ಪ್ರಚಾರ ಮಾಡಿದರೆಂದೇ ತಿಳಿಯಬೇಕು. ವೇದದಲ್ಲಿಯೇ ಕಾಲಕಾಲಕ್ಕೆ ಬೇರೆಬೇರೆಯಾದ ಧರ್ಮವನ್ನು ನಿರ್ಣಯಿಸಿದ್ದಾರೆ. ಆ ಕಾಲದವರು ಆ ವೇದೋಕ್ತ ಧರ್ಮವನ್ನು ಆಚರಿಸಲಿಕ್ಕೆ ಶಕ್ತಿಯಿಲ್ಲದಿದ್ದವರೂ ಅಶಕ್ಯ ಧರ್ಮಗಳನ್ನು ಆಚರಿಸಬೇಕೆಂದು ಶಾಸ್ತ್ರ ಹೇಳುವುದಿಲ್ಲ. **"ಸ್ವಧರ್ಮಾಚರಣಂ ಶಕ್ತ್ಯಾ"** ಎಂಬ ಪ್ರಮಾಣ ಶಕ್ತ್ಯನುಸಾರ ಮಾಡಬೇಕೆಂದೇ ಹೇಳುತ್ತದೆ. ಆದುದರಿಂದ ಧರ್ಮಪರಿವರ್ತನೆ ಮಾಡಲು ಅವಶ್ಯಕತೆಯಿಲ್ಲ ಮತ್ತು ಧರ್ಮ ಪರಿವರ್ತನ ಮಾಡುವ ಅಧಿಕಾರವೂ ಇಲ್ಲ. ಹೇಗೆ ರೋಗಿಯಾದವನು ಡಾಕ್ಟರರು ಹೇಳತಕ್ಕ ಔಷಧವನ್ನೇ ಸ್ವೀಕರಿಸಬೇಕು, ತನಗೆ ಮನಸ್ಸಿಗೆ ಬಂದದ್ದನ್ನು ಸ್ವೀಕರಿಸಬಾರದು. ಡಾಕ್ಟರರು ಬೇರೆ ಬೇರೆ ರೋಗಿಗಳಿಗೆ ದೇಶ ಕಾಲ ರೋಗಿಗಳಿಗೆ ಉಚಿತವಾದ ಔಷಧಿಯನ್ನು ಕೊಡುತ್ತಾರೆ. ಅದರಂತೆ ಶಾಸ್ತ್ರವೇ ದೇಶ, ಕಾಲ, ಅಧಿಕಾರಿಗಳಿಗೆ ಉಚಿತವಾದ ಧರ್ಮವನ್ನು ಹೇಳಿದೆ. ಆ ಪ್ರಕಾರವೇ ನಾವು ಆಚರಿಸಬೇಕು ಎಂದು ತಿಳಿಯುತ್ತದೆ.

"ಹೇ ದೇವಾ! ನಿನಗೆ ಉತ್ಪತ್ತಿ, ಸ್ಥಿತಿ, ಲಯಗಳು ಇಲ್ಲ. ನಿನ್ನ ಪ್ರಭಾವಕ್ಕೆ ಅಂತ್ಯವಿಲ್ಲ. ನಿನ್ನ ಕಣ್ಣುಗಳಲ್ಲಿ ಚಂದ್ರ ಸೂರ್ಯರು ಆಶ್ರಯಿಸಿಕೊಂಡಿದ್ದಾರೆ. ಸೂರ್ಯನು **"ಚಕ್ಷೋಸ್ಸೂರ್ಯೋ ಅಜಾಯತ"** ಎಂಬ ಶ್ರುತಿ ಪ್ರಕಾರ ನಿನ್ನ ಚಕ್ಷುಸ್ಸಿನಿಂದ ಹುಟ್ಟಿದವನಾದ ಪ್ರಯುಕ್ತ ಚಕ್ಷುಸ್ಸನ್ನು ಆಶ್ರಯಿಸಿಕೊಂಡಿದ್ದಾನೆ. **"ಚಂದ್ರಮಾ ಮನಸೋ ಜಾತಃ** = ಚಂದ್ರನು ನಿನ್ನ ಮನಸ್ಸಿನಿಂದ ಹುಟ್ಟಿದನು' ಎಂದು ಹೇಳಿದ್ದಾರಾದರೂ ಚಂದ್ರನು ಮನಸ್ಸಿನಲ್ಲೇ ಒಂದು ರೂಪದಿಂದ ಇದ್ದು ಇನ್ನೊಂದು ರೂಪದಿಂದ ಕಣ್ಣಿನಲ್ಲಿದ್ದಾನೆ."

ಈ ವಿಶ್ವರೂಪವನ್ನು ಅರ್ಜುನನು ಒಬ್ಬನೇ ನೋಡಿದ್ದಾ? ಇನ್ನೂ ಯಾರು ನೋಡತಕ್ಕವರಿರಲಿಲ್ಲವೇ? ಎಂದು ಪ್ರಶ್ನಿಸಿದರೆ ಅದಕ್ಕೆ ಹೀಗೆ ಸಮಾಧಾನ ತಿಳಿಯಬೇಕು. ಅರ್ಜುನನಿಗೆ ವಿಶ್ವರೂಪವನ್ನು ತೋರಿಸುವ ಕಾಲಕ್ಕೆ ಶ್ರೀಕೃಷ್ಣನು ಎಷ್ಟೋ ದೇವಷ್ಯಾದಿಗಳಿಗೆ ದಿವ್ಯ ಚಕ್ಷುಸ್ಸನ್ನು ಕೊಟ್ಟು ಅವರಿಗೂ ಈ ದರ್ಶನ ಆಗುವಂತೆ ಮಾಡಿದ್ದಾನೆ. 'ಲೋಕತ್ರಯ' ಎಂದರೆ ಅಧಿಕಾರಿಗಳಾದ ಮೂರೂ ಲೋಕದ ಜನರೆಂದು ಅರ್ಥ. ದೇವತೆಗಳೇ ಮೊದಲಾದವರು ವಿಶ್ವರೂಪವನ್ನು

ನೋಡಿ ಹೆದರುವ ದೃಶ್ಯವನ್ನು ಅರ್ಜುನನಿಗೆ ತೋರಿಸಬೇಕಾಗಿದೆ. ಅದಕ್ಕಾಗಿ ಇತರ ಎಷ್ಟೋ ಭಕ್ತರುಗಳಿಗೆ ದಿವ್ಯ ಚಕ್ಷುಸ್ಸನ್ನು ಕೊಟ್ಟಿದ್ದಾನೆ.

ಅರ್ಜುನನು, "ಎಲೋ ಶ್ರೀಕೃಷ್ಣನೇ! ಎಲ್ಲಾ ದೇವತೆಗಳೂ ಮುಕ್ತರೂ ನಿನ್ನಲ್ಲಿ ಪ್ರವೇಶ ಮಾಡುತ್ತಾರೆ, ಹೊರಗೆ ಬರುತ್ತಾರೆ. ಅಮುಕ್ತರಾದ ದೇವರ್ಷಿಗಳು, ಸಿದ್ಧರು, ಅಂಜಲಿಬದ್ಧರಾಗಿ ಹೆದರಿದವರಾಗಿ ಜಯ ಜಯ ಎಂದು ಸ್ತೋತ್ರ ಮಾಡುತ್ತಿದ್ದಾರೆ. ಜಗತ್ತಿಗೆ ಮಂಗಳವಾಗಲಿ ಎಂದು ಹೇಳುತ್ತಿದ್ದಾರೆ. ಏಕಾದಶ ರುದ್ರರು, ಆದಿತ್ಯರು, ವಸುಗಳು, ಸಾಧ್ಯರು, ವಿಶ್ವೇ ದೇವತೆಗಳು, ಅಶ್ವಿನೀ ದೇವತೆಗಳು, ಮರುತ್ತುಗಳು, ಊಷ್ಮವನ್ನು ಪಾನ ಮಾಡುವ ಪಿತೃಗಳು, ಗಂಧರ್ವರು, ಯಕ್ಷರುಗಳು, ಅಪ್ಸರರು, ಸಿದ್ಧರು, ಎಲ್ಲರೂ ಆಶ್ಚರ್ಯಭರಿತರಾಗಿ ನಿನ್ನನ್ನು ನೋಡುತ್ತಿದ್ದಾರೆ. ನಿನ್ನ ವಿಚಿತ್ರವಾದ, ಮಹತ್ತಾದ ಮತ್ತು ಭಯಂಕರ-ವಾದ ರೂಪವನ್ನು ನೋಡಿ ಸಮಸ್ತ ಲೋಕಗಳು ಹೆದರುವುದಲ್ಲದೆ ನಾನೂ ಸಹ ಹೆದರಿದ್ದೇನೆ.

ಇಂಥ ರೂಪವನ್ನು ನೋಡಿ ನನಗೆ ಧೈರ್ಯವಾಗಲೀ ಶಾಂತಿಯಾಗಲೀ ಇಲ್ಲದಂತಾಗಿದೆ. ಪ್ರಳಯಕಾಲದ ಬೆಂಕಿಯಂತೆ ಇರುವ ತೀಕ್ಷ್ಣವಾದ ದಂತಗಳಿಂದ ಕೂಡಿದ ಮುಖಗಳನ್ನು ನೋಡಿ ನನಗೆ ದಿಗ್ಭ್ರಮೆಯಾಗಿದೆ. ಈ ಧೃತರಾಷ್ಟ್ರನ ಪುತ್ರರು, ಎಲ್ಲಾ ರಾಜರುಗಳು, ಭೀಷ್ಮ, ದ್ರೋಣ, ಕರ್ಣ ಮೊದಲಾದವರು, ಮತ್ತು ನಮ್ಮ ಸೈನ್ಯದಲ್ಲಿರತಕ್ಕ ಅನೇಕ ಯೋಧರು ನಿನ್ನ ಮುಖವನ್ನು ಪ್ರವೇಶ ಮಾಡುತ್ತಿದ್ದಾರೆ. ಅವರು ತಪ್ಪಿಸಿಕೊಂಡು ಹೊರಗೆ ಬರುವಾಗ ನಾಲಿಗೆಯಿಂದ ಅವರನ್ನು ಒಳಗೆ ತೆಗೆದುಕೊಳ್ಳುವುದು ಕಾಣಿಸುತ್ತಿದೆ. ಅವರೆಲ್ಲರ ತಲೆಗಳು ಚೂರುಚೂರಾಗಿದ್ದು ಕಾಣುತ್ತವೆ."

ಇಲ್ಲಿ ವಿಶೇಷಾಂಶ: ಭೀಷ್ಮ ದ್ರೋಣಾದಿಗಳು ತಮ್ಮ ತಮ್ಮ ಸ್ಥಾನಗಳಲ್ಲಿ ಇದ್ದಾರೆಯೇ ಹೊರತು ಪರಮಾತ್ಮನ ಮುಖದಲ್ಲಿ ಪ್ರವೇಶ ಮಾಡಿಲ್ಲ. ಅವರ ತಲೆಯು ಕಿರೀಟ ಮೊದಲಾದವುಗಳಿಂದ ಅಲಂಕೃತಗಳಾಗಿವೆಯೇ ಹೊರತು ಚೂ ಚೂರಾಗಿ ಇತರರಿಗೆ ಕಾಣಲಿಲ್ಲ. ಆದರೆ ಇದು ಅರ್ಜುನನಿಗೆ ದಿವ್ಯ ಚಕ್ಷುಸ್ಸಿನಿಂದ ಕಂಡ ವಿಷಯ. ಇದಕ್ಕೆ ಪುರಾಣದ ದೃಷ್ಟಾಂತವೂ ಇದೆ.

ಹಿಂದಕ್ಕೆ ಪುರೂರವ ಮಹಾರಾಜನು ಅಭ್ಯಂಗನ ಮಾಡುತ್ತಿರುವಾಗ ಅಶ್ವಿನೀ ದೇವತೆಗಳು ಆ ಮಹಾರಾಜನ ಭೇಟಿಗೆ ಹೋದರು. ಅಭ್ಯಂಗನ ಮಾಡಿಸಿಕೊಂಡು ನಿಮ್ಮನ್ನು ಭೇಟಿ ಮಾಡುತ್ತೇನೆಂದು ಆ ರಾಜನು ಹೇಳಿ ಕಳುಹಿಸಿದನು. ಆಗ ಅಶ್ವಿನೀ ದೇವತೆಗಳು ಈಗಲೇ ನಿನ್ನನ್ನು ನೋಡಬೇಕೆಂದು ತಿಳಿಸಿದರು. ಅದಕ್ಕೆ ಆಗಲಿಯೆಂದು ಪುರೂರವ ಮಹಾರಾಜನು ಹೊರಗೆ ಬಂದು ನನ್ನ ಸರ್ವಾಂಗವನ್ನು ಪರೀಕ್ಷಿಸಿ ಎಂದು ತಿಳಿಸಿದನು. ಎಲ್ಲಾ ದೇಹವನ್ನು ಪರೀಕ್ಷಿಸಿದರು. ಅಭ್ಯಂಗನ ಮಾಡಿ ಪುನಃ ಅಲಂಕಾರಯುಕ್ತನಾಗಿ ಬಾ ಎಂದು ಹೇಳಿದರು. ಅದೇ ರೀತಿಯಾಗಿ ಆ ಮಹಾರಾಜನು ಮತ್ತೊಮ್ಮೆ ಬಂದನು. ಆವಾಗ ಪುನಃ ಪರೀಕ್ಷಿಸಿ ನಿನ್ನ ದೇಹದಲ್ಲಿ ಕ್ಷಣಾರ್ಧಕ್ಕೆ ವ್ಯತ್ಯಾಸವು ಆಗುತ್ತಾ ಇದೆ. ನಿನಗೆ ವಾರ್ಧಕ್ಯಾವಸ್ಥೆಯು ಬಂದಿದೆ ಎಂದು ಅಶ್ವಿನೀ ದೇವತೆಗಳು ಹೇಳಿದರು. ಪುರೂ-ರವ ಮಹಾರಾಜನಲ್ಲಾದ ಆ ವಾರ್ಧಕ್ಯಾವಸ್ಥೆಯ ಬದಲಾವಣೆಯು ಬೇರಾರಿಗೂ ಕಾಣಲಿಲ್ಲ. ದೇವವೈದ್ಯರಾದ ಅಶ್ವಿನೀ ದೇವತೆಗಳಿಗೆ ಮಾತ್ರ ಸೂಕ್ಷ್ಮದೃಷ್ಟಿಯಿಂದ ತಿಳಿಯಿತು ಎಂದು ಪುರಾಣದಲ್ಲಿ ಇದೆ.

ಅದರಂತೆ ಅರ್ಜುನನಿಗೆ ದಿವ್ಯಚಕ್ಷುಸ್ಸಿನಿಂದ ಈ ವಿಷಯ ತಿಳಿದಿದೆ: ಶ್ರೀಕೃಷ್ಣನು ತನ್ನ ಬಾಯನ್ನು ಭೀಷ್ಮಾದಿಗಳ ತಲೆಯ ಸಮೀಪಕ್ಕೆ ತೆಗೆದುಕೊಂಡು ಹೋಗಿ ಬಾಯನ್ನು ತೆರೆಯುತ್ತಾ ಇದ್ದಾನೆ. ಆವಾಗ ಭೀಷ್ಮಾದಿಗಳ ತಲೆ ಮೊದಲಾದ ಅಂಗಗಳಲ್ಲೆಲ್ಲ ನಾಶೋನ್ಮುಖತ್ವದ ಚಿಹ್ನೆಗಳೂ ಕಂಡುಬಂದವು. ಸೂಕ್ಷ್ಮದೃಷ್ಟಿ ಇಲ್ಲದ ಯಾರಿಗೂ ಇದು ತಿಳಿಯಲಿಲ್ಲ ಎಂದು ಅಭಿಪ್ರಾಯ.

ಅರ್ಜುನನು, "ಎಲೋ ಕೃಷ್ಣನೇ! ನದಿಗಳಲ್ಲಿ ಜಲಗಳು ಬಹು ವೇಗಭರಿತವಾಗಿ ಸಮುದ್ರವನ್ನು ಕುರಿತು ಹೋಗುವಂತೆ ಈ ರಾಜರುಗಳು ನಿನ್ನ ಮುಖದಲ್ಲಿ ಪ್ರವೇಶ ಮಾಡುವಂತೆ ಕಾಣುತ್ತಿದೆ. ದೊಡ್ಡದಾದ ಬೆಂಕಿಯಲ್ಲಿ ಪತಂಗಗಳು ತಮ್ಮ ನಾಶಕ್ಕೋಸ್ಕರವಾಗಿ ಹೇಗೆ ಪ್ರವೇಶಮಾಡುತ್ತವೋ ಹಾಗೇ ಇವರೆಲ್ಲರೂ ನಿನ್ನ ಮುಖದಲ್ಲಿ ಹೋಗಿ ಹಲ್ಲುಗಳ ಮಧ್ಯದಲ್ಲಿ ಸಿಕ್ಕಿಕೊಂಡು ನಾಶವನ್ನು ಹೊಂದುವವರಂತೆ ಕಾಣಿಸುತ್ತಾರೆ. ಎಲೋ ಶ್ರೀಕೃಷ್ಣನೇ ನೀನು

ಯಾರು? ನಿನ್ನ ಮಹಿಮೆಯೇನು? ನೀನು ಏನು ಮಾಡಲು ಸಿದ್ಧನಾಗಿದ್ದಿ?" ಎಂದನು.

ಆವಾಗ ಶ್ರೀಕೃಷ್ಣನು ಹೇಳುತ್ತಾನೆ: "ನಾನು ಸರ್ವವನ್ನು ಸಂಹಾರ ಮಾಡಲು ಹೊರಟಿದ್ದೇನೆ. ನಾನು ಕಾಲನಾಮಕನಾಗಿದ್ದೇನೆ. ನಿನ್ನ ಹೊರತು (ಪಾಂಡವರ ಹೊರತು) ಯಾರೂ ಉಳಿಯುವದಿಲ್ಲ. ಜಯವೋ ಅಪಜಯವೋ ಎಂಬ ಸಂಶಯವನ್ನು ಹಿಂದಕ್ಕೆ ನೀನು ಮಾಡಿದಿ. ಆ ಸಂಶಯ ಬೇಡ. ಎಲ್ಲಾ ಶತ್ರುಗಳನ್ನು ನೀನು ಜಯಿಸುತ್ತಿ.

ನಾನೇ ಸಂಹಾರಮಾಡತಕ್ಕವನಾದರೂ ನೀನು ಈ ಯುದ್ಧದಲ್ಲಿ ನನಗೆ ನಿಮಿತ್ತಮಾತ್ರನಾಗಿದ್ದಿ. ಸ್ವಯಂ ಬೀಳಲು ಸಿದ್ಧವಾದ ಮರದ ಎಲೆಗೆ ಬೀಳಲು ಗಾಳಿಯ ಸಂಬಂಧವು ಹೇಗೆ ನಿಮಿತ್ತಮಾತ್ರವೋ ಹಾಗೆಯೇ ನೀನು. ನೀನು ನಿಮಿತ್ತನಾಗಿದ್ದರಿಂದ ನೀನೇ ಜಯಿಸಿದಂತಾಯಿತು. ಈ ಸಮೃದ್ಧಿಯುಳ್ಳ ರಾಜ್ಯವು ನಿನಗಾಯಿತು. ಯಶಸ್ಸು ನಿನಗೆ ಬಂತು. ಆದುದರಿಂದ ಯುದ್ಧಕ್ಕೋಸ್ಕರ ಸಿದ್ಧನಾಗು.

'ದ್ರೋಣರು ಎಲ್ಲರಿಗೂ ಧನುರ್ವಿದ್ಯೆಯನ್ನು ಉಪದೇಶಿಸಿರುವ ಆಚಾರ್ಯರು. ಭೀಷ್ಮರು ತಂದೆಯಾದ ಶಂತನುವಿನಿಂದ ಸ್ವೇಚ್ಛಾನುಸಾರಿಯಾದ ಮರಣದ ವರವನ್ನು ಪಡೆದಿದ್ದಾರೆ. ಕರ್ಣನಲ್ಲಿ ಇಂದ್ರದೇವರು ಕೊಟ್ಟ ಅಮೋಘವಾದ ಶಕ್ತಿಯಿದೆ. ಜಯದ್ರಥನಿಗೆ 'ನಿನ್ನ ತಲೆಯನ್ನು ಯಾರು ಕೆಳಗೆ ಬೀಳಿಸುತ್ತಾರೋ, ಅವರಿಗೆ ಕೂಡಲೇ ಮೃತ್ಯುವೊದಗಲಿ' ಎಂಬ ತಂದೆಯು ಕೊಟ್ಟ ವರವಿದೆ. ಇಂಥ ಅನೇಕ ಮಹಾವ್ಯಕ್ತಿಗಳನ್ನು ನಾನು ಹೇಗೆ ಸಂಹರಿಸಲಿ?' ಎಂಬ ಭಯಪಡಬೇಡ. ನಾನೇ ಅವರನ್ನು ಸಂಹಾರ ಮಾಡತಕ್ಕವನಿದ್ದೇನೆ."

ಈ ಶ್ರೀಕೃಷ್ಣನ ಮಾತನ್ನು ಕೇಳಿ ಅರ್ಜುನನು ಭಯದಿಂದ ನಡುಗುತ್ತಾ, ಕೈ ಮುಗಿಯುತ್ತಾ, ಗದ್ಗದವಾದ ಸ್ವರದಿಂದ ಕೃಷ್ಣನನ್ನು ಸ್ತೋತ್ರ ಮಾಡುತ್ತಾನೆ: "ಇಂದ್ರಿಯಗಳಿಗೆ ಸ್ವಾಮಿಯಾದ್ದರಿಂದ ಹೃಷಿಕೇಶ ಎಂದು ಕರೆಯಲ್ಪಡುವ ಶ್ರೀಕೃಷ್ಣನೇ! ನಿನ್ನ ಮಹಿಮೆಯನ್ನು ಕೀರ್ತನೆ ಮಾಡಿ ಜಗತ್ತು ಸಂತೋಷ ಹೊಂದುತ್ತದೆ. ಮತ್ತಷ್ಟು ಪ್ರೇಮವನ್ನು ನಿನ್ನಲ್ಲಿ ಮಾಡುತ್ತದೆ. ರಾಕ್ಷಸರು,

ಪಿಶಾಚಿಗಳು, ನಿನ್ನ ಮಹಿಮೆಯನ್ನು ಕೀರ್ತನೆ ಮಾಡಿದಾಗ ಭಯದಿಂದ ದಿಕ್ಕು ದಿಕ್ಕಿಗೆ ಓಡಿ ಹೋಗುತ್ತಾರೆ. ಸಿದ್ಧರುಗಳು ಎಲ್ಲರೂ ನಿನಗೆ ನಮಸ್ಕಾರ ಮಾಡುತ್ತಾರೆ. ಆ ಮಹಿಮೆಯು ನಿನ್ನಲ್ಲಿ ಯೋಗ್ಯವಾಗಿದೆ. ಬ್ರಹ್ಮನಿಗೂ ಆದಿಕರ್ತನಾದ, ಮಹಾತ್ಮನಾದ ನಿನಗೆ ಯಾರು ತಾನೇ ನಮಸ್ಕಾರ ಮಾಡಲಿಕ್ಕಿಲ್ಲ!

ನೀನು ಜಗತ್ತಿಗೆ ಆಧಾರ, ದೇವತೆಗಳಿಗೆ ಸ್ವಾಮಿ, ಅಪರಿಮಿತ, ನಾಶರಹಿತ, ವ್ಯಕ್ತಾವ್ಯಕ್ತ ಜಗತ್ತಿಗಿಂತ ವಿಲಕ್ಷಣ. ನಿನ್ನನ್ನು ಆದಿದೇವ ಎಂದೂ ಪುರಾಣಪುರುಷ ಎಂದೂ ಕರೆಯುತ್ತಾರೆ. ಈ ಜಗತ್ತಿಗೂ ಉತ್ತಮ ಆಶ್ರಯ ನೀನು. ನೀನು ಎಲ್ಲವನ್ನೂ ತಿಳಿಯುವವನು. ಉಳಿದವರೂ ತಿಳಿಯಲು ನೀನೇ ಯೋಗ್ಯ. ನೀನು ಉತ್ತಮ ತೇಜೋರೂಪ. ನೀನು ಎಲ್ಲಾ ಕಡೆ ವ್ಯಾಪಿಸಿರುವಿ. ಅನಂತರೂಪವುಳ್ಳವನಾಗಿರುವಿ. ಬಲಜ್ಞಾನ ಸ್ವರೂಪನಾದ ಪ್ರಯುಕ್ತ ವಾಯು-ಶಬ್ದವಾಚ್ಯನು ನೀನೇ. ಎಲ್ಲರನ್ನೂ ನಿಯಮನ ಮಾಡುವ ಪ್ರಯುಕ್ತ ಯಮ-ಶಬ್ದವಾಚ್ಯನೂ ನೀನೇ. ಸ್ವತಃ ಪ್ರವೃತ್ತಿ ಇಲ್ಲದ ಈ ಜಗತ್ತಿಗೆ ನಿಯಾಮಕ-ನಾದುದರಿಂದ ಅಗ್ನಿಶಬ್ದವಾಚ್ಯನಾಗಿರುವಿ. ಭಕ್ತರನ್ನು ಸ್ವೀಕಾರ ಮಾಡುವ ಪ್ರಯುಕ್ತ ವರುಣಶಬ್ದವಾಚ್ಯನಾಗಿರುವಿ. ಅತಿಶಯ ಸುಖದಿಂದ ಕೂಡಿದವನಾದ್ದರಿಂದ ಶಶಾಂಕಶಬ್ದವಾಚ್ಯನೂ ನೀನೇ. ಪ್ರಜೆಗಳನ್ನು ಪಾಲನೆ ಮಾಡುವುದರಿಂದ ಪ್ರಜಾಪತಿ ಶಬ್ದವಾಚ್ಯನೂ ನೀನೇ. ಎಲ್ಲರಿಗೂ ಪಿತಾಮಹನಾದ ಬ್ರಹ್ಮದೇವರಿಗೂ ತಂದೆ-ಯಾದ್ದರಿಂದ ಪ್ರಪಿತಾಮಹಶಬ್ದವಾಚ್ಯನಾಗಿರುವಿ.

ನಿನಗೆ ನಮಸ್ಕಾರ. ನಿನಗೆ ಸಾವಿರ ಬಾರಿ ನಮಸ್ಕಾರ ಮಾಡುತ್ತೇನೆ. ಮತ್ತೂ ಮತ್ತೂ ನಮಸ್ಕಾರ ಮಾಡುತ್ತೇನೆ. ಎದುರಿನಲ್ಲೂ ಹಿಂಬದಿಯಲ್ಲೂ ನಿನಗೆ ನಮಸ್ಕಾರ ಮಾಡುತ್ತೇನೆ. ಎರಡು ಪಾರ್ಶ್ವಗಳಲ್ಲೂ, ಮೇಲ್ಭಾಗದಲ್ಲೂ, ಅಧೋಭಾಗದಲ್ಲೂ ನಿನಗೆ ನಮಸ್ಕಾರ. ಅನಂತವಾದ ಪರಾಕ್ರಮವುಳ್ಳವನು ನೀನು. ನೀನು ಸರ್ವವ್ಯಾಪ್ತನಾದ್ದರಿಂದ ನಿನ್ನನ್ನು ಸರ್ವನೆಂದು ಕರೆಯುತ್ತಾರೆ.

ಇಲ್ಲಿ ವಿಶೇಷಾಂಶ: **"ಸರ್ವಂ ಖಲ್ವಿದಂ ಬ್ರಹ್ಮ"** ಎಂಬ ಶ್ರುತಿಯಲ್ಲಿ ಬ್ರಹ್ಮನು ಸರ್ವಸ್ವರೂಪನಾಗಿದ್ದಾನೆಂದು ಮೇಲ್ನೋಟಕ್ಕೆ ಅರ್ಥವಾಗುತ್ತದೆ. ಆ ಶ್ರುತಿಗೆ ಇಲ್ಲಿ ಅರ್ಜುನನು ಅರ್ಥ ಹೇಳುತ್ತಿದ್ದಾನೆ. ಬ್ರಹ್ಮನು ಸರ್ವಸ್ವರೂಪನೆಂದು

ಆ ಶ್ರುತಿಗೆ ಅರ್ಥವಲ್ಲ. ಕಬ್ಬಿಣದ ತುಂಡನ್ನು ಬೆಂಕಿಯಿಂದ ಕಾಯಿಸಿದಾಗ ಅದನ್ನು ಕಬ್ಬಿಣವೆಂದು ಕರೆಯದೆ, ಆ ಕಬ್ಬಿಣದ ಒಳಗೂ ಹೊರಗೂ ಬೆಂಕಿಯೇ ಕಾಣಿಸುತ್ತಿರುವುದರಿಂದ ಇದು ಬೆಂಕಿಯೆಂದೇ ವ್ಯವಹಾರ ಮಾಡುತ್ತಾರೆ. 'ಇದು' ಎಂದರೆ 'ಕಬ್ಬಿಣದ ತುಂಡು', ಬೆಂಕಿಯಾಗಿದೆ ಎಂದು ಆ ಮಾತಿಗೆ ಅರ್ಥ-ವಾಯಿತು. ಕಬ್ಬಿಣದ ತುಂಡು ಬೆಂಕಿಯಲ್ಲವಾದರೂ 'ಇದು ಬೆಂಕಿ' ಎಂದು ಹೇಳುವವರ ಅಭಿಪ್ರಾಯವೇನು? ಅದರ ಒಳಗೂ ಹೊರಗೂ ಬೆಂಕಿ ವ್ಯಾಪಿಸಿದೆ ಎಂದೇ ಅವರ ಅಭಿಪ್ರಾಯ. ಅದರಂತೆ 'ಸರ್ವವೂ ಬ್ರಹ್ಮ ಸ್ವರೂಪ' ಎಂಬ ಮಾತಿಗೆ ಸರ್ವವಸ್ತುಗಳಲ್ಲಿಯೂ ಪರಬ್ರಹ್ಮನು ಹೊರಗೂ ಒಳಗೂ ವ್ಯಾಪಿಸಿದ್ದಾನೆ ಎಂದರ್ಥ. ಕಬ್ಬಿಣದ ತುಂಡಿನಲ್ಲಿ ಬೆಂಕಿಯು ವ್ಯಾಪಿಸಿದ್ದರೂ ಕಬ್ಬಿಣ ಬೇರೆ, ಬೆಂಕಿ ಬೇರೆ. ಅದರಂತೆ ಸರ್ವವಸ್ತುಗಳೂ ಬ್ರಹ್ಮನೂ ಬೇರೆ ಬೇರೆಯಾಗಿರುತ್ತವೆ ಎಂದು ಅಭಿಪ್ರಾಯ.

ಅರ್ಜುನನು, "ಎಲೋ ಕೃಷ್ಣನೇ! ನೀನು ಸಖನೆಂದು ಭಾವಿಸಿ ಬಹುಮಾನವಿಲ್ಲದೆ 'ಹೇ ಕೃಷ್ಣಾ, ಹೇ ಯಾದವಾ, ಹೇ ಸಖಾ!' ಎಂದು ನಿನ್ನ ಮಹಿಮೆಯನ್ನು ತಿಳಿಯದೆ ಇದ್ದ ನಾನು ಪ್ರಮಾದದಿಂದಲೋ ವಿಶ್ವಾಸದಿಂದಲೋ ಕರೆದಿದ್ದೇನೆ. ಇದು ನನ್ನ ಅಪರಾಧವಾಗಿದೆ."

ಇಲ್ಲಿ ವಿಶೇಷಾಂಶ: ಕೃಷ್ಣನನ್ನು 'ಹೇ ಕೃಷ್ಣಾ!' ಎಂದು ನಾಮಕೀರ್ತನೆ ಮಾಡಬೇಕೆಂದು ಶಾಸ್ತ್ರವು ಹೇಳುತ್ತದೆ. ಆದರೆ ಅರ್ಜುನನು ಇಲ್ಲಿ ಅಪರಾಧ-ವಾಯಿತೆಂದು ಹೇಳುತ್ತಿದ್ದಾನೆ. ಅದರ ಅಭಿಪ್ರಾಯ ಹೀಗಿದೆ. ಸಕಲ ಲೋಕಗಳಿಗೂ ನಿಯಾಮಕನಾದುದರಿಂದ ಮತ್ತು ಸುಖರೂಪನಾದುದರಿಂದ ಕೃಷ್ಣಶಬ್ದದಿಂದ ವಾಚ್ಯನೆಂದು ತಿಳಿದು ಭಕ್ತಿಪೂರ್ವಕವಾಗಿ 'ಹೇ ಕೃಷ್ಣಾ!' ಎಂದು ಕರೆದರೆ ಅದು ಪುಣ್ಯಕ್ಕೆ ಕಾರಣವಾಗುವದು. ನೀನು ಯದುಕುಲದಲ್ಲಿ ಹುಟ್ಟಿದರಿಂದ ಯದುಕುಲವು ಜಗತ್ಪ್ರಖ್ಯಾತವಾಯಿತು, ಆ ಕುಲದ ಉದ್ಧಾರವಾಯಿತು ಎಂಬ ಮಹಿಮೆಯನ್ನು ಸ್ಮರಿಸಿ 'ಯಾದವಾ!' ಎಂದು ಸಂಬೋಧಿಸಿದರೆ ಪುಣ್ಯವೇ ಬರುವುದು. 'ಅನಂತ-ಕಲ್ಯಾಣಗುಣಪರಿಪೂರ್ಣನಾದ ಪರಮಾತ್ಮನು ನನಗೆ ಸಖನಾಗಿದ್ದಾನೆ, ಅಹೋ

ನನ್ನ ಭಾಗ್ಯವೇ ದೊಡ್ಡದು' ಎಂಬ ಬಹುಮಾನ ಬುದ್ಧಿಯಿಂದ 'ಸಖ' ಎಂದು ಕರೆದರೆ ಯೋಗ್ಯವೇ ಆಗುವದು. ಆದರೆ ಅರ್ಜುನನು ಅಜ್ಞಾನದಿಂದಾಗಿ, ಬಹು-ಮಾನ ಬುದ್ಧಿಯಿಲ್ಲದೆ ಈ ರೀತಿ ಕೃಷ್ಣನನ್ನು ಕರೆದಿದ್ದಾನೆ. ಆದ್ದರಿಂದ ಅದು ಅಪರಾಧವೆಂದು ಅರ್ಜುನನ ಅಭಿಪ್ರಾಯ.

ಹಿಂದಕ್ಕೆ ದ್ರೋಣಾಚಾರ್ಯರು ತನ್ನ ಮಗನಾದ ಅಶ್ವತ್ಥಾಮನು ಹಾಲು ಬೇಕು ಎಂದು ಅಳುತ್ತಿರುವಾಗ ಅದಕ್ಕಾಗಿ ಗೋವನ್ನು ಸಂಪಾದಿಸುವ ಉದ್ದೇಶಿಸಿ ಬಾಲ್ಯದಲ್ಲಿ ಸಖನಾಗಿದ್ದ ದ್ರುಪದ ಮಹಾರಾಜನನ್ನು ಭೇಟಿ ಮಾಡಲು ಹೋದರು. ನಿನ್ನ ಸಖರಾದ ದ್ರೋಣಾಚಾರ್ಯರು ಬಂದಿದ್ದಾರೆಂದು ದೂತನ ಮೂಲಕ ಹೇಳಿ ಕಳುಹಿಸಿದರು. ಆವಾಗ ದ್ರುಪದ ಮಹಾರಾಜನಿಗೆ 'ಸಖ' ಎಂದು ಹೇಳಿದ್ದಕ್ಕೆ ಸಿಟ್ಟು ಬಂತು. 'ನಿರ್ಧನನಾದ ಪುರುಷನು ಮಹಾರಾಜನಿಗೆ ಸಖನಾಗುವುದು ಹೇಗೆ?' ಎಂದು ಉತ್ತರ ಕೊಟ್ಟನು. ಅದರಂತೆ ಬಹುಮಾನಪೂರ್ವಕನಾಗದೆ ಸಖನೆಂದು ಕರೆದರೆ ಅಪರಾಧವಾಗುತ್ತದೆಂದು ಅರ್ಜುನನು ತಿಳಿದುಕೊಂಡನು.

"ಎಲೋ ಶ್ರೀಕೃಷ್ಣನೇ! ಊಟ ಮಾಡುವಾಗ, ಮಲಗುವಾಗ, ಕೂತಾಗ, ಮೊದಲಾದ ಸಂದರ್ಭದಲ್ಲಿ ಅಪಹಾಸಕ್ಕೋಸ್ಕರ ನಿನ್ನನ್ನು ತಿರಸ್ಕಾರ ಮಾಡಿದ್ದೇನೆ. ಅದಕ್ಕಾಗಿ ನಿನ್ನಲ್ಲಿ ಕ್ಷಮೆಯನ್ನು ಬೇಡುತ್ತೇನೆ. ನೀನು ಸರ್ವೋತ್ತಮ. ಚರಾಚರಾತ್ಮಕವಾದ ಜಗತ್ತಿಗೆ ನೀನು ತಂದೆ. ನಿನಗೆ ಸಮಾನರು ಯಾರೂ ಇಲ್ಲ. ನಿನಗಿಂತ ಶ್ರೇಷ್ಠರಂತೂ ಇಲ್ಲವೇ ಇಲ್ಲ. ಅಸದೃಶಪ್ರಭಾವವುಳ್ಳವನು ನೀನು. ಬ್ರಹ್ಮಾದಿಗಳಿಂದಲೂ ಸ್ತುತ್ಯನಾದ ನಿನಗೆ ದಂಡ ಪ್ರಣಾಮವನ್ನು ಮಾಡಿ ನಿನ್ನನ್ನು ಪ್ರಸನ್ನೀಕರಿಸುತ್ತೇನೆ.

ತಂದೆಯು ಮಗನ ಅಪರಾಧವನ್ನು ಕ್ಷಮಿಸುವಂತೆ, ಸಖನು ತನ್ನ ಸಖನ ಅಪರಾಧವನ್ನು ಕ್ಷಮಿಸುವಂತೆ, ಪ್ರಿಯನು ತನ್ನ ಪ್ರಿಯಳ ಅಪರಾಧವನ್ನು ಕ್ಷಮಿಸು-ವಂತೆ, ನೀನು ನನ್ನ ಅಪರಾಧವನ್ನು ಕ್ಷಮಿಸು.

ಇಂದಿನವರೆಗೆ ನೋಡದೆ ಇದ್ದ ನಿನ್ನ ರೂಪವನ್ನು ನೋಡಿ ಸಂತುಷ್ಟ-ನಾಗಿದ್ದೇನೆ. ಆದರೆ ನನ್ನ ಮನಸ್ಸು ಭಯದಿಂದ ವ್ಯಾಕುಲವಾಗಿದೆ. ಜಗದಾ-ಧಾರನಾದ ದೇವತೆಗಳಿಗೆ ಸ್ವಾಮಿಯಾದ ಶ್ರೀಕೃಷ್ಣನೇ ನಿನ್ನ ಅದೇ ಹಿಂದಿನ

ರೂಪವನ್ನು ತೋರಿಸು. ಕಿರೀಟ, ಗದಾ, ಚಕ್ರಗಳಿಂದ ಕೂಡಿದ ನಿನ್ನ ರೂಪವನ್ನು ನೋಡಲು ನಾನು ಅಪೇಕ್ಷಿಸುತ್ತೇನೆ. ನೀನು ಆ ಹಿಂದಿನ ರೂಪವನ್ನು ನನಗೆ ತೋರಿಸು.

ಇಲ್ಲಿ ವಿಶೇಷಾಂಶ: ಹಿಂದಿನ ರೂಪವನ್ನು ತೋರಿಸು ಎಂದು ಹೇಳುವಾಗ ಆ ಹಿಂದಿನ ರೂಪವು ಚತುರ್ಭುಜವುಳ್ಳದ್ದೆಂದು ಮೇಲೆ ಕಾಣುತ್ತದೆ. ಆದರೆ ಶ್ರೀಕೃಷ್ಣನು **'ಮಾನುಷೀಂ ತನುಮಾಶ್ರಿತಮ್'** ಎಂದು ಹೇಳಿದ್ದರಿಂದ ಚತು-ರ್ಭುಜ ಉಳ್ಳವನಾಗಿ ಕಾಣಿಸಲ್ಪಡುತ್ತಿದ್ದನೆಂದು ಹೇಳುವುದು ಯುಕ್ತವಾಗುವುದಿಲ್ಲ. ಆದ್ದರಿಂದ 'ಚತುರ್ಭುಜೇನ' ಎಂಬ ಶಬ್ದಕ್ಕೆ ಚತುರ್ಭಿಃ = ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ ಮತ್ತು ವಾಸುದೇವ ರೂಪಗಳಿಂದ, ಭುಂಕ್ತೇ = ಜಗತ್ತನ್ನು ರಕ್ಷಣ ಮಾಡುತ್ತಾನೆ ಎಂಬ ಕಾರಣದಿಂದ ಶ್ರೀಕೃಷ್ಣನನ್ನು ಚತುರ್ಭುಜನೆಂದು ಹೇಳಿದ್ದು ಎಂದು ತಿಳಿದುಕೊಳ್ಳಬೇಕು.

ಆಗ ಶ್ರೀಕೃಷ್ಣಪರಮಾತ್ಮನು, "ಎಲೋ ಅರ್ಜುನನೇ! ಇಂಥ ರೂಪವನ್ನು ನನ್ನ ಶಕ್ತಿಯಿಂದ ತೋರಿಸಿದ್ದೇನೆ. ಈ ರೂಪವು ತೇಜೋಮಯವಾದದ್ದು, ಪರಿಪೂರ್ಣವಾದದ್ದು, ಆದಿ, ಮಧ್ಯ, ಅಂತ ರಹಿತವಾದದ್ದು. ಎಲ್ಲಾ ಜಗತ್ತಿಗೂ ಆದಿಭೂತವಾದದ್ದು. ನಿನಗಿಂತ ಕಡಿಮೆ ಯೋಗ್ಯತೆಯುಳ್ಳವರಿಂದ ನೋಡಲ್ಪಡದೆ ಇದ್ದದ್ದು. ನಿನಗೆ ನಾನು ಪ್ರಸನ್ನನಾದುದರಿಂದ ನಿನಗೆ ಈ ರೂಪವು ನೋಡಲು ಸಾಧ್ಯವಾಯಿತು. ವೇದಾಧ್ಯಯನ, ಯಜ್ಞ, ದಾನ, ತಪಸ್ಸು ಮುಂತಾದ ಸಾಧನ-ಗಳಿಂದಲೂ ಈ ರೂಪವು ನನ್ನ ಅನುಗ್ರಹವಿಲ್ಲದೆ ನಿನಗಿಂತ ಬೇರೆಯವರಿಂದ ನೋಡಲು ಸಾಧ್ಯವಿಲ್ಲ. ನಿನ್ನ ಮೇಲೆ ಮಾಡಿದಷ್ಟು ಅನುಗ್ರಹವನ್ನು ನಾನು ಇನ್ನೊಬ್ಬರ ಮೇಲೆ ಮಾಡಿಲ್ಲ. ನೀನು ವ್ಯಥೆಯನ್ನಾಗಲೀ ಮೌಢ್ಯವನ್ನಾಗಲೀ ಹೊಂದಬೇಡ. ಭಯರಹಿತನಾಗಿ ಪ್ರೀತಿಯಿಂದ ನನ್ನ ರೂಪವನ್ನು ಇನ್ನೊಮ್ಮೆ ನೋಡು" ಎಂದು ಹೇಳಿ ಮೊದಲಿನ ರೂಪವನ್ನು ಅರ್ಜುನನಿಗೆ ತೋರಿಸಿದನು.

ಇಲ್ಲಿ ವಿಶೇಷಾಂಶ: **"ಸ್ವಕಂ ರೂಪಂ ದರ್ಶಯಾಮಾಸ"** ಎಂದು ಶ್ರೀಕೃಷ್ಣನು ಹೇಳಿದ್ದಾನೆ. 'ತನ್ನ ಸ್ವರೂಪವನ್ನು ತೋರಿಸಿದನು' ಎಂದು ಇದರ ಅರ್ಥ. ಇದರಿಂದ 'ವಿಶ್ವರೂಪವು ತನ್ನ ಸ್ವರೂಪವಲ್ಲ. ಅದು ಮಾಯೆಯಿಂದ

ಒಂದು ರೂಪವನ್ನು ಸೃಷ್ಟಿ ಮಾಡಿ ತೋರಿಸಿದ್ದು' ಎಂದು ಕೆಲವರಿಗೆ ಶಂಕೆ ಬರಬಹುದು. ವಸ್ತುತಃ ಹಾಗಲ್ಲ. ಆರಂಭದಲ್ಲಿ **'ದರ್ಶಯಾತ್ಮಾನಮ-ವ್ಯಯಮ್' =** ನಿನ್ನ ಸ್ವರೂಪವನ್ನೇ ತೋರಿಸು' ಎಂದು ಅರ್ಜುನನು ಪ್ರಾರ್ಥನೆ ಮಾಡಿದ್ದಾನೆ. ಆದುದರಿಂದ ವಿಶ್ವರೂಪವು ಅವನ ಸ್ವರೂಪವೇ, ಮಾಯೆಯ ರೂಪವಲ್ಲ. ಅದರಿಂದ 'ಸ್ವಕಂ ರೂಪಂ' ಎಂಬುವಲ್ಲಿ, 'ಸ್ವೇಷಾಂ ಕಂ ಯಸ್ಮಾತ್' – ಸ್ವಕೀಯರಿಗೆ ಸುಖವನ್ನು ಕೊಡತಕ್ಕ ರೂಪವು ಯಾವುದೋ, ಅದನ್ನು ತೋರಿ-ಸಿದನೆಂದು ಅಭಿಪ್ರಾಯವನ್ನು ತಿಳಿಯಬೇಕು.

ಅರ್ಜುನನು ಹಿಂದಿನ ವಿಶ್ವರೂಪವನ್ನು ಸ್ಮರಿಸುತ್ತಾ, ಇನ್ನೂ ಭೀತನಾಗಿ ಇರುವಾಗ, ಸೌಮ್ಯರೂಪವನ್ನು ಧರಿಸಿದ ಶ್ರೀಕೃಷ್ಣನು ಅರ್ಜುನನನ್ನು ಸಮಾಧಾನ ಮಾಡಿದನು. ಆಗ ಅರ್ಜುನನು ಹೇಳುತ್ತಾನೆ: "ಎಲೋ ಕೃಷ್ಣನೇ! ನಿನ್ನ ಸೌಮ್ಯ ರೂಪದಿಂದ ನನಗೆ ಚೈತನ್ಯವು ಬಂತು. ನಾನು ಸ್ವಭಾವ ಸ್ಥಿತಿಯಲ್ಲಿದ್ದೇನೆ."

ಆಗ ಶ್ರೀಕೃಷ್ಣ ಪರಮಾತ್ಮನು ಹೇಳುತ್ತಾನೆ: "ಎಲೋ ಅರ್ಜುನಾ! ಯಾವ ರೂಪವನ್ನು ನೀನು ನೋಡಿದಿಯೋ ಅದು ಬಹು ದುರ್ಲಭವಾದದ್ದರಿಂದ ಆ ರೂಪವನ್ನು ನೋಡಲು ದೇವತೆಗಳು ಯಾವಾಗಲೂ ಅಪೇಕ್ಷೆ ಮಾಡುತ್ತಾರೆ. ವೇದಾಧ್ಯಯನಗಳಿಂದಲೇ ನನ್ನ ಈ ರೂಪವನ್ನು ನೋಡಲು ಸಾಧ್ಯವಿಲ್ಲ. ನನ್ನಲ್ಲಿ ಮುಖ್ಯವಾದ ಭಕ್ತಿ ಹಾಗೂ ನನ್ನ ಭಕ್ತರಲ್ಲಿ ಯಥಾಯೋಗ್ಯವಾದ ಭಕ್ತಿ ಇದ್ದರೆ, ಅಂತಹ ಉತ್ತಮಾಧಿಕಾರಿಗಳಿಗೆ ನನ್ನನ್ನು ನೋಡಲು ಸಾಧ್ಯವಾದೀತು. ನನ್ನ ಜ್ಞಾನ, ದರ್ಶನ ಮತ್ತು ನನ್ನಲ್ಲಿ ಪ್ರವೇಶ (ಅಂದರೆ ಸಾಯುಜ್ಯ ಮೋಕ್ಷ) ಇವುಗಳೆಲ್ಲವೂ ಭಕ್ತಿಯಿಂದಲೇ ಸಾಧ್ಯವಾಗುವುದು.

ಇಲ್ಲಿ ವಿಶೇಷಾಂಶ: ಅದ್ವೈತವಾದದಲ್ಲಿ 'ಭಕ್ತಿಯು ಮೂಢರಿಗೆ ಮಾತ್ರ ಬೇಕು. ಜ್ಞಾನಿಗಳಿಗೆ ಭಕ್ತಿ ಅನಾವಶ್ಯಕ. ಪರಮಾತ್ಮನ ದರ್ಶನವಾಗುವುದಕ್ಕಾಗಲೀ ದರ್ಶನವಾದ ಮೇಲೆ ಮೋಕ್ಷವಾಗುವುದಕ್ಕಾಗಲೀ ಭಕ್ತಿಯು ಬೇಡವೇ ಬೇಡ. ಪ್ರಕಾಶವು ಹೇಗೆ ಕತ್ತಲೆಯನ್ನು ಬೇರೆ ಯಾವುದನ್ನೂ ಅವಲಂಬಿಸಿ ತಾನೇ ನಾಶ ಮಾಡುತ್ತದೋ ಹಾಗೆಯೇ ಜ್ಞಾನವು ಅಜ್ಞಾನವನ್ನು ನಾಶ ಮಾಡಬೇಕಾದರೆ

ಪರಮಾತ್ಮನ ಭಕ್ತಿ, ಪ್ರಸಾದಗಳು ಬೇಕಿಲ್ಲ' ಎಂದು ಹೇಳುತ್ತಾರೆ. ಈ ಮತವು ಶ್ರೀಕೃಷ್ಣನಿಗೆ ಸಮ್ಮತವಲ್ಲ. ಯಾಕೆಂದರೆ, ಶ್ರೀಕೃಷ್ಣನು ಈ ಶ್ಲೋಕದಲ್ಲಿ ಜ್ಞಾನಿಗಳಿಗೂ ಭಕ್ತಿಯು ಪ್ರತಿಯೊಂದು ಪುರುಷಾರ್ಥಕ್ಕೆ ಸಾಧನವಾಗಿದೆಯೆಂದು ಹೇಳಿದ್ದಾನೆ.

ಅಲ್ಲದೇ, ಇದರಿಂದ ಜ್ಞಾನವೆಂದರೆ 'ಅಹಂ ಬ್ರಹ್ಮಾಸ್ಮಿ' ಎಂಬ ಜ್ಞಾನವಲ್ಲವೆಂದು ತಿಳಿಯುತ್ತದೆ. ಅಂಥಾ ಜ್ಞಾನವುಳ್ಳವರಿಗೆ ಭಕ್ತಿಯಿರಲು ಅವಕಾಶವಿಲ್ಲ. ಭಕ್ತಿಯೆಂದರೆ ಮಾಹಾತ್ಮ್ಯಜ್ಞಾನಪೂರ್ವಕವಾದ ಸುದೃಢ ಸ್ನೇಹ. ತನಗಿಂತ ದೊಡ್ಡವರಲ್ಲಿ ಅವರ ಮಹಿಮೆಯನ್ನು ತಿಳಿದು ಮಾಡತಕ್ಕ ಪ್ರೇಮಕ್ಕೆ ಭಕ್ತಿಯೆಂದು ಹೇಳುತ್ತಾರೆ. 'ಅಹಂ ಬ್ರಹ್ಮಾಸ್ಮಿ' ಎಂದು ಜ್ಞಾನವುಳ್ಳವರಿಗೆ ಬ್ರಹ್ಮನು ನನಗಿಂತ ಶ್ರೇಷ್ಠವಸ್ತುವೆಂಬ ಜ್ಞಾನವಿಲ್ಲ. ಆದ್ದರಿಂದ ಅಂಥಾ ಜ್ಞಾನಿಗಳಿಗೆ ಭಕ್ತಿಗೆ ಬರಲು ಸಾಧ್ಯವೇ ಇಲ್ಲ. ಜ್ಞಾನಿಗಳು ಭಕ್ತಿಯನ್ನು ಮಾಡಿ ಮೋಕ್ಷವನ್ನು ಹೊಂದುತ್ತಾರೆ ಎಂದು ಹೇಳಿದ್ದರಿಂದ 'ಅಹಂ ಬ್ರಹ್ಮಾಸ್ಮಿ' ಎಂಬ ಜ್ಞಾನವು ವಿಪರೀತ ಜ್ಞಾನವೆಂದು ತಿಳಿಯುತ್ತದೆ.

ಕೊನೆಯಲ್ಲಿ ಶ್ರೀಕೃಷ್ಣನು, "ನನ್ನಲ್ಲಿ ಭಕ್ತಿವೊಂದೇ ಮಾಡಿದರೆ ಸಾಲದು. ನಾನು ಸರ್ವೋತ್ತಮನೆಂಬ ಜ್ಞಾನವುಳ್ಳವನಾಗಿ, ವಿಷಯದಲ್ಲಿ ಆಸಕ್ತಿರಹಿತನಾಗಿ, ಯಾವ ಪ್ರಾಣಿಗಳಲ್ಲೂ ವೈರವನ್ನು ಪರಿತ್ಯಾಗ ಮಾಡಿದವನಾಗಿ, ಯಾರು ಭಕ್ತನಾಗಿ ಇರುತ್ತಾನೋ ಅವನು ನನ್ನನ್ನು ಹೊಂದುತ್ತಾನೆ" ಎಂದು ಉಪದೇಶ ಮಾಡಿದನು. ಇಲ್ಲಿಗೆ ಈ ಅಧ್ಯಾಯವು ಸಮಾಪ್ತವಾಯಿತು. (ಇಪ್ಪತ್ತನೆಯ ದಿನದ ಉಪನ್ಯಾಸ ಮುಗಿಯಿತು)

***

# ಹನ್ನೆರಡನೆಯ ಅಧ್ಯಾಯ

ಅರ್ಜುನನು ಪ್ರಶ್ನೆ ಮಾಡುತ್ತಾನೆ: "ಇಷ್ಟರವರೆಗೆ ಹೇಳಿದ ಮಹಾ ಮಹಾತ್ಮೆಯಿಂದ ಕೂಡಿದ ಅಚಿಂತ್ಯ, ಅದ್ಭುತ, ದಿವ್ಯ ರೂಪದಿಂದ ಕೂಡಿದ ನಿನ್ನನ್ನು ಕರ್ಮಯೋಗದಿಂದ ಶುದ್ಧಾಂತಃಕರಣರಾಗಿ ಆರಾಧನೆ ಮಾಡುವವರು ಕೆಲವರು. ಜಡ ಪ್ರಕೃತಿಗೆ ಅಭಿಮಾನಿಯಾದ ಅಕ್ಷರ ಮತ್ತು ಅವ್ಯಕ್ತಶಬ್ದ-ವಾಚ್ಯಳಾದ ಲಕ್ಷ್ಮಿಯನ್ನು ಉಪಾಸನ ಮಾಡುವವರು ಇನ್ನೂ ಕೆಲವರು. – ಈ ಇಬ್ಬರು ಉಪಾಸಕರ ಮಧ್ಯದಲ್ಲಿ ಯಾರು ಶ್ರೇಷ್ಠರು?"

ವೇದದಲ್ಲಿ ಲಕ್ಷ್ಮಿಯ ಉಪಾಸನವನ್ನು ಮಾಡಿದವರಿಗೆ ಮೋಕ್ಷವಾಗುತ್ತದೆಂದು ಹೇಳಿದ್ದಾರೆ. **"ಶ್ರಿಯಂ ವಸಾನಾ ಅಮೃತತ್ವ-ಮಾಯನ್"** ಶ್ರಿಯಂ = ಲಕ್ಷ್ಮೀದೇವಿಯನ್ನು, ವಸಾನಾಃ = ಉಪಾಸನೆ ಮಾಡ-ತಕ್ಕವರು ಅಮೃತತ್ವಂ = ಮೋಕ್ಷವನ್ನು ಆಯನ್ = ಹೊಂದಿದರು ಎಂದು ವೇದದ ಅರ್ಥ. ಇತರ ದೇವತೆಗಳನ್ನು ಉಪಾಸನೆ ಮಾಡತಕ್ಕವರ ಫಲವು ಅನಿತ್ಯವಾದದ್ದು ಎಂದು ಹಿಂದೆ ನೀನು ಹೇಳಿದ್ದಿ. ಆದರೆ ಲಕ್ಷ್ಮೀದೇವಿಯು ನಿತ್ಯಮುಕ್ತಳಾಗಿ ನಿನ್ನ ಭಾರ್ಯಳಾಗಿ ಇದ್ದುದರಿಂದ ಇತರ ದೇವತೆಗಳಿಗಿಂತಲೂ ಅವಳಲ್ಲಿ ಬಹಳ ಮಹಿಮೆ ಇದೆ. ಆದುದರಿಂದ ಅವಳ ಉಪಾಸನೆಯು ಮೋಕ್ಷಕ್ಕೆ ಕಾರಣವಾಗಬಹುದು.

ಲೋಕದಲ್ಲೂ ಮನೆಗೆ ಬರಲು ಹೇಳುವ ಅಧಿಕಾರ ಗಂಡನಿಗೆ ಇದ್ದಂತೆ ಹೆಂಡತಿಗೂ ಇದೆ. ಆದುದರಿಂದ ವಿಷ್ಣುಲೋಕವನ್ನು ಕೊಡಿಸುವ ಶಕ್ತಿಯು ನಿನಗೆ ಇದ್ದಂತೆ ಲಕ್ಷ್ಮೀಗೂ ಇರುವುದರಿಂದ ಲಕ್ಷ್ಮೀ ಉಪಾಸಕರೂ ವಿಷ್ಣುಲೋಕವನ್ನು ಹೊಂದಬಹುದು. ಹೀಗೆ ಮೋಕ್ಷಸಾಧನಗಳಾದ ಲಕ್ಷ್ಮೀ ಉಪಾಸನ ಮತ್ತು ವಿಷ್ಣು ಉಪಾಸನಗಳ ಮಧ್ಯದಲ್ಲಿ ಅನಾಯಾಸವಾಗಿ ಮಾಡಲು ಶಕ್ಯ ಯಾವುದು? ಎಂಬ ಶಂಕೆಯನ್ನು ಅರ್ಜುನನು ಮಾಡಿದಾಗ ಶ್ರೀಕೃಷ್ಣ ಪರಮಾತ್ಮನು ಸಮಾಧಾನ ಹೇಳುತ್ತಾನೆ:

"ಎಲೋ ಅರ್ಜುನಾ! ನಿತ್ಯದಲ್ಲಿಯೂ ನನ್ನನ್ನೇ ವಿಷಯೀಕರಿಸಿ ಕರ್ಮಯೋಗ ಮುಂತಾದ್ದನ್ನು ಮಾಡುತ್ತ ನನ್ನಲ್ಲಿ ಮನಸ್ಸನ್ನು ಹಾಕಿ ನನ್ನನ್ನು ಯಾರು ಉಪಾಸನೆ ಮಾಡುತ್ತಾರೋ ಅವರೇ ಶ್ರೇಷ್ಠರೆಂದು ನನ್ನ ಸಿದ್ಧಾಂತ.

ನಾಶರಹಿತಳಾದ, ಮಾತಿನಿಂದ ಸಂಪೂರ್ಣ ಹೇಳಲು ಅಶಕ್ಯಳಾದ, ಅಪ್ರತ್ಯಕ್ಷಳಾದ, ಎಲ್ಲಾ ಕಡೆಗೆ ಇರತಕ್ಕ, ಮನಸ್ಸಿನಿಂದ ಚಿಂತಿಸಲು ಅಶಕ್ಯಳಾದ, ಅವ್ಯಾಕೃತಾಕಾಶ ಅಭಿಮಾನಿ ದೇವತೆಯಾದ, ಯಾವಾಗಲೂ ಒಂದೇ ರೀತಿ ಇರತಕ್ಕ ತನ್ನ ಸ್ಥಾನದಿಂದ ಭ್ರಂಶವನ್ನು ಹೊಂದದೆ ಇರುವ ಲಕ್ಷ್ಮೀದೇವಿಯನ್ನು ಯಾರು ಉಪಾಸನ ಮಾಡುತ್ತಾರೋ ಅವರು ಮೋಕ್ಷವನ್ನು ಹೊಂದುತ್ತಾರೆಂಬುದು ನಿಶ್ಚಯ. ಆದರೆ ಅವರು ಇಂದ್ರಿಯಗಳ ನಿಗ್ರಹವನ್ನು ಬಹಳವಾಗಿ ಮಾಡಿಕೊಳ್ಳ-ಬೇಕಾಗುತ್ತದೆ. ಯಾಕೆಂದರೆ ಸುಂದರವಾದ ಸ್ತ್ರೀರೂಪವನ್ನು ಧ್ಯಾನ ಮಾಡುವಾಗ ಮನಸ್ಸಿನಲ್ಲಿ ವಿಕಾರವಾಗುವ ಸಂಭವವಿದೆ. ಅದರಿಂದ ಅನರ್ಥಫಲವಾಗುವದು. ಲಕ್ಷ್ಮಿಯನ್ನು ಮಹಾ ಸಂಪತ್ಪ್ರದಳೆಂದು ಉಪಾಸನ ಮಾಡುವಾಗ ಸಂಪತ್ತುಗಳು ಬರುವವು. ಸಂಪತ್ತಿನ ಮದದಿಂದ ಪ್ರಾಣಿಗಳನ್ನು ಹಿಂಸೆ ಮಾಡುವುದು, ತಿರಸ್ಕಾರ ಮಾಡುವುದು ಇತ್ಯಾದಿ ವಿಕಾರಗಳು ಆಗುವ ಸಂಭವವಿದೆ. ಹಾಗಾಗದೆ ಲಕ್ಷ್ಮೀ-ದೇವಿಯು ಎಷ್ಟು ಸಂಪತ್ತನ್ನು ಕೊಟ್ಟರೂ ಸಮಲೋಷ್ಟಾಷ್ಮಕಾಂಚನನಾಗಿ ಸಮಸ್ತ ಪ್ರಾಣಿಗಳ ಹಿತದಲ್ಲಿಯೇ ಆಸಕ್ತನಾಗಿ ಲಕ್ಷ್ಮಿಯ ಉಪಾಸಕನು ಇರಬೇಕಾಗುತ್ತದೆ. ಆದುದರಿಂದ ಲಕ್ಷ್ಮಿಯ ಉಪಾಸನೆಯು ಬಹಳ ಕಷ್ಟಸಾಧ್ಯವಾಗಿದೆ.

ಲಕ್ಷ್ಮೀ ಉಪಾಸನೆ ಮಾಡತಕ್ಕವರು ಮೊದಲು ನನ್ನನ್ನು ಸ್ವಲ್ಪ ಉಪಾಸನ ಮಾಡಿ, ಲಕ್ಷ್ಮಿಯನ್ನು ಉಪಾಸನ ಮಾಡಬೇಕು. ಆನಂತರ ಮತ್ತೊಮ್ಮೆ ಲಕ್ಷ್ಮೀಯುಕ್ತನಾದ ನನ್ನನ್ನು ಉಪಾಸನ ಮಾಡಬೇಕು. ಈ ಮಾರ್ಗವನ್ನು ಬಿಟ್ಟು ನನ್ನನ್ನೇ ನೇರವಾಗಿ ಉಪಾಸನ ಮಾಡಿದರೆ ಇಷ್ಟು ವಿಲಂಬವು ಬೇಕಾಗುವದಿಲ್ಲ. ಲಕ್ಷ್ಮೀಯುಕ್ತನಾದ ನನ್ನನ್ನು ಉಪಾಸನ ಮಾಡಿದರಾಯಿತು. ಲಕ್ಷ್ಮೀ ಉಪಾಸನ ಮಾಡುವ ಕಾಲದಲ್ಲಿ ನನ್ನ ಉಪಾಸನ ಮಾಡಿದರೆ ಮೋಕ್ಷವೇ ಪ್ರಾಪ್ತವಾಗಿಬಿಡುತ್ತದೆ. ಆದ್ದರಿಂದ ಲಕ್ಷ್ಮಿಯ ಉಪಾಸಕರಿಗೆ ಮೋಕ್ಷವನ್ನು

ಹೊಂದಲಿಕ್ಕೆ ಬಹಳ ಸಮಯವು ಬೇಕಾಗುತ್ತದೆ. ಈ ದೃಷ್ಟಿಯಿಂದ ಲಕ್ಷ್ಮಿಯ ಉಪಾಸನೆಗಿಂತ ನನ್ನ ಉಪಾಸನೆ ಶ್ರೇಷ್ಠವೆಂದು ತಿಳಿದುಕೋ.

ಆದ್ದರಿಂದ ಸಮಸ್ತಕರ್ಮಗಳನ್ನು ನನ್ನಲ್ಲಿ ಸಮರ್ಪಣ ಮಾಡಿ ನಾನೇ ಸರ್ವೋತ್ತಮನೆಂದು ತಿಳಿದು ರಮಾಬ್ರಹ್ಮಾದಿಗಳು ನನ್ನ ಪರಿವಾರವೆಂದು ಭಾವಿಸಿ ನನ್ನನ್ನು ಯಾರು ಉಪಾಸನ ಮಾಡುತ್ತಾರೋ ಅವರನ್ನು ಮೃತ್ಯುವುಳ್ಳ ಸಂಸಾರ ಸಮುದ್ರದಿಂದ ಬೇಗನೆ ಉದ್ಧಾರ ಮಾಡುತ್ತೇನೆ. ನನ್ನಲ್ಲಿಯೇ ಮನಸ್ಸನ್ನಿಡು. ನನ್ನನ್ನೇ ತಿಳಿದುಕೋ. ನನ್ನಲ್ಲಿ ಮನಸ್ಸನ್ನಿಟ್ಟವರು ನನ್ನಲ್ಲಿ ವಾಸಮಾಡುತ್ತಾರೆ.

ನನ್ನಲ್ಲಿ ಸ್ಥಿರವಾಗಿ ಮನಸ್ಸು ಇಡಲು ಸಾಧ್ಯವಾಗದೆ ಹೋದರೆ ಮನಸ್ಸಿಡಲು ಅಭ್ಯಾಸ ಮಾಡು. ಅಭ್ಯಾಸಮಾಡಲು ನೀನು ಅಸಮರ್ಥನಾದರೆ ನನ್ನ ಪ್ರೀತ್ಯರ್ಥವಾಗಿ ಕರ್ಮ ಮಾಡು. ಅದಕ್ಕೂ ನೀನು ಅಶಕ್ತನಾದರೆ ಇತರ ದೇವತೆ-ಗಳನ್ನು ಉದ್ದೇಶೀಕರಿಸಿ ನಿನ್ನ ಮನಸ್ಸಿನ ಅಭೀಷ್ಟಸಿದ್ಧಿಗೋಸ್ಕರ ಕರ್ಮ ಮಾಡು. ಅದನ್ನು ಕೊನೆಗೆ ನನಗೆ ಅರ್ಪಣಮಾಡು. ಅನಂತರದಲ್ಲಿ ಕ್ರಮದಿಂದ ಸರ್ವಕರ್ಮದ ಫಲತ್ಯಾಗ ಮಾಡುತ್ತ ಚಿತ್ತವನ್ನು ಸ್ಥಿರ ಮಾಡಿಕೊಂಡು ನನ್ನಲ್ಲಿ ಮನಸ್ಸಿಡಲು ಆರಂಭಿಸು.

ಜ್ಞಾನವಿಲ್ಲದೆ ಮನಸ್ಸನ್ನು ಪರಮಾತ್ಮನಲ್ಲಿಡುವುದಕ್ಕಿಂತ ಜ್ಞಾನ ಸಂಪಾದಿಸುವುದು ಶ್ರೇಷ್ಠ. ಧ್ಯಾನ ಇಲ್ಲದೆ ಕೇವಲ ಜ್ಞಾನಸಂಪಾದಿಸುವದಕ್ಕಿಂತಲೂ ಜ್ಞಾನಪೂರ್ವಕ ಧ್ಯಾನವು ಶ್ರೇಷ್ಠವಾಗಿದೆ. ಫಲಕಾಮನೆಯಿಂದ ಮಾಡತಕ್ಕ ಧ್ಯಾನಕ್ಕಿಂತಲೂ ಫಲತ್ಯಾಗಪೂರ್ವಕ ಮಾಡತಕ್ಕ ಧ್ಯಾನವು ಶ್ರೇಷ್ಠವಾಗಿದೆ. ಆ ಧ್ಯಾನದಿಂದ ಸಾಕ್ಷಾತ್ಕಾರವುಂಟಾಗುತ್ತದೆ. ಅನಂತರದಲ್ಲಿ ಉತ್ತಮ ಸುಖ ಪ್ರಾಪ್ತಿ-ಯಾಗುತ್ತದೆ.

ಧ್ಯಾನಯೋಗಿಗೆ ಅವಶ್ಯ ಬೇಕಾಗುವ ಕೆಲವು ಗುಣಗಳನ್ನು ಹೇಳುತ್ತೇನೆ, ಕೇಳು. ತನ್ನ ಮೇಲೆ ಅಪವಾದ ಮಾಡತಕ್ಕವರ ಮೇಲೂ ದ್ವೇಷ ಮಾಡಬಾರದು. ಇನ್ನೊಬ್ಬರ ಆಪತ್ತನ್ನು ಮೊದಲೇ ತಿಳಿದು ಆಪತ್ತಿನಿಂದ ಅವರನ್ನು ರಕ್ಷಿಸಬೇಕು. ನಮಗಿಂತ ಅಧಮರಾದ ಸಜ್ಜನರಲ್ಲಿ ಕರುಣ ಬೇಕು. ನನ್ನ ಮನೆ, ನನ್ನ ಹೆಂಡತಿ, ನನ್ನ ವಸ್ತು ಮುಂತಾದ ಅಭಿಮಾನಗಳನ್ನು ಬಿಡಬೇಕು. ನನ್ನ ಕುಲ, ಶೀಲ,

ವಯಸ್ಸು, ವಿದ್ಯಾ, ಧನ, ಭವನ ಇವುಗಳು ಬಹಳ ಶ್ರೇಷ್ಠಗಳಿದ್ದಾವೆ ಎಂಬ ಅಹಂಕಾರ ಇರಬಾರದು. ದುಃಖವು ಎಷ್ಟು ಅನುಪಾದೇಯವೋ ವಿಷಯಸುಖವೂ ಅಷ್ಟೇ ಅನುಪಾದೇಯವಾಗಿದೆಯೆಂದು ತಿಳಿದಿರಬೇಕು. ಸಹನಶಕ್ತಿ ಬೇಕು. ಪರಮಾತ್ಮನ ಇಚ್ಛೆಯಿಂದ ಪ್ರಾಪ್ತವಾದದ್ದರಲ್ಲಿ ಸಂತೋಷದಿಂದಿರಬೇಕು. ಯಾವಾಗಲೂ ಮೋಕ್ಷಕ್ಕೆ ಸಾಧನವಾದ ಅನುಷ್ಠಾನವನ್ನು ಮಾಡುತ್ತಿರಬೇಕು. ಮನೋನಿಗ್ರಹ ಬೇಕು. ದೃಢವಾದ ತತ್ವನಿಶ್ಚಯ ಬೇಕು. ತನ್ನ ಮನಸ್ಸನ್ನು ದೇವರಲ್ಲಿ ಅರ್ಪಿಸಬೇಕು. ತನ್ನಿಂದ ಜನರಿಗೆ ಭಯವಾಗಬಾರದು. ಇನ್ನೊಬ್ಬರಿಂದ ತಾನು ಹೆದರಬಾರದು."

ಇಲ್ಲಿ ವಿಶೇಷಾಂಶ: ಇನ್ನೊಬ್ಬರಿಂದ ತಾನು ಹೆದರಬಾರದು ಎಂಬುದು ಮೇಲ್ನೋಟಕ್ಕೆ ಅಯುಕ್ತವಾಗಿ ಕಂಡುಬರುತ್ತದೆ. ಯಾವುದರ ಭಯವೂ ಇಲ್ಲದಿದ್ದ ಮನುಷ್ಯನು ತಾನು ಯಾವ ಕಾರ್ಯವನ್ನೂ ಮಾಡದೇ ಇರುವ ಸಂಭವವಿದೆ. ಇದರಿಂದ ಅವನ ಉದ್ಧಾರವೇ ಇಲ್ಲದಂತಾಗಬಹುದು. ಆದುದರಿಂದ ಭಯ ಇರಬಾರದೆಂಬುದರ ಅಭಿಪ್ರಾಯವನ್ನು ಹೀಗೆ ಕಲ್ಪಿಸಬೇಕು. ತಾನು ಮಾಡತಕ್ಕ ಪ್ರಯತ್ನಗಳನ್ನು ಎಲ್ಲವನ್ನು ಮಾಡಿ ತನ್ನ ಕೈಮೀರಿಹೋಗಿ ಏನಾದರೂ ಅನರ್ಥ ಸಂಭವಿಸುವಾಗ ಅದರಿಂದ ತಾನು ಹೆದರಬಾರದು ಎಂದು ಅಭಿಪ್ರಾಯ. ಪ್ರಯತ್ನ ಮಾಡದೆ ಸಂಪೂರ್ಣ ಪರಮಾತ್ಮನನ್ನೇ ನಂಬಿ ಸುಮ್ಮನೆ ಇರಬೇಕೆಂದು ಶಾಸ್ತ್ರವು ಹೇಳುವುದಿಲ್ಲ. ಪರಮಾತ್ಮನ ಭಯ, ಮೃತ್ಯು ಭಯ, ನರಕಾದ್ಯನರ್ಥದ ಭಯ, ಮಹಾತ್ಮರುಗಳ ಅಪರಾಧದಿಂದ ಭಯ ಇತ್ಯಾದಿ ಭಯಗಳು ಮನುಷ್ಯನಿಗೆ ಬೇಕು. ಹೀಗಿದ್ದರೆ ಮನುಷ್ಯನು ಸರಿಯಾದ ಮಾರ್ಗದಲ್ಲಿ ಪ್ರಯತ್ನ ಮಾಡಿ ಉದ್ಧೃತನಾಗುತ್ತಾನೆ.

ಅಥವಾ, ಕೆಲವರು ಅನ್ಯಾಯ ಕೃತ್ಯವನ್ನು ಮಾಡುತ್ತಾರೆ. ಅವರಿಗೆ ದೊಡ್ಡವರ ಸನ್ನಿಧಾನಕ್ಕೆ ಬರಲು ಹೆದರಿಕೆಯಾಗುತ್ತದೆ. ಅದಕ್ಕೋಸ್ಕರ ಅಂಥಾ ಪಾಪಕೃತ್ಯಗಳನ್ನು ಮಾಡದೆ ದೊಡ್ಡವರ ಸನ್ನಿಧಾನಕ್ಕೆ ಹೋಗಲು ಭಯರಹಿತ-ನಾಗಿರಬೇಕು. ಅಥವಾ, ಪರಮಾತ್ಮನು ರಕ್ಷಕನಿದ್ದಾನೆಂಬುದನ್ನು ನಿಶ್ಚಯಿಸಿ ತಾನು ಭಯಪಡಬಾರದು. ಪರಮಾತ್ಮನ ಆಜ್ಞಾಪ್ರಕಾರವಾದ ವಿಹಿತ ಕರ್ಮಾಚರಣೆ-

ಯನ್ನು ಮಾಡುತ್ತಿರುವಾಗ ತನ್ನ ಜೀವನವು ಹೇಗೆ ಸಾಗಬೇಕು ಎಂಬ ಭಯವು ಇರಬಾರದು. ಪರಮಾತ್ಮನೇ ರಕ್ಷಕನೆಂದು ತಿಳಿದವರಿಗೆ ಈ ಭಯವು ಇರುವುದಿಲ್ಲ.

ಪರಮಾತ್ಮನು ರಕ್ಷಕನೆಂಬ ಮಾತಿಗೆ ಕೆಲವರು ವಿಪರೀತ ಅರ್ಥಮಾಡುತ್ತಾರೆ. ಅದಕ್ಕೆ ದೃಷ್ಟಾಂತ: ಒಂದಾನೊಂದು ಅರಣ್ಯದ ಏಕಾಂತ ಪ್ರದೇಶದಲ್ಲಿ ಅನೇಕ ಶಿಷ್ಯರಿಂದ ಕೂಡಿ ಗುರುವು ವೇದಾಂತ ವಿಚಾರ ಮಾಡುತ್ತಿ-ರುವಾಗ ಒಂದು ಅಶಿಕ್ಷಿತವಾದ ಆನೆಯು ಆ ಸ್ಥಳಕ್ಕೆ ಬಂತು. ಅದರ ಮೇಲೆ ಒಬ್ಬ ಮಾವಟಿಗನು ಕೂತುಕೊಂಡು "ದಾರಿಯಿಂದ ಏಳಿರಿ, ಈ ಆನೆಯು ಶಿಕ್ಷಿತವಾಗಿಲ್ಲ" ಎಂದು ಜಾಗ್ರುತಿಯನ್ನು ಹೇಳುತ್ತಿದ್ದನು. ಅದನ್ನು ಕೇಳಿ ಗುರುಗಳು, ಅನೇಕ ಶಿಷ್ಯರು ಎದ್ದು ಬೇರೆ ಕಡೆ ಹೋದರು. ಒಬ್ಬ ಶಿಷ್ಯನು ಮಾತ್ರ ಅಲ್ಲಿಯೇ ಕೂತುಕೊಂಡನು. ಅವನು 'ಪರಮಾತ್ಮನು ರಕ್ಷಕನಿದ್ದಾನೆ. ಅವನ ಪ್ರೇರಣೆಯಿಲ್ಲದೆ ಆನೆಯು ನನ್ನನ್ನು ಏನು ಮಾಡಲಾರದು' ಎಂದು ಯೋಚಿಸಿ ಅಲ್ಲಿಯೇ ಕೂತನು. ಆನೆ ಬಂದು ಸೊಂಡಿಲಿನಿಂದ ಹಿಡಿದು ನೆಲಕ್ಕೆ ಅಪ್ಪಳಿಸಿತು. ಆ ಶಿಷ್ಯನಿಗೆ ಮೂರ್ಛೆ ಬಂತು.

ಆನೆ ಹೋದಮೇಲೆ ಗುರುಗಳೂ ಇತರ ಶಿಷ್ಯರುಗಳೂ ಅಲ್ಲಿಗೆ ಬಂದರು. ಅವರು ಇವನನ್ನು ಕಷ್ಟದಿಂದ ಎಬ್ಬಿಸಿ, 'ಯಾಕೆ ನೀನು ಇಲ್ಲಿಯೇ ಕೂತುಕೊಂಡಿ?' ಎಂದು ಕೇಳಿದರು. ಆವಾಗ ಅವನು ಹೇಳುತ್ತಾನೆ: 'ನೀವೆಲ್ಲ ವೇದಾಂತ ವಿಚಾರವನ್ನು ಮಾಡುತ್ತ ಪರಮಾತ್ಮನ ಪ್ರೇರಣೆಯಂತೆ ಎಲ್ಲವೂ ಆಗುತ್ತದೆ. ಅವನೇ ರಕ್ಷಕನು, ನಮಗೇನೂ ಭಯವಿಲ್ಲ ಎಂದು ಹೇಳಿದಿರಿ, ಆದರೆ ನೀವು ಓಡಿ ಹೋದಿರಿ. ನಾನು ಅದನ್ನು ನಂಬಿ ಇಲ್ಲಿಯೇ ಕೂತುಕೊಂಡೆ' ಎಂದನು. ಆವಾಗ ಗುರುಗಳು ಹೇಳುತ್ತಾರೆ: 'ಪರಮಾತ್ಮನು ಹೇಗೆ ಆನೆಯೊಳಗೆ ಪ್ರೇರಕನಾಗಿ-ದ್ದಾನೋ ಹಾಗೆ ಮಾವಟಿಗನಲ್ಲಿಯೂ ಪ್ರೇರಕನಾಗಿದ್ದಾನೆ. ಮಾವಟಿಗನ ಒಳಗಿರತಕ್ಕ ಪರಮಾತ್ಮನು ಅವನಿಗೆ ಪ್ರೇರಣ ಮಾಡಿ ಇಲ್ಲಿಂದ ಎದ್ದು ಹೋಗಿರಿ ಎಂದು ಮಾವಟಿಗನಿಂದ ಹೇಳಿಸಿದ್ದಾನೆ. ಆದುದರಿಂದ ಪರಮಾತ್ಮನ ಪ್ರೇರಣೆ

ಪ್ರಕಾರ ನಾವು ಇಲ್ಲಿಂದ ಹೋಗಿದ್ದೇವೆ. ನೀನು ಅದನ್ನು ತಿಳಿಯದೇ ಪರಮಾತ್ಮನ ಪ್ರೇರಣೆಯ ವಿರುದ್ಧವಾಗಿ ಕೂತಿದ್ದರಿಂದ ನಿನಗೆ ಅನಿಷ್ಟವು ಸಂಭವಿಸಿತು' ಎಂದು.

ಈ ಮೂಢಶಿಷ್ಯನಂತೆ ಎಷ್ಟೋ ಜನರು ವೇದಾಂತ ತತ್ವವನ್ನು ತಿಳಿಯದೇ ಪರಮಾತ್ಮನ ಪ್ರೇರಣೆಯಾಗುತ್ತದೆಂದು ಭಾವಿಸಿ ತಾವು ಏನೂ ಕೆಲಸ ಮಾಡದೇ ಸುಮ್ಮನಿರುತ್ತಾರೆ. ಆದರೆ **'ಶ್ರುತಿಸ್ಮೃತೀ ಹರೇರಾಜ್ಞೇ** = ಶ್ರುತಿ ಸ್ಮೃತಿಗಳು ಪರಮಾತ್ಮನ ಆಜ್ಞೆಗಳು' ಪರಮಾತ್ಮನ ಆಜ್ಞಾರೂಪ ಶ್ರುತಿ, ಸ್ಮೃತಿಗಳಲ್ಲಿ ಹೇಳಿದಂತೆ ನಾವು ನಡೆಯಬೇಕು. ಶಕ್ಯವಿದ್ದಷ್ಟು ಸನ್ಮಾರ್ಗದಲ್ಲಿ ಪ್ರವೃತ್ತ-ರಾಗಬೇಕು. ಏನಾದರೂ ಭಯವು ಬರುವ ಸಂಭವವಿದ್ದಾಗ ದೇವರೇ ರಕ್ಷಕನೆಂದು ನಿಶ್ಚಯಿಸಿ ನಿರ್ಭಯನಾಗಿರಬೇಕು ಎಂಬುದೇ ಈ ಗೀತಾ ವಾಕ್ಯದ ಅರ್ಥ.

"ಇನ್ನು ಮದದಿಂದ ಅಕಾರ್ಯದಲ್ಲಿ ಪ್ರವೃತ್ತಿ ಮಾಡಬಾರದು. ಮನಃಕಂಪ ಇರಬಾರದು. ಪರಮಾತ್ಮನ ಜ್ಞಾನ ಭಕ್ತ್ಯಾದಿಗಳನ್ನು ಹೊರತು ಯಾವ ಫಲವನ್ನೂ ಅಪೇಕ್ಷಿಸಬಾರದು. ಬಾಹ್ಯ ಅಭ್ಯಂತರ ಶುಚಿವುಳ್ಳವನಾಗ-ಬೇಕು. ಬಾಹ್ಯ ಶುದ್ಧಿಯು ಮಣ್ಣು ಮತ್ತು ನೀರುಗಳಿಂದ ಆಗುತ್ತದೆ. ಅಂತಃ-ಶುದ್ಧಿಯು ಸತ್ಕರ್ಮಾನುಷ್ಠಾನದಿಂದಾಗುತ್ತದೆ. ವಿಹಿತ ಕರ್ಮಾನುಷ್ಠಾನದಲ್ಲಿ ಪಟುವಾಗಿರಬೇಕು. ನಿಷಿದ್ಧಕರ್ಮ ಮಾಡುವುದರಲ್ಲಿ ಉದಾಸೀನನಾಗಿರಬೇಕು. ಎಲ್ಲ ಕರ್ಮಗಳನ್ನು ಪರಮಾತ್ಮನಲ್ಲಿ ಸಮರ್ಪಿಸಬೇಕು. ಶತ್ರುಗಳಲ್ಲಿಯೂ ಮಿತ್ರ-ರಲ್ಲಿಯೂ ಅವರವರ ಯೋಗ್ಯತೆಗೆ ಸರಿಯಾಗಿ ಭಾವನೆ ಇಟ್ಟುಕೊಳ್ಳಬೇಕು. ಅಂದರೆ ಭಗವದ್ದ್ವೇಷಿಗಳಲ್ಲಿ ದ್ವೇಷವನ್ನೇ ಮಾಡಬೇಕು. ಭಗವದ್ಭಕ್ತರಲ್ಲಿ ಪ್ರೇಮ ಮಾಡಬೇಕು.

ಮಾನ, ಅವಮಾನ, ಸುಖ, ದುಃಖ ಇವುಗಳಲ್ಲಿ ನಿರ್ವಿಕಾರನಾಗಿರಬೇಕು. ವಿಷಯದಲ್ಲಿ ಆಸಕ್ತಿಯಿರಬಾರದು. ತನ್ನನ್ನು ಹೊಗಳುವವರನ್ನು ಹೊಗಳುವುದು, ತನ್ನನ್ನು ನಿಂದೆ ಮಾಡಿದವರನ್ನು ನಿಂದೆ ಮಾಡುವುದು ಹೀಗೆ ಇರಬಾರದು. ಒಂದೇ ಸ್ಥಳದಲ್ಲಿ ಬಹಳ ದಿವಸ ಕೂತುಕೊಳ್ಳಬಾರದು. ತತ್ವವನ್ನು ಸರಿಯಾಗಿ ವಿಚಾರ ಮಾಡಿ ಸಂಶಯ ಬಾರದಂತೆ ಜ್ಞಾನ ಸಂಪಾದಿಸಬೇಕು.

ಇದಕ್ಕೆ ದೃಷ್ಟಾಂತ: ಒಬ್ಬ ಹಳ್ಳಿಯ ಮನುಷ್ಯನು ಸಂತೆಗೆ ಬಂದು 'ಎಮ್ಮೆ ಕರು ಯಾವುದು?' ಎಂದು ಕೇಳಿ ಅದನ್ನು ಕ್ರಯಕ್ಕೆ ತೆಗೆದುಕೊಂಡನು. ಎಮ್ಮೆ ಕರುವಿನ ಪರಿಚಯವು ಅಷ್ಟರವರೆಗೆ ಅವನಿಗೆ ಇದ್ದಿಲ್ಲ. ಸಂತೆಯಲ್ಲಿ ಕೆಲವರು ಹೇಳಿದ ಮಾತನ್ನು ಅನುಸರಿಸಿ ಇದು ಎಮ್ಮೆ ಕರುವೆಂದು ತಿಳಿದು ಕ್ರಯಕೊಟ್ಟು ಅದನ್ನು ಹಿಡಿದುಕೊಂಡು ಮಾರ್ಗದಲ್ಲಿ ಹೋಗುವಾಗ ಅಲ್ಲಲ್ಲಿ ಬೇರೆ ಬೇರೆ ಸ್ಥಳದಲ್ಲಿ ಮೂರು ನಾಲ್ಕು ಮಂದಿ ಈ ಹಳ್ಳಿಗನ ಬುದ್ಧಿ ಪರೀಕ್ಷೆಗೆ 'ಹಂದಿಯನ್ನು ಯಾಕೆ ಹಿಡಿದುಕೊಂಡು ಹೋಗತ್ತೀ?' ಎಂದು ಕೇಳಿದರು. ಒಬ್ಬರಲ್ಲ, ಇಬ್ಬರಲ್ಲ, ಮೂರು ನಾಲ್ಕು ಮಂದಿ ಕೇಳಿದಾಗ ಅವನಿಗೆ ಸಂಶಯ ಬಂದು ಅದನ್ನು ಕೆಳಗೆ ಬಿಸಾಡಿ ತಾನೊಬ್ಬನೇ ಮನೆಗೆ ಹೋದನು.

ಈ ರೀತಿಯಾದ ಶಾಸ್ತ್ರಾರ್ಥ ಜ್ಞಾನವು ಉಪಯೋಗವಿಲ್ಲ. ದೇವರಿದ್ದಾನೆ ಎಂದು ತಿಳಿದಂಥ ಮನುಷ್ಯನನ್ನು ಅನೇಕ ದುರ್ವಾದಿಗಳು ತಮ್ಮ ಕುತರ್ಕದಿಂದ ದೇವರಿಲ್ಲವೆಂದು ಸಾಧಿಸಿದಾಗ ಸಂಶಯ ಮಾಡುವ ಸಂಶಯವಿದೆ. ಆ ರೀತಿ ಸಂಶಯ ಬರಲಾರದ ಸರಿಯಾಗಿ ವಿಚಾರ ಮಾಡಿದ ನಿಶ್ಚಯಾತ್ಮಕ ಜ್ಞಾನವು ಇರಬೇಕೆಂದು ಶ್ರೀಕೃಷ್ಣನು ಹೇಳುತ್ತಾನೆ.

"ಮತ್ತು ಭಗವದ್ಭಕ್ತನಾಗಿರಬೇಕು. ಈವರೆಗೆ ಹೇಳಿದ ಗುಣಗಳುಳ್ಳವನೇ ಮನುಷ್ಯನೆಂದು ಹೇಳಲ್ಪಡುತ್ತಾನೆ. ಈ ಗುಣಗಳನ್ನು ಸಂಪಾದಿಸದೆ ಇದ್ದವನು ಪಶುವೇ ಸರಿ. ಅಂದರೆ ಅವನ ಮನುಷ್ಯ ಜನ್ಮ ನಿರರ್ಥಕವಾಗಿದೆಯೆಂಬ ಅಭಿಪ್ರಾಯ. ಇಷ್ಟು ಗುಣಗಳುಳ್ಳವರೇ ನನಗೆ ಪ್ರಿಯರು. ಇಷ್ಟು ಗುಣಗಳಿದ್ದು ಶ್ರದ್ಧಾಭಕ್ತಿಗಳಿಂದ ಕೂಡಿದವರಾಗಿ ನಾನೇ ಸರ್ವೋತ್ತಮನೆಂಬ ಜ್ಞಾನದಿಂದ ಸಂಪನ್ನರಾಗಿ ನನ್ನನ್ನು ಉಪಾಸನ ಮಾಡಿದರೆ ನನಗೆ ಅತ್ಯಂತ ಪ್ರಿಯರಾಗುತ್ತಾರೆ." ಇಲ್ಲಿಗೆ ಈ ಅಧ್ಯಾಯವು ಸಮಾಪ್ತಿಯಾಯಿತು (ಇಪ್ಪತ್ತೊಂದನೆಯ ದಿನದ ಉಪನ್ಯಾಸವು ಮುಗಿಯಿತು.)

***

# ಹದಿಮೂರನೆಯ ಅಧ್ಯಾಯ

ಇನ್ನು ಮುಂದಿನ ಆರು ಅಧ್ಯಾಯಗಳಲ್ಲಿ ಇಷ್ಟರವರೆಗೆ ಹೇಳಿದ ಜ್ಞಾನಸಾಧನಗಳು ವಿಸ್ತರಿಸಿ ಹೇಳಲ್ಪಡುತ್ತವೆ.

ಅರ್ಜುನನು ಪ್ರಶ್ನೆ ಮಾಡುತ್ತಾನೆ: "ಎಲೋ ಕೃಷ್ಣನೇ! ಪ್ರಕೃತಿ, ಪುರುಷ, ಕ್ಷೇತ್ರ, ಕ್ಷೇತ್ರಜ್ಞ ಇವುಗಳನ್ನು ತಿಳಿದುಕೊಳ್ಳಬೇಕೆಂಬ ಇಚ್ಛೆ ಇದೆ. ಹಾಗೆಯೇ ಜ್ಞಾನ ಸಾಧನವನ್ನು, ಜ್ಞೇಯವಾದ ನಿನ್ನ ಸ್ವರೂಪವನ್ನು ತಿಳಿಯಲು ಅಪೇಕ್ಷಿಸುತ್ತೇನೆ."

ಶ್ರೀಕೃಷ್ಣ ಪರಮಾತ್ಮನು ಉಪದೇಶ ಮಾಡುತ್ತಾನೆ: "ಪ್ರಕೃತಿ, ಮಹತ್ತತ್ವ, ಅಹಂಕಾರತತ್ವ ಮೊದಲಾದ ಅಚೇತನ ಸಮುದಾಯವು ಅಭಿಮಾನಿ ದೇವತೆಗಳಿಂದ ಕೂಡಿ ಪರಮಾತ್ಮನಿಗೆ ವಾಸಸ್ಥಾನವಾದ್ದರಿಂದ ಕ್ಷೇತ್ರವೆಂದು ಹೇಳಲ್ಪಡುತ್ತದೆ. ಈ ಪ್ರಕೃತ್ಯಾದಿಗಳು ದೇಹವೆಂಬ ವಿಕಾರವನ್ನು ಹೊಂದಿ ಜೀವನಿಗೆ ದೇಹವಿಯೋಗವಾಗುವಾಗ ಹಿಂಸೆಯು ಪ್ರಾಪ್ತವಾಗುವಂತೆ ಮಾಡುವು-ದರಿಂದಲೂ ಮತ್ತು ಪರಮಾತ್ಮನಿಂದ ಪ್ರೇರಿಸಲ್ಪಡುವದರಿಂದಲೂ ಶರೀರವೆಂದು ಹೇಳಲ್ಪಡುತ್ತದೆ. 'ಶ್ರು ಹಿಂಸಾಯಾಮ್' 'ಈರ ಪ್ರೇರಣೇ' ಎಂಬ ಎರಡು ಧಾತುಗಳಿಂದ ಶರೀರ ಶಬ್ದವು ಹುಟ್ಟಿದೆ.

ಶರೀರವೆಂದು, ಕ್ಷೇತ್ರವೆಂದು ಹೇಳಲ್ಪಡುವ ಈ ಪ್ರಕೃತಿ ಮಹತ್ತತ್ವಾದಿ ಪ್ರಪಂಚವನ್ನು ತಿಳಿದವನನ್ನು ಕ್ಷೇತ್ರಜ್ಞನೆಂದು ಜ್ಞಾನಿಗಳು ಹೇಳುತ್ತಾರೆ. ಆ ಕ್ಷೇತ್ರಜ್ಞಾನಿಯು ನಾನೇ ಆಗಿದ್ದೇನೆ ಎಂದು ತಿಳಿ. ನಾನು ಎಲ್ಲ ವಸ್ತುಗಳಲ್ಲಿಯೂ ಅಂತರ್ಯಾಮಿಯಾಗಿ ವಾಸಮಾಡುತ್ತಿದ್ದೇನೆ. ಈ ತರಹವಾದ ಕ್ಷೇತ್ರಕ್ಷೇತ್ರಜ್ಞ ಜ್ಞಾನವು ಸರಿಯಾದ ಜ್ಞಾನವೆಂದು ನನಗೆ ಸಮ್ಮತವಾಗಿದೆ.

ಕ್ಷೇತ್ರವನ್ನು ವಿಸ್ತರಿಸಿ ನಿನಗೆ ಹೇಳುತ್ತೇನೆ. ಅಂದರೆ, ಅದರ ಸ್ವರೂಪ, ಅದರ ಪ್ರಕಾರ, ಅದರ ವಿಕಾರ, ಅದು ಯಾರಿಂದ ಪ್ರೇರಿಸಲ್ಪಡುತ್ತದೆ, ಅದಕ್ಕೆ ಪ್ರೇರಕನಾಗಿರುವವನು ಯಾವ ಧರ್ಮವುಳ್ಳವನಾಗಿದ್ದಾನೆ, ಅವನ ಮಹಿಮೆ ಏನು- ಇವುಗಳನ್ನು ತಿಳಿಸುತ್ತೇನೆ. ವೇದಗಳಲ್ಲಿ ಈ ವಿಷಯವನ್ನು ಋಷಿಗಳು ಚೆನ್ನಾಗಿ ಹೇಳಿದ್ದಾರೆ. ಯುಕ್ತಿಯುಕ್ತ ಬ್ರಹ್ಮಸೂತ್ರಗಳಲ್ಲಿ ಈ ವಿಷಯವು ನಿರ್ಣಯಿಸಲ್ಪಟ್ಟಿದೆ.

ಇನ್ನು ಮೇಲೆ ಅರ್ಜುನನು ಪ್ರಶ್ನೆ ಮಾಡಿದ್ದ ಜ್ಞೇಯವಾದ ಭಗವತ್ಸ್ವರೂಪವನ್ನು ಹೇಳುವ ಉದ್ದೇಶದಿಂದ ಆ ಜ್ಞಾನಕ್ಕೆ ಸಾಧನಗಳನ್ನು ಹೇಳುತ್ತಾನೆ: "ತನ್ನನ್ನು ತಾನು ಶ್ಲಾಘನೆ ಮಾಡಿಕೊಳ್ಳದೆ ಇರಬೇಕು. ತಾನು ಅಲ್ಪನೆಂದು ತಿಳಿದರೂ ತನ್ನಲ್ಲಿ ಮಹತ್ವವನ್ನು ತೋರಿಸಬೇಕೆಂಬ ದಂಭವಿಲ್ಲದೆ ಇರಬೇಕು. ಪ್ರಾಣಿಗಳಿಗೆ ಪೀಡೆಯನ್ನು ಮಾಡಬಾರದು. ಸಹನಶಕ್ತಿಯಿರಬೇಕು. ಆರ್ಜವ ಅಂದರೆ ಮನೋವಾಕ್ಕಾಯಗಳಲ್ಲಿ ಒಂದೇ ರೀತಿ ಇರಬೇಕು. ಮಹಾತ್ಮರುಗಳ, ಜ್ಞಾನೋಪದೇಶ ಮಾಡುವ ಆಚಾರ್ಯರ ಸೇವೆ ಮಾಡಬೇಕು. ಬಾಹ್ಯಾಭ್ಯಂತರ ಶುದ್ಧಿ ಬೇಕು. ಭಯದಿಂದ ಸ್ವಧರ್ಮವನ್ನು ಬಿಡಬಾರದು. ಮನಸ್ಸಿನ ನಿಯಮನ ಬೇಕು. ವಿಷಯಗಳಲ್ಲಿ ವೈರಾಗ್ಯ ಬೇಕು. ತನ್ನಲ್ಲಿ ಇಲ್ಲದ ಗುಣಗಳನ್ನು ತಾನು ಕಲ್ಪಿಸಿಕೊಳ್ಳಬಾರದು. ತನಗೆ ಜನನ, ಮರಣ, ವಾರ್ಧಕ್ಯ, ವ್ಯಾಧಿಗಳಿಂದಾಗುವ ದುಃಖಗಳನ್ನು ದೋಷಗಳನ್ನು ನೋಡುತ್ತಿರಬೇಕು. ಪುತ್ರಮಿತ್ರ ಕಳತ್ರಾದಿಗಳಲ್ಲಿ ವಿಶೇಷವಾದ ಸ್ನೇಹ ಇರಬಾರದು. ಇಷ್ಟಾನಿಷ್ಟಗಳು ಬರುವಾಗ ನಿರ್ವಿಕಾರನಾಗಿರಬೇಕು. ನನ್ನಲ್ಲಿ ಅನನ್ಯ ಭಕ್ತಿಯನ್ನು ಮಾಡಬೇಕು. ಎಂದರೆ ಸರ್ವೋತ್ತಮ ಭಕ್ತಿಯನ್ನು ನನ್ನಲ್ಲಿಯೂ, ರಮಾಬ್ರಹ್ಮಾದಿಗಳಲ್ಲಿ ತಾರತಮ್ಯೋಪೇತ ಭಕ್ತಿಯನ್ನೂ ಮಾಡಬೇಕು. ದುಷ್ಟರೇ ಹೆಚ್ಚಿರುವುದರಿಂದ ಜನಸಮುದಾಯದಲ್ಲಿ ಸಭೆಗಳಲ್ಲಿ ಪಾಲ್ಗೊಳ್ಳಬಾರದು. ಪರಮಾತ್ಮನ ಜ್ಞಾನದಲ್ಲಿ ಆಸಕ್ತಿ ಬೇಕು. ಪರಮಾತ್ಮನ ಸಾಕ್ಷಾತ್ಕಾರಕ್ಕೋಸ್ಕರ ಶಾಸ್ತ್ರ ಪರ್ಯಾಲೋಚನ ಮಾಡಬೇಕು – ಇಷ್ಟು ಸಾಧನಗಳಿದ್ದರೇನೇ ಇನ್ನು ಮೇಲೆ ನಾನು ಉಪದೇಶ ಮಾಡುವ ಬ್ರಹ್ಮಜ್ಞಾನವು ಪ್ರಾಪ್ತವಾಗಬಹುದು. ಇಲ್ಲವಾದರೆ ಬರಲಾರದು.

ಇನ್ನು ಮೇಲೆ ತಿಳಿಯಲಿಕ್ಕೆ ಯೋಗ್ಯವಾದ ಪರಬ್ರಹ್ಮ ಸ್ವರೂಪವನ್ನು ನಿನಗೆ ಹೇಳುತ್ತೇನೆ. ಬ್ರಹ್ಮನನ್ನು ತಿಳಿದರೆ ಮುಕ್ತಿ ಪ್ರಾಪ್ತಿಯಾಗುವುದು. ಆ ಪರಬ್ರಹ್ಮನು ಕಾರ್ಯವಾದ ದೇಹ ಇಲ್ಲದವನು. ಸದಸದ್ರೂಪವಾದ ಅಂದರೆ ಕಾರ್ಯಕಾರಣರೂಪವಾದ ಜಗತ್ತಿನ ದೆಸೆಯಿಂದ ವಿಲಕ್ಷಣನು, ಎಲ್ಲಾ ಅವಯವ–ಗಳಲ್ಲಿಯೂ ಬೇರೆಲ್ಲಾ ಅವಯವಗಳ ಶಕ್ತಿಗಳುಳ್ಳವನು. ಅದು ಹೇಗೆಂದರೆ ಪರಮಾತ್ಮನ ಕೃಷ್ಣಕೇಶವೇ ಶ್ರೀಕೃಷ್ಣನಾಗಿ ಅವತಾರ ಮಾಡಿದ್ದು. ಆ ಕೃಷ್ಣ–

ಆಕಾಶ ಮತ್ತು ಅದರ ಅಭಿಮಾನಿಯಾದ ಗಣಪತಿ, ವಾಯು ಮತ್ತು ಅದರ ಅಭಿಮಾನಿಯಾದ ಮರೀಚಿ ದೇವತೆ, ಅಗ್ನಿ ಮತ್ತು ಅದರ ಅಭಿಮಾನಿ ದೇವತೆಯಾದ ವಹ್ನಿ, ಜಲ ಮತ್ತು ಅದರ ಅಭಿಮಾನಿದೇವತೆಯಾದ ವರುಣ, ಭೂಮಿ ಮತ್ತು ಅದಕ್ಕೆ ಅಭಿಮಾನಿಯಾದ ಧರಾದೇವಿ, ಅಹಂಕಾರ ತತ್ವ ಮತ್ತು ಅದಕ್ಕೆ ಅಭಿಮಾನಿಯಾದ ಶಿವ, ಮಹತ್ತತ್ವ ಮತ್ತು ಅಭಿಮಾನಿಯಾದ ಬ್ರಹ್ಮ, ಬುದ್ಧಿತತ್ವ ಅದರ ಅಭಿಮಾನಿಯಾದ ಉಮಾದೇವಿ, ಪ್ರಕೃತಿ ಮತ್ತು ಅದರ ಅಭಿಮಾನಿಯಾದ ಲಕ್ಷ್ಮೀದೇವಿಯು, ಮನಸ್ಸು ಮತ್ತು ಅದರ ಅಭಿಮಾನಿಗಳಾದ ಸ್ಕಂದ, ಇಂದ್ರ, ಅನಿರುದ್ಧರುಗಳು, ಶ್ರೋತ್ರೇಂದ್ರಿಯ ಮತ್ತು ಅದರ ಅಭಿಮಾನಿ-ಯಾದ ಚಂದ್ರ, ತ್ವಗಿಂದ್ರಿಯ ಮತ್ತು ಅದರ ಅಭಿಮಾನಿಯಾದ ಸೂರ್ಯ, ಮತ್ತು ಅದರ ಅಭಿಮಾನಿಯಾದ ಪ್ರಾಣನೆಂಬ ವಾಯುದೇವರ ಮಗನು, ಚಕ್ಷುಸ್ಸು ಮತ್ತು ಅದರ ಅಭಿಮಾನಿಯಾದ ಸೂರ್ಯ, ನಾಲಿಗೆ ಮತ್ತು ಅದರ ಅಭಿಮಾನಿಯಾದ ವರುಣನ ರೂಪಾಂತರವು, ಘ್ರಾಣ ಮತ್ತು ಅದರ ಅಭಿಮಾನಿ-ಗಳಾದ ಅಶ್ವಿನಿದೇವತೆಗಳು, ವಾಗಿಂದ್ರಿಯ ಮತ್ತು ಅದರ ಅಭಿಮಾನಿಯಾದ ಅಗ್ನಿ, ಹಸ್ತಗಳು ಮತ್ತು ಅವುಗಳ ಅಭಿಮಾನಿಗಳಾದ ಮರುತ್ತುಗಳು, ಪಾದಗಳು ಮತ್ತು ಅಭಿಮಾನಿಗಳಾದ ಶಚಿದೇವಿಯ ಮಕ್ಕಳಾದ ಜಯಂತ ಮತ್ತು ಶಂಭುವೆಂಬ ಇಬ್ಬರು ದೇವತೆಗಳು, ಪಾಯು ಮತ್ತು ಅದರ ಅಭಿಮಾನಿಯಾದ ಯಮ, ಗುಹ್ಯೇಂದ್ರಿಯ ಮತ್ತು ಅದರ ಅಭಿಮಾನಿಯಾದ ಶಿವನು, ಶಬ್ದಸ್ಪರ್ಶರೂಪರಸ-ಗಂಧಗಳು ಮತ್ತು ಅಭಿಮಾನಿಗಳಾದ ಐದು ಶಿವಪುತ್ರರು, ಇಚ್ಛೆ ಮತ್ತು ಅದರ ಅಭಿಮಾನಿಯಾದ ಭಾರತಿದೇವಿ, ದ್ವೇಷ, ದುಃಖ ಮತ್ತು ಅವುಗಳ ಅಭಿಮಾನಿಗಳಾದ ಕಲಿ, ದ್ವಾಪರರೆಂಬ ಅಸುರರುಗಳು, ಸುಖ ಮತ್ತು ಅದರ ಅಭಿಮಾನಿಯಾದ ಮುಖ್ಯಪ್ರಾಣದೇವರು, ಧೈರ್ಯ ಮತ್ತು ಅದರ ಅಭಿಮಾನಿಯಾದ ಸರಸ್ವತಿ, ಚೇತನ ಎಂದರೆ ಮನಸ್ಸಿನ ವ್ಯಾಪ್ತಿ ಮತ್ತು ಅದಕ್ಕೆ ಅಭಿಮಾನಿಯಾದ ಲಕ್ಷ್ಮಿ, ದೇಹ ಮತ್ತು ದೇಹಾಭಿಮಾನಿ ಜೀವರು – ಇವುಗಳೆಲ್ಲವೂ ಕ್ಷೇತ್ರವೆಂದು ಹೇಳಲ್ಪಡುತ್ತವೆ."

ಕೇಶದಲ್ಲಿ ಎಲ್ಲಾ ಅವಯುವಗಳ ಶಕ್ತಿಯಿದೆ. ಲೋಕದಲ್ಲಿಯೂ ಹಾವಿಗೆ ಕಣ್ಣಿನಲ್ಲಿ ಕಿವಿಯ ಶಕ್ತಿಯಿದೆ. ಅದರಂತೆ ಪರಮಾತ್ಮನು ಎಲ್ಲಾ ಅವಯುವಗಳಲ್ಲಿ ಎಲ್ಲಾ ಅವಯುವಗಳ ಶಕ್ತಿಯುಳ್ಳವನಾಗಿದ್ದಾನೆ.

ಆ ಪರಮಾತ್ಮನು ಇಂದ್ರಿಯ ವಿಷಯಗಳಾದ ಸಮಸ್ತಶಬ್ದಾದಿಗಳನ್ನು ತಿಳಿಯುತ್ತಾನೆ. ಪ್ರಾಕೃತ ಇಂದ್ರಿಯಗಳು ಅವನಿಗಿಲ್ಲ. ನಿರ್ಲೇಪನಾಗಿದ್ದಾನೆ. ಸರ್ವಸಾರಭೋಕ್ತನಾಗಿದ್ದಾನೆ. ಸತ್ವರಜಸ್ತಮೋಗುಣಗಳಿಲ್ಲದವನಾಗಿದ್ದಾನೆ. ಸರ್ವ ಕಲ್ಯಾಣಗುಣಗಳನ್ನು ಅನುಭೋಗಿಸತಕ್ಕವನಾಗಿದ್ದಾನೆ. ಪ್ರಾಣಿಗಳ ಒಳಗೂ ಹೊರಗೂ ಇದ್ದಾನೆ. ನಿರ್ವಿಕಾರನಾಗಿದ್ದಾನೆ. ಗತಿ, ಕ್ರಿಯೆ ಉಳ್ಳವನಾಗಿದ್ದಾನೆ. ಸೂಕ್ಷ್ಮನಾದ್ದರಿಂದ ತಿಳಿದುಕೊಳ್ಳಲು ಅಶಕ್ಯನಾಗಿದ್ದಾನೆ. ಸರ್ವತ್ರ ವ್ಯಾಪ್ತನಾ-ದ್ದರಿಂದ ದೂರದಲ್ಲಿಯೂ ಇದ್ದಾನೆ, ಸಮೀಪದಲ್ಲಿಯೂ ದ್ದಾನೆ. ಭಿನ್ನ ಭಿನ್ನ ಪ್ರಾಣಿಗಳಲ್ಲಿರತಕ್ಕ ಪರಮಾತ್ಮನು ಒಬ್ಬನೇ ಆಗಿದ್ದಾನೆ. ಆದರೂ ಬೇರೆಬೇರೆ-ಯಾಗಿದ್ದಾನೆಂದು ಭ್ರಾಂತಿಗೆ ವಿಷಯನಾಗಿದ್ದಾನೆ.

ಪ್ರಾಣಿಗಳನ್ನು ಪೋಷಣ ಮಾಡುವವನೂ, ಜಗತ್ಸೃಷ್ಟಿಸಂಹಾರಕರ್ತನೂ ಆಗಿದ್ದಾನೆ. ಪ್ರಕಾಶರೂಪರಾದ ಸೂರ್ಯಚಂದ್ರಾದಿಗಳಿಗೆ ಪ್ರಕಾಶ ಕೊಡುವವನಾ-ಗಿದ್ದಾನೆ. ಪ್ರಕೃತಿಯನ್ನು ದಾಟಿದವನಾಗಿದ್ದಾನೆ. ತಿಳಿದುಕೊಳ್ಳಲಿಕ್ಕೆ ಯೋಗ್ಯನಾಗಿ-ದ್ದಾನೆ. ಜ್ಞಾನದಿಂದ ಹೊಂದಲಿಕ್ಕೆ ಯೋಗ್ಯನಾಗಿದ್ದಾನೆ. ಎಲ್ಲರ ಹೃದಯದಲ್ಲಿಯೂ ವಿಶೇಷವಾಗಿ ಸನ್ನಿಹಿತನಾಗಿದ್ದಾನೆ.

ಇಷ್ಟರವರೆಗೆ ಕ್ಷೇತ್ರ, ಕ್ಷೇತ್ರಜ್ಞ, ಜ್ಞಾನಸಾಧನ, ಜ್ಞೇಯವಾದ ಪರಬ್ರಹ್ಮ – ಇಷ್ಟು ವಿಷಯಗಳು ಸಂಕ್ಷೇಪದಿಂದ ಹೇಳಲ್ಪಟ್ಟವು. ನನ್ನ ಭಕ್ತನು ಇದನ್ನು ತಿಳಿದು ನನ್ನ ಪ್ರಾಪ್ತಿಗೆ ಅರ್ಹನಾಗುತ್ತಾನೆ.

ಇಲ್ಲಿ ವಿಶೇಷಾಂಶ: ಈ ಅಧ್ಯಾಯವು ತತ್ವಮಸಿ ಶ್ರುತ್ಯರ್ಥವಾದ ಜೀವ-ಬ್ರಹ್ಮೈಕ್ಯವನ್ನು ಹೇಳುತ್ತದೆಂದು ಶಂಕರಾಚಾರ್ಯರ ಗೀತಾಭಾಷ್ಯದಲ್ಲಿ ಕಾಣು-ತ್ತದೆ. ಅವರು 'ಕ್ಷೇತ್ರವೆಂದರೆ ಈ ಶರೀರ. ಕ್ಷೇತ್ರಜ್ಞನೆಂದರೆ ಈ ಶರೀರವನ್ನು ತಿಳಿದಿರತಕ್ಕ ಜೀವ. ಅಂಥಾ ಕ್ಷೇತ್ರಜ್ಞನೇ ನಾನಾಗಿದ್ದೇನೆ ಎಂದು ಶ್ರೀಕೃಷ್ಣನು ಹೇಳಿದ್ದರಿಂದ ಜೀವಬ್ರಹ್ಮೈಕ್ಯವು ಇಲ್ಲಿ ಹೇಳಲ್ಪಟ್ಟಿತು' ಎಂದು ಹೇಳಿದ್ದಾರೆ. ಇದು

ಯುಕ್ತವಲ್ಲ. ಕ್ಷೇತ್ರವೆಂದರೆ ಈ ಶರೀರವೊಂದೇ ಅಲ್ಲ. **'ಮಹಾಭೂತಾನ್ಯಹಂ-ಕಾರಃ'** ಎಂದು ಗೀತೆಯಲ್ಲಿಯೇ ಹೇಳಿದ ಪ್ರಕಾರ ಇಡೀ ಪ್ರಪಂಚವೇ ಕ್ಷೇತ್ರವೆಂದು ತಿಳಿದು ಬರುತ್ತದೆ. ಪರಬ್ರಹ್ಮನ ಅಧೀನವಾದುದರಿಂದಲೂ ಪರಬ್ರಹ್ಮನು ವಾಸ ಮಾಡುವದರಿಂದಲೂ ಈ ಪ್ರಪಂಚವು ಪರಬ್ರಹ್ಮನ ಶರೀರವೆಂದು ಹೇಳಲ್ಪಡಲು ಅರ್ಹವಾಗಿದೆ. ಇಂಥಾ ಪ್ರಪಂಚರೂಪ ಕ್ಷೇತ್ರವನ್ನು ತಿಳಿಯತಕ್ಕವನು ಜೀವನು ಆಗಲು ಶಕ್ಯವಿಲ್ಲ. ಆದುದರಿಂದ ಕ್ಷೇತ್ರಜ್ಞನು ಸರ್ವಜ್ಞನಾದ ಪರಮಾತ್ಮನೇ ಆಗಬೇಕು. ಆದುದರಿಂದ ಶ್ರೀಕೃಷ್ಣನು ನಾನು ಕ್ಷೇತ್ರಜ್ಞನೆಂದು ಹೇಳಿದರೂ ತನ್ನಲ್ಲಿ ಜೀವೈಕ್ಯವು ಸಿದ್ಧವಾಗಲಾರದು. ಶ್ರೀಕೃಷ್ಣನು ಸರ್ವಜ್ಞಮೂರ್ತಿಯಾದ ಪರಮಾ-ತ್ಮನ ಸ್ವರೂಪಿ ಎಂದಷ್ಟೇ ಅರ್ಥವಾಗುವದು.

ಕ್ಷೇತ್ರವೆಂದರೆ ಪ್ರಪಂಚವನ್ನು ಇಟ್ಟುಕೊಳ್ಳದೆ ಈ ದೇಹವನ್ನು ಮಾತ್ರ ಇಟ್ಟುಕೊಂಡರೂ ಕ್ಷೇತ್ರಜ್ಞನೆಂದರೆ ಈ ದೇಹವನ್ನು ತಿಳಿದವನೆಂದೇ ಅರ್ಥ-ವಾಯಿತು. ದೇಹವನ್ನು ತಿಳಿದವನು ಪರಮಾತ್ಮನೇ ಹೊರತು ಜೀವನಲ್ಲ. ಯಾಕೆಂದರೆ ಈ ಶರೀರದಲ್ಲಿ ಏನಾದರೂ ವಿಕಾರವಾದರೆ ಏಕೆ ಹೀಗಾಯಿತು? ಶರೀರದೊಳಗೆ ಏನಾಗಿದೆ? ಏನು ಇದೆ? ಯಾವ ಆಹಾರದಿಂದ ಯಾವ ವಿಕಾರವು ಶರೀರದಲ್ಲಿ ಆಗುತ್ತದೆ? ಇತ್ಯಾದಿ ಅನೇಕ ವಿಷಯಗಳನ್ನು ಈ ಶರೀರದಲ್ಲಿ ಜೀವನು ತಿಳಿದಿಲ್ಲ. ಸರ್ವಜ್ಞನಾದ ಪರಮಾತ್ಮನೇ ಶರೀರದ ಸ್ಥಿತಿಯನ್ನು ಚೆನ್ನಾಗಿ ತಿಳಿದವನು. ಆದುದರಿಂದ ಶ್ರೀಕೃಷ್ಣನು ನಾನೇ ಕ್ಷೇತ್ರಜ್ಞನೆಂದು ಹೇಳಿದರೂ ಜೀವೈಕ್ಯವು ಸಿದ್ಧವಾಗಲಾರದು.

ಶಂಕರಭಾಷ್ಯದಲ್ಲಿ ಕ್ಷೇತ್ರಜ್ಞಶಬ್ದಕ್ಕೆ ಈ ದೇಹವನ್ನು ತಿಳಿದಿರತಕ್ಕ ಜೀವನೆಂದು ಅರ್ಥ ಮಾಡಿದ್ದು ಭಾಗವತಾದಿ ಅನೇಕ ಪುರಾಣಗಳಿಗೆ ವಿರುದ್ಧ-ವಾಗಿದೆ. **'ಕ್ಷೇತ್ರಜ್ಞ ಆತ್ಮಾ ಮನಸೋ ವಿಭೂತಿಃ'** ಎಂಬ ಭಾಗವತ ಶ್ಲೋಕದಲ್ಲಿ ಕ್ಷೇತ್ರಜ್ಞನೆಂಬ ನಾಮವು ಪರಮಾತ್ಮನದ್ದೆಂದೇ ತಿಳಿದು ಬರುತ್ತದೆ. ವಿಷ್ಣುಸಹಸ್ರ-ನಾಮದಲ್ಲಿ ಕ್ಷೇತ್ರಜ್ಞನೆಂಬ ನಾಮವು ವಿಷ್ಣುವಿಗೆ ಹೇಳಲ್ಪಟ್ಟಿದೆ. ಆದುದರಿಂದ ಶ್ರೀಮಧ್ವಾಚಾರ್ಯರು ಹೇಳಿದ ಅರ್ಥವೇ ಯುಕ್ತವಾಗಿದೆ. (ಇಪ್ಪತ್ತೆರಡನೆ ದಿವಸದ ಉಪನ್ಯಾಸವು ಮುಗಿಯಿತು.)

***

ಅರ್ಜುನನು ಪ್ರಕೃತಿ ಪುರುಷರುಗಳನ್ನು ತಿಳಿಸಬೇಕೆಂದು ಹಿಂದೆ ಶ್ರೀಕೃಷ್ಣ ಪರಮಾತ್ಮನನ್ನು ಪ್ರಾರ್ಥನೆ ಮಾಡಿದ್ದಕ್ಕೆ ಶ್ರೀಕೃಷ್ಣ ಪರಮಾತ್ಮನು ಪ್ರಕೃತಿ ಪುರುಷರುಗಳ ಸ್ವರೂಪವನ್ನು ಹೇಳುತ್ತಾನೆ: "ಎಲೋ ಅರ್ಜುನಾ! ಪ್ರಕೃತಿಯೆಂಬ ಶಬ್ದದಿಂದ ಚೇತನ ಪ್ರಕೃತಿಯಾದ ಲಕ್ಷ್ಮಿಯೂ ತ್ರಿಗುಣಾತ್ಮಕವಾದ ಜಡ-ಪ್ರಕೃತಿಯೂ ಹೇಳಲ್ಪಡುತ್ತವೆ. ಪುರುಷಶಬ್ದದಿಂದ ಜೀವನೂ ಮತ್ತು ಪರಮಾತ್ಮನೂ ಹೇಳಲ್ಪಡುತ್ತಾರೆ. ಅವರುಗಳ ಸ್ವರೂಪವು ಅನಾದಿಯಾಗಿರುತ್ತದೆ.

ಸತ್ವಾದಿ ಗುಣಗಳನ್ನು ಇಚ್ಛಾದಿ ವಿಕಾರಗಳನ್ನು ಪ್ರಕೃತಿ ಪರಿಣಾಮಗಳೆಂದು ತಿಳಿದುಕೋ. ಈ ಜಡಪ್ರಕೃತಿಯು ಜೀವನಿಗೆ ದೇಹೇಂದ್ರಿಯಾದಿಗಳ ಸಂಬಂಧವನ್ನು ಉಂಟುಮಾಡಿಕೊಡುತ್ತದೆ. ಪ್ರಕೃತಿ ನಿರ್ಮಿತವಾದ ಶರೀರೇಂದ್ರಿಯಗಳಿಂದ ಜೀವನು ಸುಖದುಃಖವನ್ನು ಅನುಭವಿಸುತ್ತಾನೆ. ಜೀವನಿಗೆ ದೇಹೇಂದ್ರಿಯ ನಿರ್ಮಾಣಕ್ಕೆ ಲಕ್ಷ್ಮೀದೇವಿಯು ಕಾರಣಳಾಗಿದ್ದಾಳೆ. ಜೀವನು ಸುಖದುಃಖವನ್ನು ಅನುಭವಿಸಲಿಕ್ಕೆ ಪರಮಾತ್ಮನು ಕಾರಣನಾಗಿದ್ದಾನೆ. ಲಕ್ಷ್ಮೀದೇವಿಯು ಜೀವನಿಗೆ ಸುಖದುಃಖಾನುಭವ ಉಂಟುಮಾಡಲಿಕ್ಕೆ ಹೆಚ್ಚು ವ್ಯಾಪಾರವನ್ನು ಮಾಡುವುದಿಲ್ಲ. ದೇಹೇಂದ್ರಿಯ ನಿರ್ಮಾಣಕ್ಕೆ ತಾನು ಹೆಚ್ಚು ವ್ಯಾಪಾರ ಮಾಡುತ್ತಾಳೆ."

'ಪುರುಷನು ಪ್ರಕೃತಿ ಸಂಬಂಧದಿಂದ ಸುಖದುಃಖಗಳನ್ನು ಅನುಭವಿಸುತ್ತಾನೆ ಎಂದರೆ ಸುಖದುಃಖಗಳ್ಳೇ ಸುಳ್ಳು ಎಂದೇಕೆ ಆಗಬಾರದು? ಸುಖದುಃಖಗಳೇ ಮಿಥ್ಯಾಯೆಂದು ಅದ್ವೈತ ಸಿದ್ಧಾಂತವಿದೆ' ಎಂದರೆ, ಶ್ರೀಕೃಷ್ಣ ಪರಮಾತ್ಮನು ಹೇಳುತ್ತಾನೆ: "ಸುಖದುಃಖಗಳು ಎಲ್ಲರ ಅನುಭವಸಿದ್ಧ. ಸುಖದುಃಖವು ಮಿಥ್ಯಾಯೆಂದು, ಅದರ ಅನುಭವವು ಭ್ರಾಂತಿಯೆಂದು ನಿಷ್ಕಾರಣ-ವಾಗಿ ಹೇಳುವದು ಯುಕ್ತವಲ್ಲ" ಎಂದು.

ಇಲ್ಲಿ ವಿಶೇಷಾಂಶ: ಅದ್ವೈತಿಗಳು ಜೀವನು ಬ್ರಹ್ಮಸ್ವರೂಪನು ಎಂದು ಒಪ್ಪಿದ್ದರಿಂದ ಬ್ರಹ್ಮನಿಗೆ ದುಃಖವಿಲ್ಲದ ಕಾರಣ ಜೀವನಿಗೂ ದುಃಖವಿಲ್ಲವೆಂದೇ

ದುಃಖದ ಅನುಭವವು ಭ್ರಾಂತಿಯೆಂದೇ ಹೇಳುತ್ತಾರೆ. ಅವರನ್ನು ಕುರಿತು ಕೆಲವು ಪ್ರಶ್ನೆಗಳನ್ನು ಕೇಳಬೇಕು.

೧. ಆ ಸುಖದುಃಖಾದಿಗಳ ಭ್ರಾಂತಿಯು ಜೀವನಿಗೋ ಬ್ರಹ್ಮನಿಗೋ?

೨. ಬ್ರಹ್ಮನಿಗೆ ಭ್ರಾಂತಿಯುಂಟೆಂದು ಹೇಳಿದರೆ ಭ್ರಾಂತಿಗೆ ಕಾರಣವಾದ ಅಜ್ಞಾನವುಂಟೆಂದು ಹೇಳಬೇಕಾಗುತ್ತದೆ. ಬ್ರಹ್ಮನಿಗೆ ಅಜ್ಞಾನ, ಭ್ರಾಂತಿ ಮೊದಲಾದ ದೋಷಗಳಿರುವುದಾದರೆ ದುಃಖವೆಂಬ ದೋಷವು ಏಕೆ ಇರಬಾರದು?

೩. ವೇದದಲ್ಲಿ ಬ್ರಹ್ಮನು ನಿರ್ದುಷ್ಟನೆಂದು ಹೇಳಿದ್ದರಿಂದ ಬ್ರಹ್ಮನಿಗೆ ದುಃಖವು ಇಲ್ಲವೆಂದು ಹೇಳುವುದಾದರೆ ಅದೇ ನ್ಯಾಯದಿಂದ ಭ್ರಾಂತಿ, ಅಜ್ಞಾನ ಮೊದಲಾದ ದೋಷಗಳು ಇಲ್ಲವೆಂದೇ ಹೇಳಬೇಕಾಗುತ್ತದೆ. ಬ್ರಹ್ಮನಿಗೆ ಭ್ರಾಂತಿ, ಅಜ್ಞಾನ ಇಲ್ಲವೆಂಬ ನಿಮಿತ್ತದಿಂದ ಜೀವನಿಗೆ ಭ್ರಾಂತಿಯನ್ನು ಒಪ್ಪುವದಾದರೆ ಆ ಜೀವನು ಬ್ರಹ್ಮನಿಂದ ಬೇರೆಯೋ ಬ್ರಹ್ಮ-ಸ್ವರೂಪನೋ?

ಜೀವನು ಬ್ರಹ್ಮಸ್ವರೂಪನೇ ಆದರೆ ಜೀವನಲ್ಲಿನ ಭ್ರಾಂತಿಯು ಬ್ರಹ್ಮನಲ್ಲಿ ಇದ್ದಂತೆಯಾಯಿತು. ಆದ್ದರಿಂದ ಜೀವನು ಬ್ರಹ್ಮನ ದೆಸೆಯಿಂದ ಬೇರೆಯೆಂದು ಹೇಳುವುದಾದರೆ ಬೇರೆಯಾದ ಜೀವನಲ್ಲಿ ಭ್ರಾಂತಿ, ಅಜ್ಞಾನ ದೋಷಗಳಿರುವಂತೆ ದುಃಖವೆಂಬ ದೋಷವು ಸತ್ಯವಾಗಿರಬಹುದು. ದುಃಖವನ್ನು ಮಿಥ್ಯೆಯೆಂದು ಹೇಳುವ ಕಾರಣವಿಲ್ಲ.

'ಜೀವಬ್ರಹ್ಮರುಗಳಿಗೆ ಸ್ವಾಭಾವಿಕ ಐಕ್ಯವಿದ್ದರೂ ಔಪಾಧಿಕ ಭೇದವಿದೆ. ಒಂದೇ ಒಂದು ಆಕಾಶದಲ್ಲಿ ಘಟಾಕಾಶ, ಗ್ರಹಾಕಾಶಗಳೆಂಬ ಔಪಾಧಿಕ ಭೇದಗಳಿರುವಂತೆ ಒಂದೇ ಬ್ರಹ್ಮನಲ್ಲಿ ಅನೇಕ ಜೀವಭೇದವು ಔಪಾಧಿಕವಾಗಿದೆ. ಆ ಔಪಾಧಿಕ ಭೇದದಿಂದಾಗಿ ಜೀವನು ದುಃಖದ ಭ್ರಾಂತಿವುಳ್ಳವನು, ಬ್ರಹ್ಮನು ಭ್ರಾಂತಿಯಿಲ್ಲದವನು' ಎಂದು ಹೇಳಬಹುದು ಎಂದು ಶಂಕಿಸಿದರೆ ಅದಕ್ಕೆ ಹೀಗೆ ಸಮಾಧಾನ:

ಆ ಉಪಾಧಿಯು ಸತ್ಯವೋ ಮಿಥ್ಯವೋ? ಉಪಾಧಿಯು ಸತ್ಯವಾದರೆ ಬ್ರಹ್ಮ, ಉಪಾಧಿ ಎರಡೂ ವಸ್ತುಗಳು ಸತ್ಯವಾದುದರಿಂದ ಅದ್ವೈತಮತ ಹಾನಿ. ಉಪಾಧಿ ಮಿಥ್ಯಾಯೆಂದರೆ ಉಪಾಧಿಕೃತ ಭೇದವೇ ಇಲ್ಲದಂತಾಯಿತು. ಉಪಾಧಿಕೃತ ಭೇದ ಇಲ್ಲದಿದ್ದ ಮೇಲೆ ಜೀವನು ದುಃಖಭ್ರಾಂತಿವುಳ್ಳವನಾದರೆ, ಬ್ರಹ್ಮನೂ ಸಹ ದುಃಖಭ್ರಾಂತಿವುಳ್ಳವನೆಂದು ಹೇಳಬೇಕಾಗುತ್ತದೆ. ಮತ್ತು ಜೀವನಲ್ಲಿ ದುಃಖವು ಮಿಥ್ಯಾ ಆದರೆ ಜೀವನಲ್ಲಿ ಬಂಧವೇ ಇಲ್ಲವೆಂದಾಯಿತು. ಬಂಧವೇ ಇಲ್ಲವೆಂದ ಮೇಲೆ ಬಂಧದಿಂದ ಬಿಡುಗಡೆಯಾಗುವದಕ್ಕೋಸ್ಕರ ಸಾಧನಾನುಷ್ಠಾನಗಳು ಅನಾವಶ್ಯಕಗಳಾಗುತ್ತವೆ.

'ದುಃಖವೆಂಬುದು ಸುಳ್ಳಾದರೂ ಆ ದುಃಖದ ಭ್ರಾಂತಿಯು ಸತ್ಯವಾಗಿದ್ದು ಜೀವನಿಗೆ ಬಂಧಕರೂಪವಾಗಿದೆ' ಎಂದು ಹೇಳಿದರೆ ಭ್ರಾಂತಿಯು ಒಂದು ಸತ್ಯ, ಬ್ರಹ್ಮನು ಒಂದು ಸತ್ಯ- ಹೀಗೆ ಎರಡೂ ಪದಾರ್ಥವು ಸತ್ಯವಾಗಿ ಅದ್ವೈತಮತಕ್ಕೆ ಹಾನಿಯುಂಟಾಗುತ್ತದೆ. ಮತ್ತು ಭ್ರಾಂತಿಯು ಸತ್ಯವಾದರೆ ಭ್ರಾಂತಿಗೆ ಕಾರಣವಾದ ದುಷ್ಟೇಂದ್ರಿಯಗಳು, ದುಷ್ಟೇಂದ್ರಿಯಗಳಿಗೆ ಆಧಾರವಾದ ದೇಹವು, ದೇಹಕ್ಕೆ ಕಾರಣಗಳಾದ ಪಂಚಭೂತಗಳು - ಇಷ್ಟೂ ಸತ್ಯವೆಂದೇ ಆಗಬೇಕಾಗುತ್ತದೆ. ಪಂಚಭೂತಗಳು ಸತ್ಯಗಳಾದರೆ ಪಂಚಭೂತಾತ್ಮಕ ಈ ಪ್ರಪಂಚವು ಸತ್ಯವಾಗಿ ಅದ್ವೈತಮತಕ್ಕೆ ಹಾನಿಯುಂಟಾಗುತ್ತದೆ - ಇತ್ಯಾದ್ಯನಂತದೋಷಯುಕ್ತವಾದದ್ದು ಅದ್ವೈತಮತವು.

ಇದನ್ನೆಲ್ಲ ಮನಸ್ಸಲ್ಲಿಟ್ಟುಕೊಂಡು ಶ್ರೀಕೃಷ್ಣಪರಮಾತ್ಮನು ಅನುಭವಸಿದ್ಧವಾದ ಈ ದುಃಖವು ಮಿಥ್ಯೆಯೆಂದು ಹೇಳಬಾರದೆಂದು ಹೇಳಿದ್ದಾನೆ.

"ಈ ಜೀವನಿಗೆ ಸಾಧು, ಅಸಾಧು ಯೋನಿಗಳಲ್ಲಿ ಜನ್ಮವು ಬರಲಿಕ್ಕೆ ಸತ್ವರಜಸ್ತಮೋಗುಣಗಳು ಕಾರಣ. ಅವುಗಳು ನಿಮಿತ್ತಮಾತ್ರ. ಸ್ವತಂತ್ರ ಕಾರಣನು ಪರಮಾತ್ಮ. ಒಬ್ಬನೇ ಸ್ವತಂತ್ರ ಕಾರಣನಾಗಿ ಪರಮಾತ್ಮನು ದೇಹದಲ್ಲಿ ಅಂತ-ರ್ಯಾಮಿಯಾಗಿದ್ದು ಎಲ್ಲವನ್ನೂ ಎಲ್ಲರಿಗಿಂತ ಹೆಚ್ಚು ನೋಡುತ್ತಾನೆ. ಪ್ರೇರಕ-ನಾಗಿದ್ದಾನೆ. ಪೋಷಕನಾಗಿದ್ದಾನೆ. ಸಾರಭೋಕ್ತನಾಗಿದ್ದಾನೆ. ಪರಮಾತ್ಮನೆಂದು ಹೇಳಿಸಿಕೊಳ್ಳಲ್ಪಡುತ್ತಾನೆ. ಜೀವನ ದೆಸೆಯಿಂದ ಬೇರೆಯಾಗಿದ್ದಾನೆ.

ಯಾರು ಈ ರೀತಿಯಾಗಿ ಪ್ರಕೃತಿ ಪುರುಷರುಗಳನ್ನೂ ಸತ್ವರಜಸ್ತಮೋಗುಣ-ಗಳನ್ನೂ ತಿಳಿಯುತ್ತಾನೋ ಅವನು ತನ್ನ ಇಚ್ಛೆಗೆ ಬಂದಂತೆ ವರ್ತಿಸಿದರೂ ಕೂಡಾ ಅಂದರೆ ಕಾಮಾಚಾರ, ಕಾಮವಾದ, ಕಾಮಭಕ್ಷ್ಯನಾದರೂ ಕೂಡಾ ಪುನರಾವೃತ್ತಿ-ರಹಿತವಾದ ಮೋಕ್ಷಕ್ಕೆ ಅರ್ಹನಾಗುತ್ತಾನೆ.

ವಿಶೇಷಾಂಶ: ಇಚ್ಛಾನುಸಾರ ಇದ್ದರೂ ಮೋಕ್ಷಕ್ಕೆ ಹೋಗುತ್ತಾನೆಂದು ಹೇಳಿದ್ದು ಆ ಜ್ಞಾನಿಯನ್ನು ಹೊಗಳಲು. ಜ್ಞಾನಿಗಳು ಇಚ್ಛಾನುಸಾರ ಇರುವುದೇ ಇಲ್ಲ. ಒಂದು ವೇಳೆ ಪ್ರಾರಬ್ಧಕರ್ಮಾಧೀನವಾಗಿ ಆ ರೀತಿ ಕೆಲವು ಸಮಯ-ವಿದ್ದರೂ ಅವರಿಗೆ ಮೋಕ್ಷವಿಲ್ಲವೆಂದು ಆಗುವುದಿಲ್ಲವೆಂದು ತಿಳಿಯಬೇಕು.

ಈ ಪರಮಾತ್ಮನನ್ನು ಋಷಿಗಳು ದೇಹದ ಒಳಗೆ ಧ್ಯಾನದ ಬಲದಿಂದಲೂ ಸ್ವಪ್ರತಿಭಾದಿಂದಲೂ ನೋಡುತ್ತಾರೆ. ದೇವತೆಗಳು ಸ್ವಪ್ರತಿಭಾದಿಂದಲೇ ಒಳಗೂ ಹೊರಗೂ ನೋಡುತ್ತಾರೆ. ಚಕ್ರವರ್ತಿಗಳಾದ ಕ್ಷತ್ರಿಯರು ಅಶ್ವಮೇಧಾದಿ ಯಜ್ಞ-ವನ್ನು ಮಾಡುತ್ತ ಆ ಯಜ್ಞದಲ್ಲಿ ಮಾಡಲ್ಪಡುವ ಪೂಜೆಯನ್ನು ಸ್ವೀಕರಿಸುವದ-ಕ್ಕೋಸ್ಕರ ಬರುವ ಪರಮಾತ್ಮನನ್ನು ನೋಡುತ್ತಾರೆ. ಮನುಷ್ಯರು ಸ್ವಯಂಪ್ರತಿಭಾ ಶಕ್ತಿಯಿಲ್ಲದಿದ್ದವರಾದರೂ ಗುರುಮುಖದಿಂದ ಪರಮಾತ್ಮನ ಕುರಿತಾದ ಶ್ರವಣ ಮನನಗಳನ್ನು ಮಾಡಿ ಅವನನ್ನು ಸಾಕ್ಷಾತ್ಕರಿಸುತ್ತಾರೆ.

ಜಗತ್ತಿನಲ್ಲಿ ಸ್ಥಾವರಜಂಗಮಾತ್ಮಕ ಯಾವುದೇ ಪ್ರಾಣಿಮಾತ್ರವು ಹುಟ್ಟಿದರೂ ಅದು ಪ್ರಕೃತಿ ಮತ್ತು ಪರಮಾತ್ಮಗಳ ಸಂಬಂಧವಿಲ್ಲದೆ ಹುಟ್ಟಲಾರದು. ಪ್ರತಿಯೊಂದು ಪ್ರಾಣಿಗಳಲ್ಲಿರತಕ್ಕ ಪರಮಾತ್ಮನು ಬೇರೆ ಬೇರೆ ಸ್ಥಾನದಲ್ಲಿ ಬೇರೆ ಬೇರೆಯಾಗಿದ್ದಾನೆಂದು ತೋರಿದರೂ ವಾಸ್ತವಿಕವಾಗಿ ಅವನು ಒಬ್ಬನೇ ಎಲ್ಲ ಸ್ಥಳದಲ್ಲಿ ಇರುತ್ತಾನೆ. ಅವನು ಇರತಕ್ಕ ಸ್ಥಳಗಳು ದುಷ್ಟವಾಗಿದ್ದರೂ ತನ್ನಿಮಿತ್ತಕ ದೋಷಸಂಬಂಧವು ಅವನಿಗಾಗುವುದಿಲ್ಲ. ಈ ರೀತಿ ತತ್ವಜ್ಞಾನವುಳ್ಳವನು ಅಧೋಗತಿಯನ್ನು ಹೊಂದುವುದಿಲ್ಲ.

ಆವಾವ ಪ್ರಾಣಿಗಳ ಯೋಗ್ಯತೆಯನ್ನು ಅನುಸರಿಸಿ ಆವಾವ ಪ್ರಾಣಿಗಳಿಂದ ಕರ್ಮವನ್ನು ಪರಮಾತ್ಮನು ಮಾಡತಕ್ಕವನೆಂದೂ ಪರಮಾತ್ಮನಿಗೆ ಇನ್ನೊಬ್ಬರು ಕರ್ತರು ಇಲ್ಲವೆಂದು ತಿಳಿದ ಮೇಲೆ ಜ್ಞಾನಿಯೆಂದು ಹೇಳಲ್ಪಡುತ್ತಾನೆ. ಎಲ್ಲ

ಪ್ರಾಣಿಗಳು ಆ ಪರಮಾತ್ಮನನ್ನು ಆಶ್ರಯಿಸಿಕೊಂಡಿದ್ದಾವೆ, ಎಲ್ಲ ವಸ್ತುಗಳು ಅವನಿಂದಲೇ ಸೃಷ್ಟಿ ಆಗುತ್ತವೆ ಎಂದು ತಿಳಿದವನು ಬ್ರಹ್ಮಪ್ರಾಪ್ತಿಗೆ ಅರ್ಹ-ನಾಗುತ್ತಾನೆ.

ವೇದಗಳಲ್ಲಿ **"ಸರ್ವಂ ಖಲ್ವಿದಂ ಬ್ರಹ್ಮ"** ಎಂದು ಸರ್ವವೂ ಬ್ರಹ್ಮಸ್ವರೂಪವು ಎಂದು ಹೇಳಿದ್ದಂತೆ ತೋರಿದರೂ ಎಲ್ಲವೂ ಬ್ರಹ್ಮನೆಂದು ತಿಳಿಯಬಾರದು. ಎಲ್ಲವೂ ಬ್ರಹ್ಮಸ್ವರೂಪವೆಂಬ ವೇದವಾಕ್ಯಕ್ಕೆ ಎಲ್ಲ ಮತ್ಸ್ಯಾದಿರೂಪಗಳೂ ಬ್ರಹ್ಮಸ್ವರೂಪ ಎಂದರ್ಥ. ಶರೀರದಲ್ಲಿರುವ ಜೀವನು ಸಹ ಪರಮಾತ್ಮನ ಸ್ವರೂಪ ಎಂದಲ್ಲ. ಯಾಕೆಂದರೆ ಜೀವನು ಪ್ರಾಕೃತ ದೇಹವುಳ್ಳವನು. ಸತ್ವರಜಸ್ತಮೋಗುಣಬದ್ಧನು. ದೇಹನಾಶವುಳ್ಳವನು. ದೇಹ-ದೋಷಗಳಿಂದ ಲೇಪವುಳ್ಳವನು. ಸ್ವತಂತ್ರ ಕರ್ತನಲ್ಲ. ಪರಮಾತ್ಮನು ಇದಕ್ಕೆಲ್ಲ ವಿರುದ್ಧನಾಗಿದ್ದಾನೆ. ಆದುದರಿಂದ ಚೇತನ ನಾದ ಜೀವನಿಗೂ ಬ್ರಹ್ಮೈಕ್ಯವಿಲ್ಲವೆಂದ ಮೇಲೆ ಅಚೇತನವಾದ ಜಡವಸ್ತುವಿಗೆ ಬ್ರಹ್ಮೈಕ್ಯವು ಕೂಡುವುದು ಅಶಕ್ಯವಾಗಿದೆ.

ಆಕಾಶವು ಸರ್ವತ್ರ ವ್ಯಾಪ್ತವಾಗಿದ್ದರೂ ಯಾವ ವಸ್ತುಗಳಿಂದಲೂ ಅದಕ್ಕೆ ಲೇಪವಿಲ್ಲ. ಹಾಗೆ ಪರಮಾತ್ಮನು ಸರ್ವತ್ರ ಇದ್ದರೂ ಅಲಿಪ್ತನೇ ಆಗಿದ್ದಾನೆ. ಒಬ್ಬನೇ ಸೂರ್ಯನು ಎಲ್ಲ ಜಗತ್ತಿಗೆ ಹೇಗೆ ಪ್ರಕಾಶಕನೋ ಹಾಗೆ ಕ್ಷೇತ್ರಜ್ಞನಾದ ಪರಮಾತ್ಮನು ಎಲ್ಲ ದೇಹದಲ್ಲಿರತಕ್ಕ ಎಲ್ಲ ಜೀವರಿಗೆ ಜ್ಞಾನವನ್ನು ಕೊಡುವವನಾಗಿದ್ದಾನೆ.

ಈ ರೀತಿಯಾಗಿ ಜಡ ಮತ್ತು ಜೀವರಿಂದ ಕ್ಷೇತ್ರಜ್ಞನಾದ ಪರಮಾತ್ಮನಿಗೆ ಇರುವ ಭೇದವನ್ನು ಮತ್ತು ಈ ಜೀವನಿಗೆ ಪಂಚಭೂತಗಳಿಂದ ಹಾಗೂ ಜಡಪ್ರಕೃತಿಯಿಂದ ಬಿಡುಗಡೆ ಒಂದು ಕಾಲದಲ್ಲಿ ಇದೆ ಎಂಬುದನ್ನು ಯಾರು ತಿಳಿಯುತ್ತಾರೋ ಅವರು ಪರಬ್ರಹ್ಮನನ್ನು ಹೊಂದುತ್ತಾರೆ.

ವಿಶೇಷಾಂಶ: ಈ ಅಧ್ಯಾಯದ ಕೊನೆಯಲ್ಲಿ ಶ್ರೀಕೃಷ್ಣನು ಉಪಸಂಹಾರ ಮಾಡುತ್ತ ಕ್ಷೇತ್ರ, ಕ್ಷೇತ್ರಜ್ಞರ ಅಂತರವನ್ನು ಜ್ಞಾನಚಕ್ಷುಸ್ಸಿನಿಂದ ನೋಡಿದವರಿಗೆ ಮೋಕ್ಷವಾಗುತ್ತದೆಂದು ಹೇಳಿದ್ದರಿಂದ ಕ್ಷೇತ್ರ, ಕ್ಷೇತ್ರಜ್ಞರುಗಳ ಅಂತರವು ಸತ್ಯವೆಂದು ಹೇಳಲ್ಪಟ್ಟಿತು. ಆ ಅಂತರವು ಸುಳ್ಳಾಗಿದ್ದರೆ ಜ್ಞಾನಚಕ್ಷುಸ್ಸಿಗೆ

ಗೋಚರವೆಂದೂ ಅದರ ಅಂತರ ಜ್ಞಾನವು ಮೋಕ್ಷಸಾಧನವೆಂದೂ ಹೇಳಿದ್ದು ಕೂಡದೇ ಹೋದೀತು. ಕೊನೆಯಲ್ಲಿ ಈ ರೀತಿ ಭೇದವು ಪಾರಮಾರ್ಥಿಕವೆಂದು ಉಪಸಂಹಾರ ಮಾಡಿದ್ದರಿಂದ ಈ ಅಧ್ಯಾಯಕ್ಕೆ ಭೇದವನ್ನು ಸತ್ಯವೆಂದು ಹೇಳುವುದರಲ್ಲೇ ತಾತ್ಪರ್ಯ. ಆದ್ದರಿಂದ ಈ ಅಧ್ಯಾಯವನ್ನಾರಂಭಿಸಿ ಈ ಗೀತೆಯ ಕೊನೆಯತನಕ ತತ್ವಮಸಿ ಶ್ರುತ್ಯರ್ಥವಾದ ಜೀವಬ್ರಹ್ಮೈಕ್ಯವನ್ನು ಹೇಳುತ್ತದೆಂದು ಅದ್ವೈತಮತದಲ್ಲಿ ನಿರೂಪಣ ಮಾಡಿದ್ದು ಯುಕ್ತವಲ್ಲ.

'ಈ ಅಧ್ಯಾಯದ ಕೊನೆಯಲ್ಲಿ ಕ್ಷೇತ್ರ, ಕ್ಷೇತ್ರಜ್ಞರ ಅಂತರವೆಂಬ ಶಬ್ದದಿಂದ ಜಡಜೀವರುಗಳ ಭೇದವು ಹೇಳಲ್ಪಟ್ಟಿದೆ' ಎಂದು ಕೆಲವರು ಶಂಕಿಸಬಹುದು. ಆದರೆ ಆ ರೀತಿ ಅರ್ಥಮಾಡುವದು ಉಚಿತವಲ್ಲ. ಜಡಜೀವ ಭೇದ ಜ್ಞಾನವು ದೋಷ ಸಾಧನವೆಂದು ಒಪ್ಪಿದರೂ ಜಡ ಜೀವಭೇದವು ಸತ್ಯವೆಂದು ಒಪ್ಪಿದ ಹಾಗಾಯಿತು. ಎಲ್ಲ ಭೇದವು ಮಿಥ್ಯಾವೆಂದು ಹೇಳತಕ್ಕವರು ಜಡಜೀವಭೇದದ ಜ್ಞಾನವನ್ನು ಮೋಕ್ಷಸಾಧನವೆಂದು, ಜಡಜೀವಭೇದವು ಸತ್ಯವೆಂದು ಹೇಳಿದರೆ ಅಪಸಿದ್ಧಾಂತ ದೋಷವು ಪ್ರಾಪ್ತವಾಗುವದು.

**"ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ"** ಎಂದು ತಾನೇ ಕ್ಷೇತ್ರಜ್ಞನೆಂದು ಶ್ರೀಕೃಷ್ಣನು ಹೇಳಿದ್ದರಿಂದ ಕ್ಷೇತ್ರ, ಕ್ಷೇತ್ರಜ್ಞರುಗಳ ಅಂತರವೆಂದರೆ ಜಡ ಪರಮಾತ್ಮಗಳ ಭೇದವೆಂದು ಅರ್ಥ ಮಾಡಬಹುದು. ಹಾಗೆ ಕ್ಷೇತ್ರವೆಂದರೆ ಪಂಚಮಹಾಭೂತಾದಿ ಮಾತ್ರ ವಿವಕ್ಷಿತವಲ್ಲ. ಆಯಾವ ಜಡವಸ್ತುಗಳ ಅಭಿಮಾನಿ ಚೇತನರೂ ಕ್ಷೇತ್ರಶಬ್ದದಿಂದ ಹೇಳಲ್ಪಡುತ್ತಾರೆ. ಕ್ಷೇತ್ರವೆಂದರೆ **'ಕ್ಷಿ ನಿವಾಸ-ಗತ್ಯೋಃ'** ಎಂಬ ಧಾತುವಿನ ವ್ಯಾಖ್ಯಾನ ಪ್ರಕಾರವಾಗಿ ಪರಮಾತ್ಮನ ವಾಸಸ್ಥಾನ-ವೆಂದು ಅರ್ಥವಾಗುತ್ತದೆ. ಪರಮಾತ್ಮನ ವಾಸಸ್ಥಾನವು ಜಡ ಮತ್ತು ಜೀವರೆಂಬ ಎರಡು ವಸ್ತುಗಳೂ ಆಗುತ್ತವೆ.

**'ಯ ಆತ್ಮನಿ ತಿಷ್ಠನ್ ಯ ಆತ್ಮಾನಂ ಅಂತರೋ ಯಮಯತಿ'** ಎಂಬ ಶ್ರುತಿಯು ಜೀವನ ಒಳಗೆ ಪರಮಾತ್ಮನು ವಾಸ ಮಾಡುತ್ತಾನೆಂದು ಹೇಳುತ್ತದೆ. **'ಯಃ ಪೃಥಿವ್ಯಾಂ ತಿಷ್ಠನ್' 'ಯ ಅಗ್ನೌ ತಿಷ್ಠನ್'** ಇತ್ಯಾದಿ ಶ್ರುತಿಗಳು ಜಡವಸ್ತುಗಳ ಒಳಗೆ ಪರಮಾತ್ಮನು ಇದ್ದಾನೆಂದು ಹೇಳುತ್ತವೆ. ಆದ್ದರಿಂದ

ಪರಮಾತ್ಮನ ವಾಸಸ್ಥಾನವು ಜಡ ಮತ್ತು ಜೀವ ಇಬ್ಬರೂ ಅಗಿದ್ದಾರೆ. ಆದ್ದರಿಂದ ಕ್ಷೇತ್ರವೆಂಬ ಶಬ್ದಕ್ಕೆ ಜಡ ಮತ್ತು ಜೀವರೆಂಬ ಎರಡು ಅರ್ಥಗಳನ್ನು ಇಟ್ಟುಕೊಳ್ಳಬೇಕು. ಕ್ಷೇತ್ರ, ಕ್ಷೇತ್ರಜ್ಞರುಗಳ ಅಂತರವೆಂದರೆ ಜಡ-ಪರಮಾತ್ಮ ಭೇದ ಮತ್ತು ಜೀವ-ಪರಮಾತ್ಮ ಭೇದ ಎರಡೂ ಆಯಿತು. ಆದುದರಿಂದ ಪಂಚಭೇದವು ಸತ್ಯವೆಂದೇ ಈ ಅಧ್ಯಾಯದ ಅಭಿಪ್ರಾಯವು. (ಇಪ್ಪತ್ತೂರನೆ ದಿನದ ಉಪನ್ಯಾಸವು ಮುಗಿಯಿತು.)

***

# ಹದಿನಾಲ್ಕನೆಯ ಅಧ್ಯಾಯ

ಶ್ರೀಕೃಷ್ಣ ಪರಮಾತ್ಮನು ಹೇಳುತ್ತಾನೆ: "ಎಲೋ ಅರ್ಜುನಾ! ನಿನಗೆ ಇನ್ನೂ ಶ್ರೇಷ್ಠವಾದ ಜ್ಞಾನವನ್ನು ಉಪದೇಶ ಮಾಡುತ್ತೇನೆ. ಈ ಜ್ಞಾನವನ್ನು ಹೊಂದಿ ಋಷಿಗಳು ಉತ್ತಮ ಸಿದ್ಧಿಯನ್ನು ಹೊಂದಿದ್ದಾರೆ. ಮೋಕ್ಷದಲ್ಲಿ ನನ್ನ ಸಾಮ್ಯವನ್ನು ಹೊಂದಿದ್ದಾರೆ. ನನ್ನ ಸಾಮ್ಯವೆಂದರೆ ಜಗತ್ಸೃಷ್ಟಿಯಾಗುವಾಗ ಅವರು ಹುಟ್ಟುವುದಿಲ್ಲ. ನಾಶಕಾಲದಲ್ಲಿ ನಾಶವನ್ನು ಹೊಂದುವದಿಲ್ಲ. ಇಂಥ ಕೆಲವು ಅಂಶದಲ್ಲಿ ನನ್ನ ಸಾಮ್ಯವು ಅವರಿಗೆ ಉಂಟಾಗುತ್ತದೆ. ನನ್ನ ಸರ್ವಸಾಮ್ಯವು ಯಾರಿಗೂ ಇರಲಾರದು.

ನಾನು ಜಗತ್ಸೃಷ್ಟಿ ಮಾಡುವ ಪ್ರಕಾರ ಇದು: ಮಹಾಲಕ್ಷ್ಮೀದೇವಿಯು ನನ್ನ ಭಾರ್ಯೆಳಾಗಿದ್ದಾಳೆ. ಅವಳಲ್ಲಿ ನಾನು ಗರ್ಭಧಾರಣೆ ಮಾಡುತ್ತೇನೆ. ಇದರಿಂದ ಸಮಸ್ತ ಪ್ರಾಣಿಗಳ ಉತ್ಪತ್ತಿಯು ಆಗುತ್ತದೆ. ಇದು ಸೃಷ್ಟ್ಯಾದಿಯಲ್ಲಿ ಮಾತ್ರವಲ್ಲ. ಸರ್ವಕಾಲದಲ್ಲಿ ಪ್ರತಿಯೊಂದು ಸೃಷ್ಟಿಯೂ ಪ್ರತಿ ತಂದೆ ತಾಯಿಯರಲ್ಲಿ ಅಂತರ್ಯಾಮಿಯಾಗಿರುವ ಲಕ್ಷ್ಮೀನಾರಾಯಣರಿಂದಲೇ ಆಗುತ್ತವೆ. ಎಲ್ಲರಿಗೂ ಲಕ್ಷ್ಮಿಯು ತಾಯಿಯು. ನಾನು ತಂದೆಯು. ಸತ್ವರಜಸ್ತಮೋಗುಣಗಳು ಎಲ್ಲ ಪ್ರಾಣಿಗಳಿಗೆ ಸಂಸಾರಬಂಧಕ್ಕೆ ಕಾರಣಗಳಾಗಿವೆ.

ಲಕ್ಷ್ಮಿಗೆ ಮೂರು ರೂಪ ಇವೆ. ಅವುಗಳಲ್ಲಿ ಶ್ರೀ ರೂಪಿಣಿಯು ಸತ್ವಕ್ಕೆ ಅಭಿಮಾನಿಯಾಗಿದ್ದಾಳೆ. ರಜೋಗುಣಕ್ಕೆ ಭೂರೂಪಳು. ತಮೋಗುಣಕ್ಕೆ ದುರ್ಗಾರೂಪಳು.

ಆ ಮೂರು ಗುಣಗಳ ಮಧ್ಯದಲ್ಲಿ ಸತ್ವಗುಣವು ಸ್ವಚ್ಛವಾದದ್ದು. ಜ್ಞಾನ, ಸುಖ, ದಯ ಮೊದಲಾದ ಗುಣಗಳಿಗೆ ಕಾರಣವಾದದ್ದು. ಸತ್ವಗುಣದಿಂದ ಹುಟ್ಟಿದ ಜ್ಞಾನಾದಿ ಗುಣಗಳಿಂದ 'ನಾನು ಜ್ಞಾನಗುಣವುಳ್ಳವನು, ನಾನು ಸುಖವುಳ್ಳವನು' ಎಂಬ ಅಭಿಮಾನ ಹುಟ್ಟಿ ಆ ಅಭಿಮಾನದಿಂದ ಜೀವನಿಗೆ ಸಂಸಾರಬಂಧವು ಪ್ರಾಪ್ತವಾಗುತ್ತದೆ. ಭರತ ಮಹಾರಾಜನಿಗೆ ಸಾಯುವ ಕಾಲಕ್ಕೆ ಜಿಂಕೆಮರಿಯಲ್ಲಿ ವಿಶೇಷವಾದ ದಯವು ಹುಟ್ಟಿದ್ದರಿಂದ ಅದನ್ನೇ ಸ್ಮರಿಸುತ್ತ ಇನ್ನೊಂದು ಜನ್ಮದಲ್ಲಿ

ಜಿಂಕೆಯೇ ಆಗಿ ಹುಟ್ಟಿದನು. ರಜೋಗುಣವು ವಿಷಯಕಾಮವನ್ನು ಉಂಟು-ಮಾಡುತ್ತಾ ಆ ಕಾಮ ನಿಮಿತ್ತಕವಾದ ಕರ್ಮವನ್ನು ಮಾಡಿಸಿ ಬಂಧಕವಾಗುತ್ತದೆ. ತಮೋಗುಣವು ವಿಪರೀತ ಜ್ಞಾನವನ್ನು ಉಂಟು ಮಾಡುತ್ತ ನಿದ್ರಾ ಆಲಸ್ಯಾದಿಗಳನ್ನು ಉಂಟು ಮಾಡಿ ಬಂಧಕವಾಗುತ್ತದೆ.

ಸತ್ವಗುಣವು ಒಂದು ಸಮಯದಲ್ಲಿ ರಜಸ್ತಮೋಗುಣಗಳನ್ನು ಅಭಿಭವ ಮಾಡಿ ತಾನು ಅಭಿವೃದ್ಧಿಯಾಗುತ್ತಾ ತನ್ನ ಕಾರ್ಯವನ್ನು ಮಾಡುತ್ತದೆ. ಇನ್ನೊಂದು ಸಮಯದಲ್ಲಿ ರಜೋಗುಣವು ಸತ್ವಗುಣವನ್ನೂ, ತಮೋಗುಣವನ್ನು ಅಭಿಭವ ಮಾಡುತ್ತದೆ. ಮತ್ತೊಂದು ಸಮಯದಲ್ಲಿ ತಮೋಗುಣವು ರಜೋಗುಣವನ್ನು ಸತ್ವಗುಣವನ್ನೂ ಅಭಿಭವ ಮಾಡುತ್ತದೆ. ಯಾವಾಗ ಯಾವ ಗುಣಕ್ಕೆ ಅಭಿವೃದ್ಧಿಯು ಇರುತ್ತದೋ ಅವಾಗ ಆ ಗುಣದ ಕಾರ್ಯವು ಆಗುತ್ತದೆ.

ನಮ್ಮ ದೇಹದಲ್ಲಿ ತತ್ವಜ್ಞಾನವು ಉಂಟಾಗುವಾಗ ಸತ್ವಗುಣವು ಅಭಿವೃದ್ಧಿ ಹೊಂದಿದೆಯೆಂದು ತಿಳಕೊಳ್ಳಬೇಕು. ರಜೋ ಗುಣವು ಅಭಿವೃದ್ಧಿ ಹೊಂದಿದಾಗ ಲೋಭ, ನಿರರ್ಥಕ ಕರ್ಮದಲ್ಲಿ ಪ್ರವೃತ್ತಿ, ಕಾಮ್ಯಕರ್ಮಗಳ ಆರಂಭ, ಅಶಾಂತಿ, ಇಷ್ಟರತನಕ ಹೊಂದದೇ ಇದ್ದದ್ದನ್ನು ಹೊಂದಬೇಕೆಂಬ ಇಚ್ಛೆ ಇವುಗಳೆಲ್ಲ ಆಗುತ್ತವೆ. ಯಥಾರ್ಥ ಜ್ಞಾನ ಇಲ್ಲದೆ ಇರುವಿಕೆ, ವ್ಯಗ್ರ ಚಿತ್ತತ್ವ, ಸತ್ಕರ್ಮದಲ್ಲಿ ಪ್ರವೃತ್ತಿ ಇಲ್ಲದಿರುವಿಕೆ ಮತ್ತು ವಿಪರೀತಜ್ಞಾನ ತಮೋಗುಣ ಅಭಿವೃದ್ಧಿಯಾದ ಸಮಯದಲ್ಲಿರುತ್ತದೆ.

ಸತ್ವಗುಣ ವೃದ್ಧಿಯಾಗುವಾಗ ಮರಣವನ್ನು ಹೊಂದಿದರೆ ಇನ್ನೊಂದು ಜನ್ಮದಲ್ಲಿ ಉತ್ತಮ ಜ್ಞಾನಿಗಳ ಕುಲದಲ್ಲಿ ಹುಟ್ಟುತ್ತಾನೆ. ಆದುದರಿಂದ ಸಾಯುವ ಕಾಲಕ್ಕೆ ಸತ್ವಗುಣದ ಅಭಿವೃದ್ಧಿಯು ಇರಬೇಕಾದದ್ದು. ಸಾಯುವ ಕಾಲವು ಯಾವುದೆಂದು ನಮಗೆ ತಿಳಿಯದೆ ಇದ್ದ ಕಾರಣ ನಾವು ಯಾವಾಗಲೂ ಸತ್ವಗುಣವುಳ್ಳವರಾಗುವದಕ್ಕೆ ಪ್ರಯತ್ನ ಮಾಡಬೇಕು. ಸಜ್ಜನ ಸಂಸರ್ಗ, ಸಾತ್ವಿಕ ಆಹಾರಗಳ ಸೇವನೆಯಿಂದ ಸತ್ವ ಗುಣದ ವೃದ್ಧಿಯು ಆಗುತ್ತದೆ. ರಜೋಗುಣದ ವೃದ್ಧಿಯಾದಾಗ ಸತ್ತರೆ ಇನ್ನೊಂದು ಜನ್ಮದಲ್ಲಿ ಕಾಮ್ಯಕರ್ಮ ಮಾಡುವವರ ಕುಲದಲ್ಲಿ ಹುಟ್ಟುತ್ತಾನೆ. ತಮೋಗುಣ ವೃದ್ಧಿಯಾದಾಗ ಮರಣವಾದರೆ ನಾಯಿ,

ಹಂದಿ ಮೊದಲಾದ ನೀಚ ಯೋನಿಯಲ್ಲಿ ಹುಟ್ಟುತ್ತಾನೆ. ಸತ್ವಗುಣವುಳ್ಳವರು ಊರ್ಧ್ವಲೋಕಕ್ಕೆ ಹೋಗುತ್ತಾರೆ. ರಜೋಗುಣವುಳ್ಳವರು ಮನುಷ್ಯಲೋಕದಲ್ಲಿ ಹುಟ್ಟುತ್ತಾರೆ. ತಮೋಗುಣವುಳ್ಳವರು ಕೆಳಗಿನ ಲೋಕಕ್ಕೆ ಹೋಗುತ್ತಾರೆ. ಜ್ಞಾನಾದಿಗಳಿಗೆ ಸತ್ವಾದಿ ಗುಣಗಳು ಪರಿಣಾಮಕಾರಣಗಳು. 'ಪರಮಾತ್ಮನು ಸ್ವತಂತ್ರಕರ್ತನು. ಜೀವನು ಅಸ್ವತಂತ್ರ ಕರ್ತನು' ಎಂದು ತಿಳಿದವನು ಗುಣಾತೀತ-ನಾಗಿ ಮೋಕ್ಷವನ್ನು ಹೊಂದುತ್ತಾನೆ."

ಅರ್ಜುನನು ಗುಣಾತೀತನ ಲಕ್ಷಣವನ್ನು ಪ್ರಶ್ನೆಮಾಡಿದನು. ಶ್ರೀಕೃಷ್ಣ ಪರಮಾತ್ಮನು ಲಕ್ಷಣವನ್ನು ಹೇಳುತ್ತಾನೆ: "ಯಾರು ಇನ್ನೊಬ್ಬರಿಗೆ ಇಷ್ಟವಾಗು-ವುದನ್ನು ದ್ವೇಷಿಸುವದಿಲ್ಲವೋ, ಅನಿಷ್ಟವನ್ನು ಬಯಸುವದಿಲ್ಲವೋ ಅವನೇ ಗುಣಾತೀತನು. ಅವನು ಉದಾಸೀನ ಪುರುಷನಂತೆ ರಾಗದ್ವೇಷರಹಿತನಾಗಿದ್ದು ತನ್ನ ಧರ್ಮದಿಂದ ತಾನು ಭ್ರಷ್ಟನಾಗದೇ ಇರುತ್ತಾನೆ. ಸತ್ವರಜಸ್ತಮೋಗುಣಗಳು ಪರಮಾತ್ಮನ ಅಧೀನವೆಂದು ತಿಳಿಯುತ್ತಾನೆ. ಪರಮಾತ್ಮನ ಪ್ರೀತಿಕರವಾದ ಧರ್ಮವನ್ನು ಅನುಷ್ಠಾನ ಮಾಡಿದಾಗ ಯಾರು ಯಾವ ಅನಿಷ್ಟವನ್ನು ಮಾಡಿದರೂ, ಅಧರ್ಮವನ್ನು ಬಿಟ್ಟರೆ ಯಾರು ಇಷ್ಟವನ್ನು ಮಾಡತಕ್ಕವರಿದ್ದರೂ, ಆ ಇಷ್ಟಾನಿಷ್ಟಗಳು ಸಮವಾಗಿದ್ದರಿಂದ ಅದನ್ನು ಲಕ್ಷಿಸದೇ ತಾನು ತನ್ನ ಧರ್ಮ-ದಲ್ಲಿಯೇ ಇರುತ್ತಾನೆ. ನನ್ನನ್ನು ಶ್ರೇಷ್ಠವಾದ ಭಕ್ತಿಯಿಂದ ಸೇವೆ ಮಾಡುತ್ತಾನೆ. ಇವನೇ ಗುಣಾತೀತನು. ಇವನೇ ಬ್ರಹ್ಮಪ್ರಾಪ್ತಿಗೆ ಅರ್ಹನು.

ನಾನು ಲಕ್ಷ್ಮಿದೇವಿಗೂ, ಮುಕ್ತರಿಗೂ, ಶಾಶ್ವತಧರ್ಮಕ್ಕೂ ಆಶ್ರಯ-ನಾಗಿದ್ದೇನೆ. ಮೋಕ್ಷರೂಪವಾದ ಮುಖ್ಯ ಸುಖಕ್ಕೆ ನಾನೇ ಕಾರಣನಾಗಿದ್ದೇನೆ. ಆದುದರಿಂದ ನನ್ನ ಭಕ್ತಿಯೇ ಮೋಕ್ಷಕ್ಕೆ ಕಾರಣವಾಗುತ್ತದೆ."

ಹದಿನಾಲ್ಕನೇ ಅಧ್ಯಾಯ ಇಲ್ಲಿಗೆ ಮುಗಿಯಿತು.

# ಹದಿನೈದನೆಯ ಅಧ್ಯಾಯ

ಇಲ್ಲಿ ಶ್ರೀಕೃಷ್ಣ ಪರಮಾತ್ಮನು ಮೊದಲು ಜಗದ್ವೃಕ್ಷದ ಸ್ವರೂಪವನ್ನು ನಿರೂಪಣ ಮಾಡುತ್ತಾನೆ. ಈ ಜಗದ್ವೃಕ್ಷಕ್ಕೆ ಅಶ್ವತ್ಥವೆಂದು ಹೆಸರು ಕೊಟ್ಟಿದ್ದಾನೆ. ಅಶ್ವತ್ಥವೆಂದರೆ ಅಶ್ವವತ್ ತಿಷ್ಠತಿ ಇತಿ ಅಶ್ವತ್ಥಃ. ಕುದುರೆಯು ಎಷ್ಟು ವೇಗವಾಗಿ ಓಡುತ್ತಿದೆಯೋ ಅಷ್ಟು ವೇಗದಿಂದ ಈ ಜಗತ್ತು ಬದಲಾವಣೆಯನ್ನು ಹೊಂದುತ್ತದೆ. ಆದ್ದರಿಂದ ಈ ಜಗತ್ತಿಗೆ ಅಶ್ವತ್ಥವೆಂದು ಹೆಸರು:

"ಈ ಜಗತ್ತೆಂಬ ಅಶ್ವತ್ಥವೃಕ್ಷಕ್ಕೆ ಸರ್ವೋತ್ತಮನಾದ ಪರಮಾತ್ಮನು, ಲಕ್ಷ್ಮೀದೇವಿಯು, ಮತ್ತು ಜಡಪ್ರಕೃತಿಯು ಮೂಲಭೂತರಾಗಿದ್ದಾರೆ. ಮಹತ್ತತ್ವ, ಅಹಂಕಾರತತ್ವ, ಪಂಚಮಹಾಭೂತಗಳು ಮತ್ತು ಇವುಗಳ ಅಭಿಮಾನಿ-ದೇವತೆಗಳು, ಈ ಜಗದ್ವೃಕ್ಷದ ಕೊಂಬೆಯ ಸ್ಥಾನದಲ್ಲಿದ್ದಾರೆ. ವೇದಗಳು ವೃಕ್ಷದ ಎಲೆಗಳಂತೆ ಇವೆ."

ವೃಕ್ಷದಲ್ಲಿ ಎಲೆ ಹುಟ್ಟಿದರೆ ಫಲೋತ್ಪತ್ತಿಯಾಗುವದು. ಹಾಗೆಯೇ ವೇದದಿಂದ ಸ್ವರ್ಗ ಮತ್ತು ಮೋಕ್ಷವೆಂಬ ಫಲ ಹುಟ್ಟುವುದರಿಂದ ವೇದವನ್ನು ಎಲೆಯನ್ನಾಗಿ ವರ್ಣಿಸಿದ್ದಾರೆ. ಕೊಂಬೆಗಳು ಮರದ ಬೇರುಗಳನ್ನು ಅವಲಂಬಿಸಿ ಇರುತ್ತವೆ. ಮರದ ಪ್ರಧಾನ ಬೇರಿನಿಂದ ಆ ಮರದ ಕಾಂಡ ವೃದ್ಧಿಯಾಗುತ್ತದೆ. ಅವಾಂತರ ಬೇರುಗಳಿಂದ ಕೊಂಬೆಯು ಬೆಳೆಯುತ್ತದೆ. ಜಗದ್ವೃಕ್ಷಕ್ಕೆ ಪ್ರಧಾನಬೇರು ಜಡಪ್ರಕೃತಿ. ಅವಾಂತರ ಬೇರುಗಳು ಸತ್ವರಜಸ್ತಮೋಗುಣಗಳು. ಆ ಅವಾಂತರ ಬೇರುಗಳ ಸ್ಥಾನದಲ್ಲಿರುವ ಗುಣತ್ರಯದಿಂದ ಕೊಂಬೆಯ ಸ್ಥಾನದಲ್ಲಿರತಕ್ಕ ಮಹತ್ತತ್ವ, ಅಹಂಕಾರತತ್ವ, ಪಂಚಮಹಾಭೂತಗಳು ಉಂಟಾಗುತ್ತವೆ ಎಂದು ಅರ್ಥ.

"ಈ ಜಗದ್ವೃಕ್ಷವು ಹುಟ್ಟುತ್ತದೆ. ನಾಶವಾಗುತ್ತದೆ. ಪುನಃ ಹುಟ್ಟುತ್ತದೆ, ಪುನಃ ನಾಶವಾಗುತ್ತದೆ. ಈ ರೀತಿಯಾಗಿ ಈ ಪ್ರವಾಹಕ್ಕೆ ವಿಚ್ಛೇದವೇ ಇಲ್ಲ. ಈ ರೀತಿಯಾಗಿ ಯಾರು ಜಗದ್ವೃಕ್ಷವನ್ನು ತಿಳಿಯುತ್ತಾನೋ ಅವನು ವೇದಜ್ಞನೆಂದು ಹೇಳಲ್ಪಡುತ್ತಾನೆ.

ಕೊಂಬೆಯು ಸ್ಥಾನದಲ್ಲಿರತಕ್ಕ ಪಂಚಮಹಾಭೂತಾದಿಗಳು, ತಮ್ಮ ಕಾರ್ಯವಾದ ದೇಹಗಳೊಂದಿಗೂ, ಕಾರಣವಾದ ಪ್ರಕೃತಿಯೊಂದಿಗೂ ಸಂಬಂಧವನ್ನು ಹೊಂದಿವೆ. ಈ ಮರದ ಕಿಸಲಯಗಳೆಂದರೆ ಶಬ್ದಸ್ಪರ್ಶಾದಿ ವಿಷಯಗಳು. ಈ ವಿಷಯಗಳು ತಾತ್ಕಾಲಿಕ ಸುಖಕ್ಕೆ ಕಾರಣಗಳು. ಕಿಸಲಯಗಳೂ ತಾತ್ಕಾಲಿಕ ಸುಖಕ್ಕೆ ಕಾರಣಗಳಾಗಿವೆ. ಆದುದರಿಂದ ವಿಷಯಗಳಿಗೆ ಕಿಸಲಯದ ಸಾಮ್ಯವು ಕೂಡುತ್ತದೆ. ಮೂಲನಾದ ಪರಮಾತ್ಮನು ಆ ಕೊಂಬೆಗಳಲ್ಲಿ ವಾಸ ಮಾಡುತ್ತಾನೆ. ಮನುಷ್ಯರಿಗೆ ಅವರವರ ಕರ್ಮಾನುಸಾರವಾಗಿ ಫಲ ಕೊಡುತ್ತಿ-ದ್ದಾನೆ. ಪ್ರಬಲವಾದ ಮೂಲದಿಂದ ಬೆಳೆದಿರುವ ಈ ಅಶ್ವತ್ಥವೃಕ್ಷವನ್ನು ದೃಢವಾದ ಅಸಂಗವೆಂಬ ಶಸ್ತ್ರದಿಂದ ಭೇದಿಸಬೇಕು. ಅಂದರೆ ಜಗತ್ತಿನ ದೆಸೆಯಿಂದ ಈ ಪರಮಾತ್ಮನು ವಿಲಕ್ಷಣನಿದ್ದಾನೆಂದು ತಿಳಿಯಬೇಕು.

ವಿಶೇಷಾಂಶ: ಇಲ್ಲಿ ಒಂದು ದೃಷ್ಟಾಂತವು ಸೂಚಿತವಾಗುತ್ತದೆ. ಒಬ್ಬ ಮನುಷ್ಯನು ಒಂದು ಊರಿಗೆ ಹೊರಟಾಗ ಮಧ್ಯದಲ್ಲಿ ಒಂದು ವೃಕ್ಷವು ದಾರಿಗೆ ಅಡ್ಡವಾಗಿ ಬಿದ್ದಿದ್ದರೆ ಅದನ್ನು ಭೇದಿಸಿ ಆ ಮಾರ್ಗದಲ್ಲಿ ಹೋಗಿ ಊರನ್ನು ಸೇರಬೇಕು. ಅದರಂತೆ ಪರಮಾತ್ಮನ ಸಮೀಪಕ್ಕೆ ಹೋಗಿ ಸೇರತಕ್ಕವನು ಶ್ರವಣ ಮನನ ಮಾರ್ಗದಲ್ಲಿ ಹೋಗುವಾಗ ಜಗದ್ವೃಕ್ಷವು ಎದುರಿಗೆ ಕಾಣಿಸುತ್ತದೆ. ಅದನ್ನು ಭೇದಿಸುವುದೆಂದರೆ ಅದಕ್ಕಿಂತ ವಿಲಕ್ಷಣನು ಪರಮಾತ್ಮನು ಎಂದು ತಿಳಿದುಕೊಳ್ಳುವುದು. ಇದರಿಂದ ಅವನಿಗೆ ಪರಮಾತ್ಮನ ಪ್ರಾಪ್ತಿಯಾಗುತ್ತದೆ. ಪರಮಾತ್ಮನು ಜಗತ್ತಿಗಿಂತ ವಿಲಕ್ಷಣನಾಗಿ ಇದ್ದಾನೆಂದು ತಿಳಿದರೇನೆ ಅವನ ವಿಶೇಷ ವಿಚಾರವನ್ನು ಮಾಡಲು ಶಕ್ಯವಾಗುತ್ತದೆ.

"ಅದರಿಂದ ಪರಮಾತ್ಮನ ಸಾಕ್ಷಾತ್ಕಾರವುಂಟಾಗಿ ಪುನರಾವೃತ್ತಿ-ರಹಿತವಾದ ಪರಮಾತ್ಮನ ಪ್ರಾಪ್ತಿ ಒದಗುತ್ತದೆ. ಆ ಪರಮಾತ್ಮನ ಪ್ರಾಪ್ತಿ ಮಾರ್ಗವು ಸಿಗಬೇಕಾದರೆ ಆ ಪರಮಾತ್ಮನನನ್ನು ಮೊರೆ ಹೊಂದಬೇಕು. ಪರಮಾತ್ಮನನ್ನು ಪ್ರತಿಪಾದಿಸುವ ವೇದಾಂತ ಶಾಸ್ತ್ರದಲ್ಲಿ ಪ್ರವೃತ್ತರಾದವರಿಗೆ ಅಜ್ಞಾನ ನಿವೃತ್ತಿಯಾಗುತ್ತದೆ. ಆಗ ಅಹಂಕಾರ, ವಿಪರೀತ ಜ್ಞಾನದಿಂದ ರಹಿತ-ರಾಗಿ ಯಾವ ವಿಷಯವನ್ನೂ ಅಪೇಕ್ಷಿಸದೆ ಸುಖದುಃಖಾದಿ ದ್ವಂದ್ವಗಳಿಂದ ವಿಕಾರ

ಹೊಂದದವರಾಗಿ ದೇಹಗೇಹಾದಿಗಳಲ್ಲಿ ಆಸಕ್ತಿರಹಿತರಾಗಿ ಶ್ರೇಷ್ಠವಾದ ಪರಮಾ-ತ್ಮನ ಸ್ಥಾನವನ್ನು ಹೊಂದುತ್ತಾರೆ. ಆ ಪರಮಾತ್ಮನ ಸ್ವರೂಪವನ್ನು ಸೂರ್ಯ-ನಾಗಲೀ ಚಂದ್ರನಾಗಲೀ ಅಗ್ನಿಯಾಗಲೀ ತಿಳಿಸಿಕೊಡಲು ಸಮರ್ಥರಲ್ಲ.

'ಈ ಜೀವನಿಗೂ ಪರಮಾತ್ಮನಾದ ನನಗೂ ಏನು ಸಂಬಂಧ?' ಎಂದು ನೀನು ಕೇಳಬಹುದು. ಜೀವನು ನನ್ನದೇ ಅಂಶನಾಗಿದ್ದಾನೆ. ಅಂದರೆ ನನ್ನ ಅನಂತಾನಂತ ಸಾಮರ್ಥ್ಯದಲ್ಲಿ ಒಂದು ಭಾಗಕ್ಕೆ ಸಮಾನವಾದ ಸಾಮರ್ಥ್ಯ ಅವನದು. ಜ್ಞಾನಾನಂದರೂಪದಿಂದ ಅವನು ನನಗೆ ಸದೃಶನು. ನನ್ನ ಅಧೀನನು. ಆ ಜೀವನು ಪ್ರಕೃತಿಯಲ್ಲಿರುವ ಮನಸ್ಸು ಮೊದಲಾದ ಇಂದ್ರಿಯಗಳನ್ನು ಸ್ವೀಕರಿಸಿ ದೇಹವನ್ನು ಧರಿಸುತ್ತಾನೆ. ಆ ದೇಹವನ್ನು ಬಿಡುವಾಗ ಇಂದ್ರಿಯಗಳನ್ನು ಹಿಡಿದುಕೊಂಡೇ ಹೋಗುತ್ತಾನೆ. ಇನ್ನೊಂದು ದೇಹವನ್ನು ಸ್ವೀಕಾರ ಮಾಡುವಾಗ ಆ ಇಂದ್ರಿಯಗಳಿಂದ ಕೂಡಿ ಇರುತ್ತಾನೆ. ಆ ಇಂದ್ರಿಯಗಳಿಂದ ವಿಷಯಗಳ ಮೋಹ ಹೊಂದುತ್ತಾನೆ. ಆ ಇಂದ್ರಿಯಗಳ ಸಹಿತವಾಗಿ ಅನೇಕ ಯೋನಿಯಲ್ಲಿ ಹುಟ್ಟುವ ಈ ಜೀವನ ಉದ್ಧಾರವು ನನ್ನಿಂದಲೇ ಆಗಬೇಕು. ಬ್ರಹ್ಮಾದಿಗಳಿಗೂ ಜೀವನನ್ನು ಉದ್ಧಾರಮಾಡಲು ಸಾಮರ್ಥ್ಯ ಸಾಲದು."

ಇಲ್ಲಿ ವಿಶೇಷಾಂಶ: ಜೀವನು ಪರಮಾತ್ಮನ ಅಂಶವೆಂದರೆ ಮತ್ಸ್ಯ-ಕೂರ್ಮಾದಿಗಳಂತೆ ಅಂಶವೆಂದು ಅರ್ಥವಲ್ಲ. ಆ ರೀತಿ ಅಂಶವಾಗಿದ್ದರೆ ಈ ಜೀವನು ದುಃಖವನ್ನು ಅನುಭವಿಸುವುದೇ ಯುಕ್ತವಾಗುವುದಿಲ್ಲ. ದುಃಖವನ್ನು ಕೊಡತಕ್ಕವನು ಪರಮಾತ್ಮನು, ತಾನೇ ತನಗೆ ದುಃಖವನ್ನು ಉಂಟುಮಾಡಿದಂತಾ-ಯಿತು. ಅಸ್ವತತಂತ್ರರಾದವರು ಕೆಲವೊಮ್ಮೆ ತಮಗೆ ತಾವು ಅಹಿತವನ್ನು ಮಾಡಿಕೊಳ್ಳುವುದು ಉಂಟು. ಇಂದ್ರದೇವರು ತನ್ನ ಸ್ವರೂಪಾಂಶನಾದ ಅರ್ಜುನನೊಂದಿಗೆ ಖಾಂಡವವನದಹನ ಕಾಲದಲ್ಲಿ ಯುದ್ಧಮಾಡಿ ಅಪಜಯವನ್ನು ಅಪೇಕ್ಷಿಸಿದರು. ಪರಮಾತ್ಮನು ಸ್ವತಂತ್ರನಾದ ಮೇಲೆ ತನಗೆ ತಾನು ದುಃಖವನ್ನು ಯಾಕೆ ಉಂಟುಮಾಡುತ್ತಾನೆ?

ಶಂಕರಾಚಾರ್ಯರು ಕೂಡಾ ಅಂಶ ಶಬ್ದಕ್ಕೆ "ಅಂಶ ಇವ ಅಂಶಃ" ಎಂದು ಹೇಳುತ್ತ ಅಂಶದಂತೆ ಇರತಕ್ಕ ಜೀವನೆಂದು ವ್ಯಾಖ್ಯಾನ ಮಾಡಿದ್ದಾರೆ. ಜೀವನು

ಪರಮಾತ್ಮನ ಅಂಶವೇ ಆಗಿದ್ದಾನೆಂಬುದನ್ನು ಖಂಡಿಸಿದ್ದಾರೆ. ಯಾವ ವಸ್ತು ಅಂಶವುಳ್ಳದ್ದೋ ಅದು ಅನಿತ್ಯವಾಗಿ ತೋರುತ್ತದೆ. ವಸ್ತ್ರವು ನೂಲು ಎಂಬ ಅಂಶವುಳ್ಳದ್ದು. ಆ ನೂಲು ಬೇರೆ ಬೇರೆಯಾಗುತ್ತಾ ವಸ್ತ್ರವೇ ನಾಶ ಹೊಂದುತ್ತದೆ. ಅದರಂತೆ ಬ್ರಹ್ಮನು ಜೀವನೆಂಬ ಅಂಶವುಳ್ಳವನಾದರೆ ವಸ್ತ್ರದಂತೆ ಅನಿತ್ಯನಾಗ-ಬೇಕಾಗುತ್ತದೆ. ಆದುದರಿಂದ ಜೀವನು ಪರಮಾತ್ಮನ ಅಂಶನಲ್ಲವೆಂದು ಶಂಕರಾಚಾರ್ಯರು ಬರೆದಿದ್ದಾರೆ.

"ಈ ಜೀವನು ಶರೀರವನ್ನು ಹೊಂದುವಾಗ ಮತ್ತು ಬಿಡುವಾಗ ಪರಮಾತ್ಮನು ಆ ಇಂದ್ರಿಯಗಳನ್ನು ಒಂದು ಶರೀರದಿಂದ ಇನ್ನೊಂದು ಶರೀರಕ್ಕೆ ಕರ್ಷಣ ಮಾಡುತ್ತಾನೆ. ಜೀವನು ಅಸ್ವತಂತ್ರನಾಗಿರುತ್ತಾನೆ. ಇಂದ್ರಿಯವನ್ನು ಸ್ವತಂತ್ರವಾಗಿ ಕರ್ಷಣ ಮಾಡುವ ಶಕ್ತಿ ಅವನಿಗಿಲ್ಲ. ಆ ಇಂದ್ರಿಯಗಳ ಸ್ಥೂಲ-ಭಾಗಗಳು ಮೂಲರೂಪಕ್ಕೆ ಹೋಗಿ ಸೇರಿದರೂ ಸೂಕ್ಷ್ಮಭಾಗಗಳನ್ನು ಹಿಡಿದುಕೊಂಡು ಪರಮಾತ್ಮನು ಇನ್ನೊಂದು ಶರೀರಕ್ಕೆ ಹೋಗುತ್ತಾನೆ. ಗಾಳಿಯು ಹೇಗೆ ಪುಷ್ಪದ ಅಣುಗಳನ್ನು ಹಿಡಿದುಕೊಂಡು ಇನ್ನೊಂದು ಕಡೆ ಹೋಗುತ್ತದೆಯೋ ಹಾಗೆ ಪರಮಾತ್ಮನು ಕೂಡಾ ಅಣುಗಳಾದ ಕೆಲವು ಭಾಗಗಳನ್ನು ಹಿಡಿದುಕೊಂಡು ಹೋಗುತ್ತಾನೆ. ಪರಮಾತ್ಮನು ಈ ಜೀವನ ಇಂದ್ರಿಯಗಳಲ್ಲಿ ವಾಸಮಾಡುತ್ತ ವಿಷಯಗಳಲ್ಲಿ ಸಾರಭಾಗವನ್ನು ಭೋಗಿಸುತ್ತಾನೆ.

ಪರಮಾತ್ಮನು ಶರೀರವನ್ನು ಬಿಟ್ಟು ಹೋಗುವುದನ್ನಾಗಲಿ, ಶರೀರದಲ್ಲಿ ಇರುವುದನ್ನಾಗಲಿ, ಶರೀರದಲ್ಲಿದ್ದು ವಿಷಯವನ್ನು ಭೋಗಿಸುವುದನ್ನಾಗಲಿ ಮೂಢರು ತಿಳಿದುಕೊಳ್ಳುವದಿಲ್ಲ. ಜ್ಞಾನಚಕ್ಷುಸ್ಸುಗಳುಳ್ಳವರು ಅಂಥ ಪರಮಾತ್ಮ-ನನ್ನು ನೋಡುತ್ತಾರೆ. ಪರಮಾತ್ಮನನ್ನು ನೋಡಬೇಕೆಂದು ಪ್ರಯತ್ನ ಮಾಡಿದ-ವರೆಲ್ಲರೂ ಪರಮಾತ್ಮನನ್ನು ನೋಡುವದಿಲ್ಲ. ಎಷ್ಟು ಪ್ರಯತ್ನ ಮಾಡಿದರೂ ಮನೋನಿಗ್ರಹ ಸಾಧಿಸದಿದ್ದರೆ ಪರಮಾತ್ಮನನ್ನು ನೋಡಲು ಶಕ್ಯವಿಲ್ಲ.

ಸೂರ್ಯನಲ್ಲಿ ಏನೊಂದು ಜಗತ್ಪ್ರಕಾಶಕವಾದ ತೇಜಸ್ಸು ಇದೆಯೋ, ಹಾಗೆ ಚಂದ್ರನಲ್ಲಿ ಅಗ್ನಿಯಲ್ಲಿ ಏನು ತೇಜಸ್ಸಿದೆಯೋ ಅವೆಲ್ಲ ನನ್ನ ಅಧೀನವು. ನಾನು ಭೂಮಿಯೊಳಗೆ ಪ್ರವೇಶಮಾಡಿ ನನ್ನ ಸಾಮರ್ಥ್ಯದಿಂದ ಭೂಮಿಯನ್ನು

ಧರಿಸುತ್ತಿದ್ದೇನೆ. ನಾನು ಚಂದ್ರನೊಳಗಿದ್ದು ಅಮೃತರಸವನ್ನು ಸುರಿಸುತ್ತ ಸಮಸ್ತ ಔಷಧಿಗಳನ್ನು ಪೋಷಣ ಮಾಡುತ್ತಿದ್ದೇನೆ. ನಾನು ವೈಶ್ವಾನರ ರೂಪದಿಂದ ಸಮಸ್ತ ಪ್ರಾಣಿಗಳ ದೇಹದಲ್ಲಿರುವವನಾಗಿ ಪ್ರಾಣ ಅಪಾನಗಳೆಂಬ ಮುಖ್ಯಪ್ರಾಣನ ಎರಡು ರೂಪಗಳಿಂದ ಕೂಡಿದವನಾಗಿ ಭಕ್ಷ್ಯ, ಭೋಜ್ಯ, ಲೇಹ್ಯ ಮತ್ತು ಚೋಷ್ಯ ಎಂದು ನಾಲ್ಕು ಪ್ರಕಾರವಾದ ಅನ್ನವನ್ನೂ ಪಚನ ಮಾಡುತ್ತೇನೆ.

ನಾನು ಎಲ್ಲರ ಹೃದಯದಲ್ಲಿಯೂ ವಾಸ ಮಾಡುತ್ತೇನೆ. ನನ್ನಿಂದಲೇ ಎಲ್ಲರಿಗೂ ತಿಳವಳಿಕೆಯೂ, ಸ್ಮರಣೆಯೂ, ವಿಸ್ಮರಣೆಯೂ ಆಗುತ್ತವೆ. ನಾನೇ ಸಮಸ್ತ ವೇದಗಳಿಂದ ಮುಖ್ಯವಾಗಿ ಪ್ರತಿಪಾದಿತನಾಗಿದ್ದೇನೆ. ವೇದಾರ್ಥ-ನಿರ್ಣಾಯಕ ಬ್ರಹ್ಮಸೂತ್ರವನ್ನು ವೇದವ್ಯಾಸರೂಪದಿಂದ ರಚಿಸಿದವನು ನಾನೇ. ವೇದದ ಸಂಪೂರ್ಣ ಅರ್ಥವನ್ನು ತಿಳಿದವನು ನಾನೊಬ್ಬನೇ ಆಗಿದ್ದೇನೆ.

ಈ ಅಸ್ವತಂತ್ರ ಚೇತನದ ಸಮುದಾಯದಲ್ಲಿ ಸೇರಿದ ಪುರುಷರುಗಳು ಇಬ್ಬರು. ಕ್ಷರಪುರುಷರು ಮತ್ತು ಅಕ್ಷರಪುರುಷರು ಎಂದು. ದೇಹನಾಶವುಳ್ಳ ಚೇತನರೆಲ್ಲ ಕ್ಷರಪುರುಷರೆಂದು ಹೇಳಲ್ಪಡುತ್ತಾರೆ. ದೇಹ ನಾಶ ಇಲ್ಲದಿರುವ ಚೇತನಸ್ವರೂಪಳಾದ ಲಕ್ಷ್ಮೀದೇವಿಯು ಅಕ್ಷರಪುರುಷಳೆಂದು ಪ್ರಖ್ಯಾತಳಾಗಿದ್ದಾಳೆ. ಅವಳು ಅವ್ಯಾಕೃತಾಕಾಶಕ್ಕೆ ಅಭಿಮಾನಿದೇವತೆಯಾಗಿದ್ದಾಳೆ. ಅವಳು ಸ್ತ್ರೀಯಾ-ದರೂ ಪುರುಷಶಕ್ತಿಯಿರುವುದರಿಂದ ಪುರುಷ ಶಬ್ದವಾಚ್ಯಳಾಗಿದ್ದಾಳೆ.

ಈ ಎರಡು ಪುರುಷರುಗಳ ದೆಸೆಯಿಂದಲೂ ಬೇರೆಯಾಗಿ ಇನ್ನೊಬ್ಬ ಪುರುಷನಿದ್ದಾನೆ. ಅವನು ಎಲ್ಲ ಪುರುಷರಿಗಿಂತ ಉತ್ತಮನು. ಅವನನ್ನು ಪರಮಾತ್ಮನೆಂದು ಶಾಸ್ತ್ರದಲ್ಲಿ ಹೇಳುತ್ತಾರೆ. ಅವನು ಮೂರು ಲೋಕದ ಒಳಗೆ ಪ್ರವೇಶ ಮಾಡಿ ಮೂರು ಲೋಕವನ್ನು ಧರಿಸುತ್ತಿದ್ದಾನೆ. ಮೂರುಲೋಕ ನಾಶವಾದರೂ ಅದರೊಳಗಿರತಕ್ಕ ಪರಮಾತ್ಮನು ನಾಶ ಹೊಂದುವದಿಲ್ಲ. ಅವನಿಗೆ ಅಂಥ ಶಕ್ತಿಯಿದೆ. ಮನೆ ಸುಡುವ ಕಾಲಕ್ಕೆ ಅಗ್ನಿಸ್ತಂಭ ಮಂತ್ರವುಳ್ಳವನು ಆ ಮನೆಯೊಳಗಿದ್ದರೂ ಸುಖವಾಗಿ ವಾಸ ಮಾಡುತ್ತಾನೆ. ಅದರಂತೆ ಪರಮಾತ್ಮನು ಅಪರಿಮಿತ ಶಕ್ತಿಯುಳ್ಳವನಾದ್ದರಿಂದ ಅವನಿಗೆ ನಾಶವೇ ಇಲ್ಲ. ಕ್ಷರಾಕ್ಷರ

ಪುರುಷರುಗಳನ್ನು ದಾಟಿ ಉತ್ತಮನಾಗಿರುವದರಿಂದ ಪೌರುಷೇಯ, ಅಪೌರುಷೇಯ ಶಾಸ್ತ್ರಗಳೆಲ್ಲವೂ ನನ್ನನ್ನು ಪುರುಷೋತ್ತಮನೆಂದು ಹೇಳುತ್ತವೆ.

ಯಾರು ಈ ರೀತಿಯಾಗಿ 'ಪುರುಷೋತ್ತಮ ಶಬ್ದವು ನನ್ನಲ್ಲಿ ಕೇವಲ ಸಂಕೇತವಲ್ಲ, ಇಷ್ಟು ಅರ್ಥದಿಂದ ಕೂಡಿದೆ' ಎಂದು ತಿಳಿಯುತ್ತಾರೋ ಅವರೇ ಸಕಲಶಾಸ್ತ್ರದ ಸಾರ ಜ್ಞಾನಿಗಳಾಗಿದ್ದಾರೆ. ಅವರೇ ನನ್ನನ್ನು ತಂದೆಯೆಂತಲೂ, ತಾಯಿಯೆಂತಲೂ ಸರ್ವಭಾವದಿಂದ ಪೂಜೆ ಮಾಡುತ್ತಾರೆ. ಇದು ಅತ್ಯಂತ ಗೋಪ್ಯವಾದ ವಿಷಯವಾಗಿದೆ. ನಾನು ಬುದ್ಧರೂಪದಿಂದ ಅಯೋಗ್ಯರಿಗೆ ವಿಪರೀತ ಉಪದೇಶ ಮಾಡಿ ಮೋಹಗೊಳಿಸುವದುಂಟು. ಆದರೆ ನಿನಗೆ ಮಾತ್ರ ಇದು ಮೋಹ ಎಂದೂ ಮಾಡಿದ್ದಲ್ಲ. ಯಾಕೆಂದರೆ ನೀನು ನಿರ್ದೋಷಿಯಾಗಿದ್ದಿ. ನಿನ್ನ ಮೇಲೆ ಪ್ರೀತಿಯಿಂದ ಯಥಾರ್ಥವಾದ ಉಪದೇಶವನ್ನು ಮಾಡುತ್ತಿದ್ದೇನೆ. ಇದನ್ನು ನೀನು ತಿಳಿದರೆ ಅಪರೋಕ್ಷ ಜ್ಞಾನಿಯಾಗುತ್ತಿ. ಕೃತಕೃತ್ಯನಾಗಿ ಮೋಕ್ಷವನ್ನು ಹೊಂದುವಿ."

ಇಲ್ಲಿ ವಿಶೇಷಾಂಶ: ಈ ಅಧ್ಯಾಯದ ಕೊನೆಯಲ್ಲಿಯೂ ಕೃಷ್ಣನು ತಾನು ಪುರುಷೋತ್ತಮನೆಂದೂ, ತಾನು ಎಲ್ಲರಗಿಂತಲೂ ಬೇರೆಯೆಂದೂ, ಇದೇ ಸಕಲ ಶಾಸ್ತ್ರಾರ್ಥವೆಂದೂ, ಇದನ್ನು ತಿಳಿದರೆ ಮೋಕ್ಷವಾಗುತ್ತದೆಯೆಂದೂ ಹೇಳಿದ್ದರಿಂದ ಗೀತೆಗೆ ಜೀವಬ್ರಹ್ಮೈಕ್ಯವು ಅಭಿಪ್ರೇತವೆಂದು ಹೇಳುವುದು ಸರಿಹೋಗುವದಿಲ್ಲ. ಇಲ್ಲಿ ಶಂಕರಾಚಾರ್ಯರು ವ್ಯಾಖ್ಯಾನ ಮಾಡುತ್ತ ನಿರ್ಗುಣ ಬ್ರಹ್ಮನನ್ನು ಪುರು-ಷೋತ್ತಮನೆಂದು ಬರೆದಿದ್ದಾರೆ. ಆದರೆ ಉತ್ತಮತ್ವವು ಗುಣಗಳಿದ್ದರೇನೇ ಬರುತ್ತದೆ. **'ಮಹತ್ವಂ ಚ ಗುಣೇನೈವ ನಾಕಾರೇಣ ಧನೇನ ವಾ =** ಇವರು ಮಹಾತ್ಮನೆಂದು ಹೇಳಬೇಕಾದರೆ ದೊಡ್ಡ ಶರೀರದ ಆಕಾರ ಇದ್ದರೆ, ಅಥವಾ ಧನವಿದ್ದರೆ ಸಾಲದು. ಗುಣಗಳು ಬೇಕಾದಷ್ಟು ಇದ್ದರೆ ಮಹಾತ್ಮನೆಂದು ಹೇಳುತ್ತಾರೆ ಎಂಬ ಲೋಕನ್ಯಾಯದಿಂದ ಬ್ರಹ್ಮನು ನಿರ್ಗುಣನಾದರೆ ಅವನು ಪುರುಷೋತ್ತಮನೆಂದು ಹೇಳಿಸಿಕೊಳ್ಳಲಾರನು. ಆದುದರಿಂದ ಇಲ್ಲಿಯ ಪುರು-ಷೋತ್ತಮ ಶಬ್ದಕ್ಕೆ ನಿರ್ಗುಣ ಬ್ರಹ್ಮನೆಂದು ಅರ್ಥ ಮಾಡಿದ್ದು ಯುಕ್ತವಲ್ಲ.

ಇಲ್ಲಿಗೆ ಹದಿನೈದನೆಯ ಅಧ್ಯಾಯ ಸಮಾಪ್ತಿಯಾಯಿತು. (ಇಪ್ಪತ್ನಾಲ್ಕನೆ ದಿನದ ಉಪನ್ಯಾಸ ಮುಗಿಯಿತು.)

***

# ಹದಿನಾರನೆಯ ಅಧ್ಯಾಯ

ಈ ಅಧ್ಯಾಯದ ಮಹಿಮೆಯನ್ನು ಪದ್ಮಪುರಾಣದಲ್ಲಿ ಈ ರೀತಿ ವರ್ಣನೆ ಮಾಡಿದ್ದಾರೆ: ಮಾಳವ ದೇಶದ ರಾಜನು ಸಹಸ್ರವರ್ಮನೆಂದು ಪ್ರಖ್ಯಾತ-ನಾಗಿದ್ದನು. ಅವನ ಪಟ್ಟದಾನೆಯು ಬಹು ಬಲಶಾಲಿಯಾಗಿತ್ತು. ಅದಕ್ಕೆ ಒಂದು ದಿವಸ ಮದವುಂಟಾಯಿತು. ಆನೆಗೆ ಹೆದರಿ ಎಲ್ಲರೂ ತಮ್ಮ ತಮ್ಮ ಮನೆಯೊಳಗೆ ಬಾಗಿಲಿಗೆ ಕೀಲಿ ಹಾಕಿ ಕುಳಿತುಕೊಂಡರು. ಕಿಟಕಿಯಿಂದ ಆನೆಯು ಮಾಡುವ ಚೇಷ್ಟೆಗಳನ್ನು ನೋಡುತ್ತಿದ್ದರು. ಆ ಆನೆಯು ಪ್ರತಿ ಮನೆಯ ಬಾಗಿಲನ್ನು ಗುದ್ದು-ವದು, ಕಂಬಗಳನ್ನು ಕೀಳುವದು ಮುಂತಾದ ರೀತಿಯಲ್ಲಿ ಜನರಿಗೆ ಉಪದ್ರವವನ್ನು ಮಾಡುತ್ತಿರುವಾಗ ರಾಜನು ಸಹ ಭೀತನಾಗಿ ಏನು ಮಾಡುವುದೆಂದು ತಿಳಿಯಲಾರದೆ ತನ್ನ ಅರಮನೆಯ ಮಾಳಿಗೆಯ ಮೇಲೆ ನಿಂತು ನೋಡುತ್ತಿದ್ದನು.

ಈ ಸಂದರ್ಭದಲ್ಲಿ ತೀರ್ಥಯಾತ್ರೆಗೆ ಹೊರಟಿದ್ದ ಒಬ್ಬ ಬ್ರಾಹ್ಮಣನು ಆ ಮಾರ್ಗದಲ್ಲಿ ಬಂದನು. ಆವಾಗ ಎಲ್ಲಾ ಜನರೂ ಆ ಬ್ರಾಹ್ಮಣನನ್ನು 'ಬೇರೆ ಮಾರ್ಗದಲ್ಲಿ ಹೋಗು, ಆನೆಗೆ ಮದ ಬಂದಿದೆ' ಎಂಬುದಾಗಿ ಹೇಳಿದರು. ಯಾರು ಹೇಳಿದರೂ ಆ ಬ್ರಾಹ್ಮಣನು ಹೆದರಲಿಲ್ಲ. ಆ ಆನೆ ಇದ್ದಲ್ಲಿಗೆ ಬಂದನು. ಆಗ ಅವನು ಹದಿನಾರನೆಯ ಅಧ್ಯಾಯದ ಗೀತೆಯ ಪಾರಾಯಣ ಮಾಡುತ್ತಿದ್ದನು. ಆನೆಯು ಸ್ತಬ್ಧವಾಯಿತು. ಬ್ರಾಹ್ಮಣನಿಗೆ ನಮಸ್ಕಾರ ಮಾಡಿತು. ಆನೆಯು ಬಹಳ ಶಾಂತವಾಗಿರುವದನ್ನು ನೋಡಿ ಮಾವಟಿಗನು ಬಂದು ಸಂಕೋಲೆಯನ್ನು ಹಾಕಿ-ದನು. ಇದನ್ನು ನೋಡುತ್ತಿದ್ದ ಎಲ್ಲಾ ಜನರೂ ಆಶ್ಚರ್ಯಪಟ್ಟರು. ಬ್ರಾಹ್ಮಣನಿಗೆ ಎಲ್ಲರೂ ಸತ್ಕಾರ ಮಾಡಿದರು.

ರಾಜನು ಬ್ರಾಹ್ಮಣನನ್ನು ಮನೆಗೆ ಕರೆದು ಆದರ-ಆತಿಥ್ಯದಿಂದ ಸಂತೋಷಪಡಿಸಿ ಪ್ರಾರ್ಥನೆ ಮಾಡಿದನು: 'ಆ ಆನೆಯ ಮದವನ್ನು ಯಾವ ಮಂತ್ರಶಕ್ತಿಯಿಂದ ಪರಿಹರಿಸಿದಿರೋ ಆ ಮಂತ್ರವನ್ನು ನನಗೆ ಉಪದೇಶ ಮಾಡಿರಿ' ಎಂದು ಕೇಳಿದ್ದಕ್ಕೆ ಹದಿನಾರನೆಯ ಅಧ್ಯಾಯ ಗೀತೆಯನ್ನು ಉಪದೇಶ ಮಾಡಿದನು. ರಾಜನು ಭಕ್ತಿಯಿಂದ ಉಪದೇಶವನ್ನು ಸ್ವೀಕರಿಸಿ ತಾನೂ ಜಪಮಾಡಲು ಆರಂಭ

ಮಾಡಿದನು. ಆ ಬ್ರಾಹ್ಮಣನಿಗೆ ಬೇಕಾದಷ್ಟು ದಕ್ಷಿಣೆ ಕೊಟ್ಟು ಸಂತೋಷಪಡಿಸಿ ಕಳುಹಿಸಿಕೊಟ್ಟನು. ಇನ್ನು ಕೆಲವು ದಿವಸಗಳ ಮೇಲೆ ಅದೇ ಆನೆಗೆ ಪುನಃ ಮದವು ಪ್ರಾಪ್ತವಾಯಿತು. ರಾಜನು ಹದಿನಾರನೆಯ ಅಧ್ಯಾಯದ ಗೀತೆಯನ್ನು ಜಪಿಸಿ ರಾಜನೇ ಸ್ವತಃ ಆನೆಯ ಮದವನ್ನು ಪರಿಹರಿಸಿದನು.

ರಾಜನಿಗೆ ಈ ಗೀತೆಯ ಮಹಿಮೆಯು ಚೆನ್ನಾಗಿ ಗೊತ್ತಾಗಿ ಇದನ್ನು ಜಪಿಸಿ ಸಿದ್ಧಿಯನ್ನು ಹೊಂದಬೇಕೆಂದು ಸಂಕಲ್ಪಿಸಿದನು. ಎಲ್ಲ ರಾಜ್ಯವನ್ನು ಮಗನಿಗೆ ಒಪ್ಪಿಸಿ ಅರಣ್ಯಕ್ಕೆ ತೆರಳಿದನು. ಅರಣ್ಯದಲ್ಲಿ ಸರ್ವದಾ ಗೀತೆಯನ್ನು ಜಪಿಸುತ್ತ ಉತ್ತಮ ಸಿದ್ಧಿಯನ್ನು ಹೊಂದಿದನು. ಈ ರೀತಿಯಾಗಿ ಈ ಅಧ್ಯಾಯದ ಮಹಿಮೆಯನ್ನು ಹೇಳಿದ್ದಾರೆ.

ಇಂಥಾ ಮಹಿಮೆಯುಳ್ಳ ಹದಿನಾರನೆಯ ಅಧ್ಯಾಯವನ್ನು ಶ್ರೀಕೃಷ್ಣನು ಅರ್ಜುನನಿಗೆ ಉಪದೇಶಿಸುತ್ತಾನೆ: “ಎಲೋ ಅರ್ಜುನಾ! ದೈವೀ ಸಂಪತ್ತು ಮತ್ತು ಆಸುರೀ ಸಂಪತ್ತು ಎಂಬುದು ಯೋಗ್ಯತೆಯ ಎರಡು ಪ್ರಕಾರವಾಗಿದೆ. ದೈವೀ ಸಂಪತ್ತುಳ್ಳವರು ಮೋಕ್ಷಕ್ಕೆ ಅರ್ಹರಾಗಿದ್ದಾರೆ. ಆ ಸಂಪತ್ತನ್ನು ಹೆಚ್ಚು ಮಾಡಿ-ಕೊಂಡ ಹಾಗೆ ವಿಶೇಷವಾಗಿ ಮೋಕ್ಷ ಲಾಭವಾಗುತ್ತದೆ.

ಇದರಲ್ಲಿ ದೈವೀ ಸಂಪತ್ತು ಎಂದರೆ, ‘ಯಾವ ಪ್ರಾಣಿಗಳಿಗೂ ತಮ್ಮಿಂದ ಭಯವಾಗದಿರುವಿಕೆ, ಇನ್ನೊಬ್ಬರ ಭಯದಿಂದ ಸ್ವಧರ್ಮವನ್ನು ಬಿಡದಿರುವಿಕೆ, ಮನಸ್ಸಿನ ಉತ್ಕೃಷ್ಟವಾದ ಪರಿಶುದ್ಧತೆ, ಜ್ಞಾನದಲ್ಲಿ ಆಸಕ್ತಿ, ನ್ಯಾಯಾರ್ಜಿತ ದ್ರವ್ಯವನ್ನು ಸತ್ಪಾತ್ರದಲ್ಲಿ ದಾನ ಮಾಡುವದು, ಅಗ್ನಿಷ್ಟೋಮಾದಿ ಯಜ್ಞಗಳು, ಸ್ವಶಾಖಾ ಅಧ್ಯಯನ, ಕೃಚ್ಛ್ರ ಚಾಂದ್ರಾಯಣಾದಿ ತಪಸ್ಸು, ಮನೋವಾಕ್ಕಾಯ-ಗಳಲ್ಲಿ ಏಕಪ್ರಕಾರತೆ, ಪ್ರಾಣಿಗಳಿಗೆ ಪೀಡೆ ಕೊಡದೇ ಇರುವುದು, ಸತ್ಯ ಮಾತಾಡುವುದು, ಸಿಟ್ಟು ಮಾಡದೇ ಇರುವುದು, ಕರ್ಮಫಲತ್ಯಾಗ ಮಾಡುವುದು, ಮನಸ್ಸಿನ ಪ್ರಸನ್ನತೆ, ಚಾಡಿ ಹೇಳದಿರುವಿಕೆ, ಪ್ರಾಣಿಗಳಲ್ಲಿ ದಯೆ, ವಿಶೇಷವಾದ ವಿಷಯಾಸಕ್ತಿ ಇಲ್ಲದಿರುವಿಕೆ, ಮೃದುತ್ವ, ಅಧರ್ಮದ ಕೆಲಸ ಮಾಡಲು ಲಜ್ಜೆ-ಯಿರುವುದು, ಮನಶ್ಚಾಂಚಲ್ಯ ಇಲ್ಲದಿರುವಿಕೆ, ದುಷ್ಟರನ್ನು ಅಭಿಭವ ಮಾಡುವ ಸಾಮರ್ಥ್ಯ, ಸಹನಶಕ್ತಿ, ಧೈರ್ಯ, ಬಾಹ್ಯಾಭ್ಯಂತರ ಶುದ್ಧಿ, ಇತರರ ವೃತ್ತಿಯನ್ನು

ಅಪಹರಿಸುವ ದ್ರೋಹವನ್ನು ಮಾಡದಿರುವಿಕೆ, ಅಹಂಕಾರ ಇಲ್ಲದಿರುವಿಕೆ' – ಎಂಬ ಧರ್ಮಗಳು.

'ಸ್ವಲ್ಪ ಇದ್ದದನ್ನು ಮಹತ್ತಾಗಿ ತೋರಿಸುವ ದಂಭ, ಭಯಕ್ಕೆ ಕಾರಣ ಇರುವಾಗಲೂ ಅಭಯದಿಂದ ಪ್ರವೃತ್ತಿ ಮಾಡುವಿಕೆ, ವಿದ್ಯಾ ಧನ ಕುಲ ಇವುಗಳಿಂದ ಮಹತ್ವಬುದ್ಧಿ, ಸಿಟ್ಟು, ನಿಷ್ಠುರತೆ ಮತ್ತು ಅಜ್ಞಾನ' – ಇವು ಆಸುರೀ ಸಂಪತ್ತುಗಳೆಂದು ಹೇಳಲ್ಪಡುತ್ತವೆ. ಇಂಥ ಆಸುರೀ ಸಂಪತ್ತು ಎಷ್ಟೆಷ್ಟು ಹೆಚ್ಚಾ-ಗುತ್ತದೋ ಅಷ್ಟಷ್ಟು ದುಃಖವನ್ನು ಅನುಭವಿಸಬೇಕಾಗುತ್ತದೆ.

ಇಲ್ಲಿ ವಿಶೇಷಾಂಶ: ಶ್ರೀಕೃಷ್ಣನು ದೈವೀ ಸಂಪತ್ತು ವಿಮೋಕ್ಷಕ್ಕೋಸ್ಕರ ಎಂದು ಹೇಳಿದ್ದಾನೆ. ವಿಮೋಕ್ಷವೆಂದರೆ ವಿಶೇಷವಾದ ಮೋಕ್ಷವೆಂದು ಅರ್ಥ-ವಾಗುತ್ತದೆ. ಮೋಕ್ಷದಲ್ಲಿ ತಾರತಮ್ಯವಿದೆಯೆಂದು ಶ್ರೀ ಮಧ್ವಾಚಾರ್ಯರ ಮಾತ್ರ ಹೇಳಿದ ಸಿದ್ಧಾಂತ. ಇನ್ನು ಶಂಕರಾಚಾರ್ಯರು, ರಾಮಾನುಜಾಚಾರ್ಯರು, ಇತರ ಯಾವ ಮತದವರು ಕೂಡ ಮೋಕ್ಷದಲ್ಲಿ ತಾರತಮ್ಯವನ್ನು ಒಪ್ಪುವದಿಲ್ಲ. ಅವರೆಲ್ಲರಿಗೂ 'ವಿಮೋಕ್ಷಾಯ = ವಿಶೇಷ ಮೋಕ್ಷಕ್ಕೆ' ಎಂದು ಹೇಳಿದ್ದು ಬಾಧಕವಾಗಿರುತ್ತದೆ. ಶಂಕರಾಚಾರ್ಯರು ಮೋಕ್ಷದಲ್ಲಿ ಬ್ರಹ್ಮೈಕ್ಯವನ್ನು ಒಪ್ಪಿ-ದ್ದಾರೆ. ಬ್ರಹ್ಮೈಕ್ಯವು ಒಬ್ಬೊಬ್ಬರಿಗೆ ಒಂದೊಂದು ತರಹವಾಗಿಲ್ಲ. ರಾಮಾ-ನುಜಾಚಾರ್ಯರು **"ಪರಮಂ ಸಾಮ್ಯಮುಪೈತಿ"** ಎಂಬ ಶ್ರುತಿಗೆ ಸಂಪೂರ್ಣ ಸಾಮ್ಯವೆಂದು ಅರ್ಥ ಮಾಡಿಕೊಂಡು ತಾರತಮ್ಯವನ್ನು ಒಪ್ಪುವದಿಲ್ಲ. ಈ ಎರಡೂ ಮಾರ್ಗಗಳು ಶ್ರೀಕೃಷ್ಣನಿಗೆ ಸಮ್ಮತವಲ್ಲ.

ಅಲ್ಲದೇ, ಮೋಕ್ಷದಲ್ಲಿ ತಾರತಮ್ಯವನ್ನು ಒಪ್ಪುವದು ಯುಕ್ತಿಯುಕ್ತ-ವಾಗಿದೆ. ಹೆಚ್ಚು ಸಾಧನೆ ಮಾಡಿದವರು ಹೆಚ್ಚಿನ ಮೋಕ್ಷವನ್ನು ಹೊಂದಬೇಕಾ-ಗುವುದು. ಬ್ರಹ್ಮಾದಿ ದೇವತೆಗಳು ಎಷ್ಟು ಪರಮಾತ್ಮನ ಸೇವೆ ಮಾಡುತ್ತಾರೋ ಅಂಥಾ ಸೇವೆಯನ್ನು ಮಾಡುವುದು ಮನುಷ್ಯರಿಂದ ಸಾಧ್ಯವಿಲ್ಲ. ಮನುಷ್ಯರಿಗೂ ಬ್ರಹ್ಮಾದಿ ದೇವತೆಗಳಿಗೂ ಸಂಪೂರ್ಣ ಸಾಮ್ಯವಿದೆಯೆಂದೋ ಬ್ರಹ್ಮೈಕ್ಯವಿದೆ-ಯೆಂದೋ ಹೇಳಿದರೆ ಬ್ರಹ್ಮಾದಿ ದೇವತೆಗಳು ಹೆಚ್ಚು ಸೇವೆಮಾಡಿದ್ದಕ್ಕೆ ಏನು ಪ್ರಯೋಜನ?

'ಮೋಕ್ಷದಲ್ಲಿ ಸಾಮ್ಯವನ್ನು ಒಪ್ಪದಿದ್ದರೆ ಹೆಚ್ಚು ಆನಂದ ಅನುಭವಿಸು-ವವರನ್ನು ನೋಡಿ ಕಡಿಮೆ ಆನಂದ ಅನುಭವಿಸುವವರು ನಮಗೆ ಅಷ್ಟು ಆನಂದವಿಲ್ಲವೆಂದು ದುಃಖವನ್ನು ಅನುಭವಿಸಬೇಕಾದೀತು' ಎಂಬ ಯುಕ್ತಿಯು ಸರಿಯಾದದ್ದಲ್ಲ. ಮುಕ್ತರು ತಮ್ಮ ತಮ್ಮ ಯೋಗ್ಯತೆ ಎಷ್ಟೆಂದು ತಿಳಿದು-ಕೊಂಡಿರುತ್ತಾರೆ. ತಮ್ಮ ತಮ್ಮ ಯೋಗ್ಯತೆಗೆ ಸರಿಯಾಗಿ ತಾವು ಮಾಡಿದ ಸೇವೆಗೆ ನಮಗೆ ಇಷ್ಟು ಆನಂದವನ್ನು ಕೊಟ್ಟದ್ದು ಯೋಗ್ಯವಾಗಿದೆ. ಬ್ರಹ್ಮಾದಿ ದೇವತೆಗಳು ನಮಗಿಂತ ಹೆಚ್ಚು ಯೋಗ್ಯತೆವುಳ್ಳವರು, ಹೆಚ್ಚು ಸೇವೆ ಮಾಡಿದ್ದಾರೆ. ಅದಕ್ಕೆ ಅಷ್ಟು ಆನಂದವನ್ನು ಪರಮಾತ್ಮನು ಅವರಿಗೆ ಕೊಟ್ಟದ್ದು ಯುಕ್ತವೇ ಎಂದು ತಿಳಿದು ತೃಪ್ತಿಯನ್ನೇ ಹೊಂದುತ್ತಾರೆ. ತಮ್ಮ ಯೋಗ್ಯತೆಯನ್ನು ತಿಳಿಯದೇ ಇದ್ದ ಅಜ್ಞಾನಿಗಳು ಈ ಸಂಸಾರದಲ್ಲಿ ತಮಗಿಂತ ಶ್ರೇಷ್ಠತೆಯನ್ನು ಪಡೆದಿರುವವರನ್ನು ನೋಡಿ ದುಃಖ ಪಡುವುದುಂಟು. ಆದರೆ ಇದು ಮುಕ್ತಿಗೆ ಅನ್ವಯಿಸುವದಿಲ್ಲ.

ತೈತ್ತಿರೀಯ ಉಪನಿಷತ್ತಿನಲ್ಲಿ ಆನಂದ ತಾರತಮ್ಯವನ್ನು ಮೋಕ್ಷದಲ್ಲಿ ಸ್ಪಷ್ಟವಾಗಿ ಹೇಳಿದ್ದರಿಂದ ಅದನ್ನನುಸರಿಸಿ **"ಪರಮಂ ಸಾಮ್ಯಮುಪೈತಿ"** ಎಂಬ ಶ್ರುತಿಗೆ ಸಂಸಾರದಲ್ಲಿ ಜೀವಪರಮಾತ್ಮರಿಗೆ ಚೇತನತ್ವರೂಪದಿಂದ ಸಾಮ್ಯವಿದೆ-ಯಾದರೂ ಅದಕ್ಕಿಂತಲೂ ಹೆಚ್ಚಿನ ಸಾಮ್ಯ, ನಿರ್ದುಃಖತ್ವ, ನಿತ್ಯತೃಪ್ತಿ, ಪ್ರಾಕೃತ-ಶರೀರರಾಹಿತ್ಯ, ಜನನಮರಣಾದ್ಯಭಾವ ಮೊದಲಾದವು ಮೋಕ್ಷದಲ್ಲಿ ಬರುತ್ತದೆ ಎಂದೇ ಅರ್ಥ.

"ಪರಮಂ ಬ್ರಹ್ಮ ವೇದ ಬ್ರಹ್ಮೈವ ಭವತಿ" ಎಂಬ ಶ್ರುತಿಯಲ್ಲಿ ಪರಬ್ರಹ್ಮ ಜ್ಞಾನಿಗಳಾದವರು ಬ್ರಹ್ಮಸ್ವರೂಪರೇ ಆಗುತ್ತಾರೆ ಎಂದು ಸಂಪೂರ್ಣ ಸಾಮ್ಯವನ್ನು ಹೇಳಿದಂತೆ ತೋರುತ್ತದೆ. ಆದರೆ 'ಬ್ರಹ್ಮಸ್ವರೂಪರಾಗುತ್ತಾರೆ' ಎಂದರೆ ಪೂರ್ಣಸ್ವರೂಪನಾಗುತ್ತಾರೆ ಎಂದರ್ಥ. ಬ್ರಹ್ಮಶಬ್ದಕ್ಕೆ ಪೂರ್ಣನೆಂದು ಅರ್ಥ. ಮುಕ್ತರಾದವರೆಲ್ಲರೂ ತಮ್ಮ ತಮ್ಮ ಯೋಗ್ಯತೆಗೆ ಸರಿಯಾಗಿ ಪೂರ್ಣತ್ವ-ವನ್ನು ಹೊಂದುತ್ತಾರೆ. ಪೂರ್ಣತ್ವದಲ್ಲಿಯೂ ತಾರತಮ್ಯವಿದೆ. ಪರಮಾತ್ಮನಿಗಿರುವ ಪೂರ್ಣತ್ವವು ಚತುರ್ಮುಖ ಬ್ರಹ್ಮರಿಗಿಲ್ಲ. ಅವರಿಗಿರುವ ಪೂರ್ಣತ್ವವು ಇತರರಿಗಿಲ್ಲ.

ಸಮುದ್ರವೂ ಜಲದಿಂದ ಪೂರ್ಣವಾಗಿದೆ. ನದಿಯೂ ಜಲದಿಂದ ಪೂರ್ಣವಾಗಿದೆ. ಸರೋವರವೂ ಜಲದಿಂದ ಪೂರ್ಣವಾಗಿದೆ. ಸಮುದ್ರದ ಪೂರ್ಣತ್ವಕ್ಕಿಂತಲೂ ನದಿಯ ಪೂರ್ಣತ್ವ ಕಡಿಮೆಯಾಗಿದೆ. ಆ ಪೂರ್ಣತ್ವಕ್ಕಿಂತಲೂ ಸರೋವರದ ಪೂರ್ಣತ್ವವು ಇನ್ನೂ ಕಡಿಮೆ. ಇದೇ ರೀತಿಯಾಗಿ ಮುಕ್ತರೆಲ್ಲರೂ ಬ್ರಹ್ಮಸ್ವರೂಪರು. ಅಂದರೆ ತಮ್ಮ ತಮ್ಮ ಯೋಗ್ಯತೆಗೆ ಅನುಸಾರಿಯಾದ ಪೂರ್ಣತ್ವವುಳ್ಳವರು ಎಂದು ಆ ಶ್ರುತಿಯ ಅರ್ಥ. ಆದುದರಿಂದಲೇ 'ಪರಬ್ರಹ್ಮ'ಜ್ಞಾನಿಯು ಪರಬ್ರಹ್ಮನೇ ಆಗುತ್ತಾನೆಂದು ಆ ಶ್ರುತಿಯಲ್ಲಿ ಹೇಳಲಿಲ್ಲ. 'ಬ್ರಹ್ಮ'ನಾಗುತ್ತಾನೆ ಎಂದಷ್ಟೇ ಹೇಳಿದ್ದಾರೆ.

ಇದೇ ರೀತಿ ಶ್ರೀಕೃಷ್ಣ ಪರಮಾತ್ಮನು **'ನಿಬಂಧಾಯಾಸುರೀ ಮತಾ'** ಎಂದು ನರಕದಲ್ಲಿಯೂ ಕೂಡಾ ತಾರತಮ್ಯವಿದೆಯೆಂದು ಹೇಳಿದ್ದಾನೆ. **'ನಿಬಂಧಾಯ'** ಅಂದರೆ 'ನಿತರಾಂ ಬಂಧಾಯ = ಹೆಚ್ಚಿನ ದುಃಖವನ್ನು'ಅನು-ಭವಿಸುವುದಕ್ಕೋಸ್ಕರ' ಎಂದರ್ಥವಾಗುತ್ತದೆ. ಭಗವದ್ದ್ವೇಷಿಗಳು ತಮ್ಮ ತಮ್ಮ ದ್ವೇಷದ ತಾರತಮ್ಯಾನುಸಾರವಾಗಿ ನರಕ ದುಃಖವನ್ನು ತಾರತಮ್ಯದಿಂದಲೇ ಅನು-ಭವಿಸುತ್ತಾರೆ ಎಂಬ ಶ್ರೀಮಧ್ವಾಚಾರ್ಯರ ಸಿದ್ಧಾಂತವು ಇಲ್ಲಿ ಶ್ರೀಕೃಷ್ಣನಿಂದ ಹೇಳಲ್ಪಟ್ಟಿದೆ.

ಶ್ರೀಕೃಷ್ಣ ಪರಮಾತ್ಮ ಅರ್ಜುನನಿಗೆ ಹೇಳುತ್ತಾನೆ: "ಎಲೋ ಅರ್ಜುನಾ! ನೀನು ದುಃಖಪಡಬೇಡ. ನೀನು ದೈವೀ ಸಂಪತ್ತುಳ್ಳವನಾಗಿರುವಿ. ನಿನಗೆ ಮೋಕ್ಷವು ನಿಶ್ಚಿತವಾಗಿದೆ.

ದೈವ ಸ್ವಭಾವವನ್ನು ವಿಸ್ತಾರವಾಗಿ ಹೇಳಿದ್ದೇನೆ. ಅಸುರರ ಸ್ವಭಾವವನ್ನು ವಿಸ್ತರಿಸಿ ಹೇಳುತ್ತೇನೆ. ಲೋಕದಲ್ಲಿ ದೈವಸ್ವಭಾವ ಮತ್ತು ಆಸುರಸ್ವಭಾವ ಎಂದು ಎರಡೇ ಸ್ವಭಾವವು ಇರುವವು. ಗಂಧರ್ವರು, ಋಷಿಗಳು, ಮನುಷ್ಯೋತ್ತಮರು ಇವರೆಲ್ಲಾ ದೈವೀ ಸ್ವಭಾವವುಳ್ಳವರಲ್ಲೇ ಪರಿಗಣಿಸಲ್ಪಟ್ಟಿದ್ದಾರೆ. ಅವರು ದೇವತೆಗಳಾಗದಿದ್ದರೂ ದೇವತೆಗಳ ಗುಣಗಳು ಅವರಲ್ಲಿ ಕೆಲಮಟ್ಟಿಗೆ ಇವೆ. ಹಾಗೆ ರಾಕ್ಷಸರೂ, ಪಿಶಾಚರೂ ಸಹ ಆಸುರ ಸ್ವಭಾವವುಳ್ಳವರಾದ್ದರಿಂದ ಆಸುರೀ

ಸ್ವಭಾವದಲ್ಲೇ ಅವರನ್ನು ಗಣಿಸಬೇಕು. ದೈವ ಸ್ವಭಾವದವರು ಎಂದಿಗೂ ಆಸುರ ಸ್ವಭಾವವನ್ನು ಹೊಂದುವದಿಲ್ಲ. ಆಸುರ ಸ್ವಭಾವದವರು ಎಂದಿಗೂ ದೇವ ಸ್ವಭಾವವನ್ನು ಹೊಂದುವದಿಲ್ಲ. ಪ್ರಹ್ಲಾದಾದಿಗಳು ದೈತ್ಯಕುಲದಲ್ಲಿ ಶಾಪದಿಂದ ಹುಟ್ಟಿದರೂ ಅವರ ದೈವ ಸ್ವಭಾವವು ವ್ಯತ್ಯಾಸವಾಗಲಿಲ್ಲ.

ಆಸುರ ಸ್ವಭಾವವನ್ನು ಇನ್ನು ಮೇಲೆ ವಿಸ್ತಾರವಾಗಿ ಹೇಳುತ್ತೇನೆ. ಅದನ್ನು ನೀನು ಚೆನ್ನಾಗಿ ತಿಳಿದುಕೊಳ್ಳಬೇಕು. ರೋಗಿಯಾದವನು ಅಪಥ್ಯವನ್ನು ಸರಿಯಾಗಿ ತಿಳಿದುಕೊಂಡು ಯಾವ ಅಪಥ್ಯವನ್ನು ಮಾಡದೇ ಹೇಗೆ ಇರಬೇಕೋ ಹಾಗೆ ಮುಕ್ತಿಯೋಗ್ಯನಾದವನು ಅಸುರಸ್ವಭಾವವನ್ನು ಪ್ರತಿಯೊಂದರಲ್ಲಿ ತಿಳಿದುಕೊಂಡು ಅದಕ್ಕೆ ದೂರನಾಗಿರಲು ಪ್ರಯತ್ನಿಸಬೇಕು.

ಆಸುರೀ ಸ್ವಭಾವದವರು ಶಾಸ್ತ್ರದ ವಿಧಿ ನಿಷೇಧಗಳನ್ನು ತಿಳಿಯುವುದಿಲ್ಲ. ಅವರಲ್ಲಿ ಶುಚಿತ್ವ, ಸದಾಚಾರ, ಸತ್ಯ – ಇವು ಸ್ವಲ್ಪವೂ ಇಲ್ಲ. ಜಗತ್ಸೃಷ್ಟ್ಯಾದಿ ಕರ್ತನಾದ ಈಶ್ವರನನ್ನು ಇಲ್ಲವೆಂದು ಹೇಳುತ್ತಾರೆ. 'ಯಜ್ಞದಿಂದ ಪರ್ಜನ್ಯ ಸೃಷ್ಟಿಯು, ಅದರಿಂದ ಅನ್ನ ಸೃಷ್ಟಿಯು, ಅದರಿಂದ ದೇಹಸೃಷ್ಟಿಯು, ಅದರಿಂದ ವೇದೋಚ್ಚಾರಣೆಯು, ಅದರಿಂದ ಪರಮಾತ್ಮನ ಜ್ಞಾನವು, ಅದರಿಂದ ಪರಮಾತ್ಮನ ಅನುಗ್ರಹವು, ಅದರಿಂದ ಸತ್ಕರ್ಮಗಳು, ಅದರಿಂದ ಯಜ್ಞಗಳು' – ಈ ತರಹವಾಗಿ ಜಗತ್ತು ಚಕ್ರ ರೂಪವಾಗಿ ನಡೆಯುತ್ತದೆಂಬುದನ್ನು ಅವರು ಒಪ್ಪುವದಿಲ್ಲ. ಕಾಮ ಮೂಲಕವಾಗಿ ಸ್ತ್ರೀಪುರುಷರು ಕೂಡಿದಾಗ ಈ ಸೃಷ್ಟಿಯು ಆಗುತ್ತದೆಂದು ಹೇಳುತ್ತಾರೆ. ಇನ್ನೂ ಕೆಲವು ಅಸುರರು ಕಪ್ಪೆ ಚಿಪ್ಪನ್ನು ನೋಡಿ ಭ್ರಮಿಸುವ ಬೆಳ್ಳಿಯಂತೆ ಈ ಜಗತ್ತು ಸುಳ್ಳೆಂದೂ, ಇದು ಸುಳ್ಳಾದ್ದರಿಂದ ಇದಕ್ಕೆ ಕಾರಣನೂ ಮತ್ತು ನಿಯಾಮಕನೂ ಆದ ಈಶ್ವರನಿಲ್ಲವೆಂದು ಹೇಳುತ್ತಾರೆ.

ಈ ಜಗತ್ತು "ಆತ್ಮನ ಆಕಾಶ ಸಂಭೂತಃ" ಎಂದು ಶ್ರುತಿಯಲ್ಲಿ ಹೇಳಿದಂತೆ ಪರಮಾತ್ಮನಿಂದ ಆಕಾಶ ಸೃಷ್ಟಿಯು, ಆಕಾಶದಿಂದ ವಾಯು ಸೃಷ್ಟಿಯು, ವಾಯುವಿನಿಂದ ಅಗ್ನಿ ಸೃಷ್ಟಿಯು, ಅಗ್ನಿಯಿಂದ ನೀರಿನ ಸೃಷ್ಟಿಯು, ಅದರಿಂದ ಪೃಥ್ವಿಸೃಷ್ಟಿಯು, ಅದರಿಂದ ಔಷಧಿಯ ಸೃಷ್ಟಿಯು, ಅದರಿಂದ ಅನ್ನ ಸೃಷ್ಟಿಯು ಆಗುತ್ತೆಂಬುದಾಗಿ ಅವರು ಹೇಳುವುದಿಲ್ಲ.

‘ಈ ಜಗತ್ತು ಕೇವಲ ಮಾಯಾಮಯವಾದದ್ದು. ಬ್ರಹ್ಮನಂತೆ ಸತ್ಯವಲ್ಲ. ನರವಿಷಾಣದಂತೆ ಅಸತ್ಯವಲ್ಲ. ಅಂದರೆ ಬ್ರಹ್ಮನು ಅಬಾಧ್ಯ. ಜಗತ್ತು ಅಬಾಧ್ಯವಲ್ಲ. ಬ್ರಹ್ಮಜ್ಞಾನದ ದೆಶೆಯಲ್ಲಿ ಬಾಧ್ಯವಾಗುತ್ತದೆ. ಚಿಪ್ಪನ್ನು ನೋಡಿ ಇದೇ ಬೆಳ್ಳಿಯೆಂದು ಮೊದಲು ತೋರುತ್ತದೆ. ಆಮೇಲೆ ಆ ಪುರುಷನು ಪರೀಕ್ಷೆ ಮಾಡಿ ಇದು ಬೆಳ್ಳಿಯಲ್ಲ. ಬೆಳ್ಳಿಯೆಂಬ ಜ್ಞಾನವು ಭ್ರಾಂತಿಯಾಗಿದೆ ಎಂದು ತಿಳಿದುಕೊಳ್ಳುವಂತೆ ಬ್ರಹ್ಮಜ್ಞಾನಿಯು ಇಷ್ಟರವರೆಗೆ ನನಗಿದ್ದ ಜಗತ್ತಿನ ಜ್ಞಾನವು ಭ್ರಾಂತಿಯೇ ಆಗಿದೆ, ಜಗತ್ತು ಸತ್ಯವಲ್ಲ ಎಂದು ನಿಶ್ಚಯ ಮಾಡುತ್ತಾನೆ. ಇಂಥಾ ನಿಶ್ಚಯಕ್ಕೆ ವಿಷಯವಾದ್ದರಿಂದ ಜಗತ್ತು ಬಾಧ್ಯವೆಂದು ಹೇಳಲ್ಪಡುತ್ತದೆ. ಜಗತ್ತು ಬಾಧ್ಯವಾದುದರಿಂದ ಬ್ರಹ್ಮನಂತೆ ಸತ್ಯವೂ ಅಲ್ಲ. ಆದರೆ ತೋರುವುದರಿಂದ ತೋರದೆ ಇರುವ ನರವಿಷಾಣಾದಿಗಳಂತೆ ಅಸತ್ಯವೂ ಅಲ್ಲ. ಸದಸದ್ವಿಲಕ್ಷಣ-ವಾಗಿರುತ್ತದೆ’ ಎಂದು ಹೇಳುತ್ತಾರೆ.”

ಇಲ್ಲಿ ವಿಶೇಷಾಂಶ: ಜಗತ್ತು ಅಸತ್ಯವೆಂದು ಹೇಳುವವರು ಅಸುರರು ಎಂದು ಶ್ರೀಕೃಷ್ಣನು ಹೇಳಿದ್ದರಿಂದ ಅದ್ವೈತಸಿದ್ಧಾಂತದಲ್ಲಿ ಜಗತ್ತು ಅಸತ್ ಎಂದು ನಿರೂಪಣ ಮಾಡಿದ್ದರಿಂದ ಅದ್ವೈತಸಿದ್ಧಾಂತವು ಅಸುರರ ಸಿದ್ಧಾಂತವೇ ಆಗಿದೆ. ‘ಬೌದ್ಧರು ಜಗತ್ತು ಅಸತ್ಯವೆಂದು ಹೇಳುವುದರಿಂದ ಅವರನ್ನು ಇಲ್ಲಿ ನಿಂದಿಸಿ-ರುತ್ತಾರೆ, ಅದ್ವೈತವನ್ನಲ್ಲ’ ಎಂದು ಕೆಲವರು ಹೇಳಬಹುದು. ಆದರೆ ಅದ್ವೈತಸಿದ್ಧಿ ವ್ಯಾಖ್ಯಾನದಲ್ಲಿ **‘ವಸ್ತುತಃ ಬ್ರಹ್ಮಭಿನ್ನೇ ಜಗತಿ ಶೂನ್ಯವಾದಿಭಿಃ ಅಸ್ಮಾಕಂ ಸಾಮ್ಯಮ್ ಇಷ್ಟಮ್** = ಬೌದ್ಧರು ಶೂನ್ಯವನ್ನು ಹೇಳುತ್ತಾರೆ, ನಾವು ಬ್ರಹ್ಮನನ್ನು ಹೇಳುತ್ತೇವೆ, ಇಷ್ಟೇ ನಮಗೂ ಶೂನ್ಯವಾದಿಗಳಿಗೂ ವ್ಯತ್ಯಾಸ, ಬ್ರಹ್ಮನನ್ನು ಬಿಟ್ಟರೆ ಜಗತ್ತಿನ ವಿಷಯದಲ್ಲಿ ನಮಗೂ ಶೂನ್ಯವಾದಿಗಳಿಗೂ ವ್ಯತ್ಯಾಸವಿಲ್ಲ’ ಎಂದು ಹೇಳಿದ್ದರಿಂದ ಜಗತ್ತು ಅಸತ್ಯವೆಂಬುದು ಶೂನ್ಯವಾದಿ ಸಿದ್ಧಾಂತದಂತೆ ಅದ್ವೈತಸಿದ್ಧಾಂತದಲ್ಲಿಯೂ ಇರುವುದೆಂದು ಅದ್ವೈತಿಗಳೇ ಒಪ್ಪಿದ್ದರಿಂದ ಜಗತ್ತು ಅಸತ್ಯವೆಂದು ಹೇಳತಕ್ಕ ಅದ್ವೈತ ಸಿದ್ಧಾಂತವು ಕೂಡಾ ಅಸುರ ಸಿದ್ಧಾಂತವೆಂದು ಇಲ್ಲಿ ಹೇಳಿದಂತಾಯಿತು.

'ಅದ್ವೈತಿಗಳು ಬ್ರಹ್ಮನನ್ನು ಒಪ್ಪಿದ್ದರಿಂದ ಶೂನ್ಯವಾದಿಗಳಿಗಿಂತ ಅವರ ಮತವು ಬೇರೆ' ಎಂದು ಹೇಳುವದು ಸರಿಯಲ್ಲ. ಬ್ರಹ್ಮನು ಶೂನ್ಯಕ್ಕಿಂತ ಬೇರೆಯಾಗಲು ಸಾಧ್ಯವಿಲ್ಲ. ಬ್ರಹ್ಮನಲ್ಲಿ ಶೂನ್ಯಕ್ಕಿಂತ ವಿಶೇಷವಿದೆ ಎಂದು ಹೇಳಿದರೆ ಬ್ರಹ್ಮ ನಿರ್ವಿಶೇಷನು (ಯಾವ ವಿಶೇಷವು ಇಲ್ಲದಿರುವವನು) ಎಂಬ ಅದ್ವೈತ ಸಿದ್ಧಾಂತಕ್ಕೆ ಹಾನಿ ಬರುತ್ತದೆ. ಅದಕ್ಕೋಸ್ಕರ ಶೂನ್ಯಕ್ಕಿಂತ ಬ್ರಹ್ಮನಲ್ಲಿ ವಿಶೇಷವಿಲ್ಲವೆಂದರೆ ಶೂನ್ಯವಾದಕ್ಕಿಂತ ಅದ್ವೈತವಾದವು ಬೇರೆ ಆಗುವದು ಹೇಗೆ?

ಆದ್ದರಿಂದಲೇ ಬೌದ್ಧಮತವನ್ನು ಖಂಡಿಸಿದ ಕುಮಾರಿಲಭಟ್ಟರನ್ನು ಶಂಕರಾಚಾರ್ಯರು ಭೇಟಿ ಮಾಡಿ ವಾಕ್ಯಾರ್ಥ ವಿಚಾರಕ್ಕೆ ಕರೆದಾಗ, ಕುಮಾರಿಲ-ಭಟ್ಟರು, 'ನೀನು ಒಬ್ಬ ಹೊಸ ಬೌದ್ಧನಾಗಿದ್ದಿ. ನಾನು ಸರಿಯಾಗಿದ್ದಾಗ ವಾಕ್ಯಾರ್ಥ ವಿಚಾರಕ್ಕೆ ನೀನು ಬರಲಿಲ್ಲ. ನಾನು ಯಾವುದೋ ಒಂದು ಸುಳ್ಳು ಹೇಳಿದ ಪ್ರಾಯಶ್ಚಿತ್ತಕ್ಕಾಗಿ ಬೆಂಕಿಯಲ್ಲಿ ಹಾರಿ ಮೊಣಕಾಲಿನವರೆಗೆ ಸುಡಲ್ಪಟ್ಟಿದ್ದೇನೆ. ಈಗ ನನಗೆ ವಾಕ್ಯಾರ್ಥ ವಿಚಾರ ಮಾಡಲು ಅವಕಾಶವಿಲ್ಲ' ಎಂದು ಹೇಳಿದರು. ಈ ಪ್ರಕಾರ 'ಶಂಕರವಿಜಯ'ದಲ್ಲಿ ಚರಿತ್ರೆ ಇದೆ.

ಶಂಕರಾಚಾರ್ಯರು ಬೌದ್ಧಮತವನ್ನು ಖಂಡಿಸಿದರೆಂಬ ಇತಿಹಾಸವು ಸುಳ್ಳೆಂದು ತಿಳಿಯಬೇಕಾಗಿದೆ. ಯಾಕೆಂದರೆ ಕುಮಾರಿಲಭಟ್ಟರೇ ರಾಜಾಶ್ರಯದಿಂದ ಭರತಖಂಡದಿಂದಲೇ ಬೌದ್ಧರನ್ನು ಹೊರಗೆ ಹಾಕಿದ್ದಾರೆ. ಸುಧನ್ವ ಎಂಬ ಆಗಿನ ಕಾಲದ ರಾಜನು ಕುಮಾರಿಲಭಟ್ಟರಿಂದ ಬೌದ್ಧರು ಪರಾಜಿತರಾದಾಗ ಭೃತ್ಯರು-ಗಳಿಗೆ ಆಜ್ಞಾ ಮಾಡಿದರು: 'ಸೇತುವಿನಿಂದ ಆರಂಭಿಸಿ ಹಿಮಾಚಲದವರೆಗೆ ಬೌದ್ಧರ ಸಣ್ಣ ಹುಡುಗರು, ವೃದ್ಧರು, ಆತುರರು, ಅಥವಾ ಸ್ತ್ರೀಯರು ಯಾರೂ ಕೂಡಾ ಇಲ್ಲದಂತೆ ಮಾಡಬೇಕು. ಅವರನ್ನು ಕೊಲ್ಲದೆ ಇದ್ದಂಥ ಭೃತ್ಯನನ್ನು ನಾನು ಕೊಂದು ಹಾಕುತ್ತೇನೆ' ಎಂದು. ಈ ರೀತಿಯಾಗಿ ಕುಮಾರಿಲಭಟ್ಟರೇ ರಾಜಾಶ್ರಯದಿಂದ ಬೌದ್ಧರನ್ನು ಈ ದೇಶದಿಂದ ಹೊರಗೆ ಹಾಕಿದ ಮೇಲೆ ಆ ಮತವು ಪುನಃ ಬರಲು ಪ್ರಸಕ್ತಿ ಇಲ್ಲ.

ಕುಮಾರಿಲಭಟ್ಟರು ಇರುವ ಕಾಲಕ್ಕೇನೇ ಅವರನ್ನು ವಾಕ್ಯಾರ್ಥ ವಿಚಾರಕ್ಕೋಸ್ಕರ ಶಂಕರಾಚಾರ್ಯರು ಕರೆದಿದ್ದರೆಂದ ಮೇಲೆ ಕುಮಾರಿಲಭಟ್ಟರ ಕಾಲವು ಶಂಕರಾಚಾರ್ಯರ ಕಾಲವು ಒಂದೇ ಆಯಿತು. ಶಂಕರಾಚಾರ್ಯರು ವಾಕ್ಯಾರ್ಥವಿಚಾರಕ್ಕೆ ಕುಮಾರಿಲಭಟ್ಟರನ್ನು ಕರೆಯಬೇಕಾದರೆ ಶಂಕರಾಚಾರ್ಯರಿಗೆ ಸಾಮಾನ್ಯ ಇಪ್ಪತ್ತು ವರ್ಷ ವಯಸ್ಸಾದರೂ ಆಗಿರಬೇಕು. ಶಂಕರಾಚಾರ್ಯರು ಇದ್ದದ್ದೇ ಮೂವತ್ತೆರಡು ವರ್ಷಕಾಲ. ಕುಮಾರಿಲಭಟ್ಟರಿಂದ ವಿಶೇಷವಾಗಿ ನಾಶ ಹೊಂದಿದ ಬೌದ್ಧಮತವು ಶಂಕರಾಚಾರ್ಯರ ಕಾಲಕ್ಕೆ ಬರಲು ಪುನಃ ಅವಕಾಶವೇ ಇಲ್ಲ.

ಶಂಕರಾಚಾರ್ಯರು ಬ್ರಹ್ಮಸೂತ್ರಕ್ಕೆ ಭಾಷ್ಯ ಮಾಡುವಾಗ ಬೌದ್ಧಮತದ ದೋಷವನ್ನು ಬರೆದಿದ್ದಾರೆ ಎಂಬುದೇನೇ ನಿಜ. ಬ್ರಹ್ಮಸೂತ್ರಗಳಲ್ಲಿ ಬೌದ್ಧಮತದ ದೋಷಗಳನ್ನು ಹೇಳಿದ್ದರಿಂದ ಅದಕ್ಕೆ ವ್ಯಾಖ್ಯಾನ ಮಾಡುವಾಗ ಅದನ್ನು ವಿಶದಪಡಿಸಬೇಕಾಯಿತು. ಅಷ್ಟೇ ಹೊರತು, ಬೌದ್ಧಮತವನ್ನು ಖಂಡಿಸುವ ದೃಷ್ಟಿಯಿಂದ ಬೌದ್ಧರ ಮೇಲೆ ದೋಷವನ್ನು ಹೇಳಿದ್ದಲ್ಲ.

ಭಾಮತಿಕಾರರಾದ ವಾಚಸ್ಪತಿಮಿಶ್ರರು ಅದ್ವೈತಿಗಳಾಗಿದ್ದರು. ತಮ್ಮ ಮತಕ್ಕೆ ವಿರುದ್ಧವಾಗಿರುವ ತಾರ್ಕಿಕಗ್ರಂಥಗಳಿಗೆ ವ್ಯಾಖ್ಯಾನ ಮಾಡುವಾಗ ಅದ್ವೈತದ ದೂಷಣವನ್ನೇ ಬರಿದಿದ್ದಾರೆ. ಅದರಂತೆ ಶಂಕರಾಚಾರ್ಯರು ಬೌದ್ಧಮತವನ್ನೇ ವೈದಿಕಮತದ ವೇಷಕೊಟ್ಟು ಪುನಃ ಲೋಕದಲ್ಲಿ ಪ್ರಚಾರ ಮಾಡಲಿಕ್ಕೆ ಬಂದವರಾದ ಕಾರಣ ಬೌದ್ಧಮತದ ಮೇಲೆ ದೋಷವನ್ನು ಹೇಳಿದರು. ಅದು ಅವರಿಗೆ ಸಮ್ಮತವಲ್ಲವೆಂದು ತಿಳಿಯಬೇಕು. ಆದುದರಿಂದಲೇ ವಿಜ್ಞಾನಭಿಕ್ಷುಗಳು, ಭಾಸ್ಕರಾಚಾರ್ಯರು, ಪಾರ್ಥಸಾರಥಿ ಮಿಶ್ರರು ಮೊದಲಾದ ಹಿಂದಿನ ಕಾಲದ ದೊಡ್ಡ ಪಂಡಿತರುಗಳು ಅದ್ವೈತಮತವನ್ನು ಬೌದ್ಧಮತವೆಂದೇ ತಮ್ಮ ತಮ್ಮ ಗ್ರಂಥದಲ್ಲಿ ಬರೆದಿದ್ದಾರೆ. ಪದ್ಮ ಪುರಾಣದಲ್ಲಿಯೂ ಮಾಯಾವಾದಮತವು ಪ್ರಚ್ಛನ್ನ ಬೌದ್ಧ ಮತವೆಂದು ಸ್ಪಷ್ಟವಾಗಿ ಬಂದಿದೆ.

ಶಂಕರಾಚಾರ್ಯರು, 'ವೇದವು ಪ್ರಮಾಣವಾಗಿದೆ. ವೇದಾಧ್ಯಯನ ಮಾಡಬೇಕು. ಚಾತುರ್ವರ್ಣ್ಯ ಧರ್ಮವು ಬೇಕು. ಯಜ್ಞಯಾಗಾದಿಗಳನ್ನು ಮಾಡ-

ಬೇಕು. ಈಶ್ವರಭಕ್ತಿ ಮಾಡಬೇಕು' ಇತ್ಯಾದಿ ರೀತಿಯಾಗಿ ತಮ್ಮ ಗ್ರಂಥದಲ್ಲಿ ಹೇಳಿದ್ದರಿಂದ ಇವರ ಮತವು ಬೌದ್ಧಮತವು ಆಗುವದು ಹೇಗೆ? ಎಂದು ಕೆಲವರು ಶಂಕೆ ಮಾಡಬಹುದು. ಆದರೆ ಶಂಕರಾಚಾರ್ಯರು ದ್ವೈತ ಮತವನ್ನೂ, ಅದ್ವೈತ ಮತವನ್ನೂ, ಎರಡನ್ನೂ ಉಪದೇಶಿಸಿದ್ದಾರೆ. ದ್ವೈತಜ್ಞಾನವು ಅದ್ವೈತಜ್ಞಾನಕ್ಕೆ ಅಂಗವೆಂದು ಹೇಳಿದ್ದಾರೆ. ಆ ಅಂಗವಾದ ದ್ವೈತಜ್ಞಾನಕ್ಕೋಸ್ಕರ ದ್ವೈತವನ್ನು ನಿರೂಪಣ ಮಾಡುತ್ತ ಯಜ್ಞಯಾಗಾದಿಗಳನ್ನು, ಈಶ್ವರಭಕ್ತಿಯನ್ನು ಉಪದೇಶ ಮಾಡಿದ್ದಾರೆ ಹೊರತು ಅದ್ವೈತವಾದದ ಸ್ವರೂಪವನ್ನಾಗಿ ಯಜ್ಞಯಾಗಾದಿಗಳನ್ನು ಈಶ್ವರಭಕ್ತಿಯನ್ನು ಹೇಳಲಿಲ್ಲ.

ಆದುದರಿಂದ ಅದ್ವೈತಮತವು ಬೌದ್ಧಮತಕ್ಕಿಂತ ಬೇರೆಯಾಗಲು ಕಾರಣವಿಲ್ಲ.

ಶ್ರೀಕೃಷ್ಣ ಪರಮಾತ್ಮನು ಹೇಳುತ್ತಾನೆ: "ಈಶ್ವರನು ಇಲ್ಲ. ಜಗತ್ತು ಸುಳ್ಳು ಎಂಬ ವಿಪರೀತ ಜ್ಞಾನವನ್ನು ಹೊಂದಿದ ಅಸುರರು ತಮ್ಮ ಆತ್ಮನ ನಾಶವನ್ನೇ ಮಾಡಿಕೊಳ್ಳುತ್ತಾರೆ. (ಆತ್ಮನಾಶವೆಂದರೆ ಅತ್ಮನಿಗೆ ನಿತ್ಯದುಃಖವೆಂದು ಅಭಿಪ್ರಾಯ.) ಅಸುರರು ಅಲ್ಪವಾದ ಪುಷ್ಪ, ಗಂಧ, ವನಿತಾದಿ ವಿಷಯಗಳನ್ನು ದೊಡ್ಡದೆಂದು ತಿಳಿದುಕೊಂಡವರಾಗಿ ಅದರ ಭೋಗಕ್ಕೋಸ್ಕರ ಭಯಂಕರವಾದ ಕರ್ಮವನ್ನು ಮಾಡುತ್ತಾರೆ. ಜಗತ್ತನ್ನೂ ನಾಶ ಮಾಡುತ್ತಾರೆ. ಅವರು ಸತ್ತ ಮೇಲೂ ಹುಲಿ ಮೊದಲಾದ ಭಯಂಕರ ಯೋನಿಯಲ್ಲಿ ಹುಟ್ಟಿ ಜಗತ್ತನ್ನು ನಾಶ ಮಾಡುತ್ತಾರೆ."

ಇಲ್ಲಿ ವಿಶೇಷಾಂಶ: ಈಶ್ವರನಿಲ್ಲವೆಂದೇ ಹೇಳತಕ್ಕ ಅಸುರರು ತಾವು ವಿಪರೀತಜ್ಞಾನಿಗಳಾದ ಪ್ರಯುಕ್ತ ತಾವು ಹಾಳಾಗುವುದಲ್ಲದೆ ಜಗತ್ತಿಗೂ ಹಾಗೆ ಉಪದೇಶ ಮಾಡಿ ಜಗತ್ತನ್ನು ನಾಶ ಮಾಡುತ್ತಾರೆ. ಈಶ್ವರನು, ಧರ್ಮಾಧರ್ಮಗಳು ಇಲ್ಲವೆಂದು ಹೇಳಿದರೆ ಜಗತ್ತು ನಿರ್ಭಯವಾಗಿ ಪಾಪಕಾರ್ಯದಲ್ಲಿ ಪ್ರವೃತ್ತಿ ಮಾಡುತ್ತದೆ. ಎಲ್ಲರ ಎದುರಿನಲ್ಲಿ ಯೋಗ್ಯರೆಂದು ಅನಿಸಿಕೊಂಡು ಏಕಾಂತದಲ್ಲಿ ರಹಸ್ಯವಾಗಿ ಘೋರ ಕೆಟ್ಟ ಕೆಲಸಗಳನ್ನು

ಮಾಡುತ್ತಾರೆ. ಶಿಕ್ಷಕನಾದ ಈಶ್ವರನು ನೋಡುತ್ತಿದ್ದಾನೆ ಎಂಬ ಭಯವೇ ಅವನಿಗಿಲ್ಲ. ಈ ರೀತಿಯಾಗಿ ಜಗತ್ತು ಹಾಳಾಗುತ್ತದೆ.

"ಅಸುರರು ಸ್ತ್ರೀಯರನ್ನು, ರಾಜಾದಿಗಳನ್ನು ವಶೀಕರಣ ಮಾಡಬೇಕೆಂಬ ಇಚ್ಛೆ ಉಳ್ಳವರಾಗಿ ಸ್ಮಶಾನದಲ್ಲಿ ವಾಸಮಾಡುತ್ತಾ ಮದ್ಯಮಾಂಸಗಳನ್ನು ಸೇವಿಸುತ್ತ ದುಷ್ಟ ಮಂತ್ರಗಳನ್ನು ಜಪಿಸುತ್ತಾರೆ. ಧನವನ್ನು ಸಂಪಾದಿಸಿ ಅಹಂಕಾರದಿಂದ ಯುಕ್ತರಾಗುತ್ತಾರೆ. 'ಅವಳು ಹೀಗೆ, ಇವಳು ಹೀಗೆ' ಎಂಬ ಲೋಕವಾರ್ತೆಯನ್ನು ಸಾಯುವವರೆಗೂ ಹೇಳುತ್ತಾ ಕಾಮಭೋಗವೇ ಪುರುಷಾರ್ಥ, ಅದಕ್ಕಿಂತ ಬೇರೆಯಾದ ಸ್ವರ್ಗಮೋಕ್ಷಾದಿಗಳು ಇಲ್ಲ ಎಂದು ನಿಶ್ಚಯವುಳ್ಳವರಾಗಿ ಆಶಾಪಾಶಗಳಿಂದ ಬದ್ಧರಾಗಿ ಕಾಮ-ಕ್ರೋಧಗಳಿಂದ ತೊಂಬಿದವರಾಗಿ ಕಳ್ಳತನ, ವಂಚನೆ, ದ್ರೋಹ ಇವುಗಳಿಂದ ದುಡ್ಡನ್ನು ಸಂಪಾದಿಸಲು ಪ್ರವೃತ್ತಿ ಮಾಡುತ್ತಾರೆ.

'ಇಷ್ಟು ದ್ರವ್ಯವನ್ನು ಹೊಂದಿದೆ. ಇನ್ನು ಇಷ್ಟು ದ್ರವ್ಯವು ಬರತಕ್ಕದ್ದಿದೆ. ಆ ಶತ್ರುವನ್ನು ನಾನು ಸಂಹಾರ ಮಾಡಿದೆ. ಇನ್ನು ಎಷ್ಟೋ ಶತ್ರುಗಳನ್ನು ನಾಶ ಮಾಡುತ್ತೇನೆ. ನಾನೇ ಈಶ್ವರನು, ವಿಷಯವನ್ನು ಭೋಗಿಸತಕ್ಕವನು, ಕೃತಕೃತ್ಯನು, ಬಲಿಷ್ಠನು, ಸುಖಿಯು ಆಗಿದ್ದೇನೆ' ಎಂದು ತಿಳಿಯುತ್ತಾರೆ"

ಇಲ್ಲಿ ವಿಶೇಷಾಂಶ: ನಾನು ಈಶ್ವರನೆಂದು ಅಸುರರು ತಿಳಿಯುತ್ತಾರೆಂದು ಹೇಳಿದ್ದರಿಂದ ಈಶೈಕ್ಯವನ್ನು ಉಪಾಸನ ಮಾಡುವ ಅದ್ವೈತಸಿದ್ಧಾಂತವು ಅಸುರಮತವೆಂದೇ ಹೇಳಬೇಕು. ಹಿರಣ್ಯಕಶಿಪುವು **'ಕ್ವಾಸೌ ಮದನ್ಯೋ ಜಗದೀಶ್ವರಃ** = ನನಗಿಂತ ಬೇರೆಯಾದ ಜಗದೀಶ್ವರನು ಎಲ್ಲಿ ಇದ್ದಾನೆ?' ಎಂದು ಕೇಳಿದನು. ಪೌಂಡ್ರಕ ವಾಸುದೇವನು ತಾನೇ ವಾಸುದೇವನೆಂದು ಭಾವಿಸಿ ವಾಸುದೇವನ ಲಕ್ಷಣವಾದ ಚಕ್ರ, ಶಂಖ, ಗದಾ, ಪದ್ಮಗಳನ್ನು ಧರಿಸಿ ಸುವರ್ಣಮಯ ಗರುಡನನ್ನು ಏರಿ ಶ್ರೀವತ್ಸಚಿಹ್ನೆಗೋಸ್ಕರ ಎದೆಯನ್ನು ಸುಟ್ಟುಕೊಂಡು ಜಗತ್ಪತಿಯಾದ ವಾಸುದೇವನು ತಾನೇ ಎಂದು ಭಾವಿಸುತ್ತಾ ದೂತನನ್ನು ದ್ವಾರಕೆಯಲ್ಲಿದ್ದ ಕೃಷ್ಣನ ಬಳಿ ಕಳುಹಿಸಿದನು. ಆ ದೂತನ

ಮುಖದಿಂದ ಪೌಂಡ್ರಕ ವಾಸುದೇವನ ಚರಿತ್ರೆಯನ್ನು ಕೇಳಿ ಸಭ್ಯರಾದ ಯಾದವರುಗಳು ನಕ್ಕುಬಿಟ್ಟರು. ಶ್ರೀಕೃಷ್ಣನು ಪೌಂಡ್ರಕ ವಾಸುದೇವನಲ್ಲಿ ಹೋಗಿ ಅವನನ್ನು ಸಂಹಾರ ಮಾಡಿದನು. ಹೀಗೆ ಅನೇಕ ದೈತ್ಯರು ತಾವೇ ಈಶ್ವರಸ್ವರೂಪವೆಂದು ಭಾವಿಸುತ್ತಿದ್ದರು. ಅದ್ವೈತ ಸಿದ್ಧಾಂತವು ಇದೇ ರೀತಿ ಇರುವದರಿಂದ ಅದ್ವೈತಸಿದ್ಧಾಂತವು ಅಸುರಸಿದ್ಧಾಂತವೇ ಆಗಿದೆ ಎಂಬುದಕ್ಕೆ ಸಂದೇಹವಿಲ್ಲ.

"ನಾನು ಮಹಾಧನಿಕ. ಮಹಾಕುಲೀನ. ನನಗೆ ಸದೃಶರು ಯಾರು? ಯಜ್ಞವನ್ನು ದಾನವನ್ನು ಮಾಡಿ ಮಹಾತ್ಮನೆಂದೆನಿಸಿಕೊಂಡಿದ್ದೇನೆ. ನೃತ್ಯಗೀತಾದಿ-ಗಳಿಂದ ಸಂತೋಷಪಡುತ್ತಿದ್ದೇನೆ ಎಂಬುದಾಗಿ ಅಸುರರು ವಿಪರೀತ ಜ್ಞಾನವುಳ್ಳ-ವರಾಗುತ್ತಾರೆ. ಅನೇಕ ವಿಷಯಗಳ ಚಿಂತೆಯಿಂದ ಕೂಡಿದವರಾಗಿ ಮೋಹವೆಂಬ ಬಲೆಯಿಂದ ಆವರಿಸಲ್ಪಟ್ಟವರಾಗಿ ಕಾಮಭೋಗದಲ್ಲಿ ನಿರತರಾಗಿ ಮಹಾ ನರಕದಲ್ಲಿ ಹೋಗಿ ಬೀಳುತ್ತಾರೆ. ತಮ್ಮನ್ನು ತಾವೇ ದೊಡ್ಡವರೆಂದು ಭಾವಿಸಿಕೊಳ್ಳುತ್ತಾರೆ. ಧನ ಇರುವದರಿಂದ ಅಹಂಕಾರಿಗಳಾಗುತ್ತಾರೆ. ಶಾಸ್ತ್ರವಿಧಿ-ಯನ್ನು ಬಿಟ್ಟು ದಂಭದಿಂದ ಯಜ್ಞಮಾಡುತ್ತಾರೆ. ಕಾಮಕ್ರೋಧಾದಿಗಳಿಂದ ಕೂಡಿದವರಾಗಿ ತಮ್ಮ ದೇಹದಲ್ಲಿಯೂ ಬೇರೆಯವರ ದೇಹದಲ್ಲಿಯೂ ಅಂತರ್ಯಾಮಿಯಾಗಿರುವ ನನ್ನನ್ನು ದ್ವೇಷ ಮಾಡುತ್ತಾರೆ. ಅಂದರೆ 'ಪರಮಾತ್ಮನು ನನ್ನ ದೇಹದ ಒಳಗಿದ್ದು ಮಾಡಿಸುವದಾದರೆ ನಾನು ಸುಮ್ಮನೆ ಇರುತ್ತೇನೆ ಮಾಡಿಸಲಿ ಈಗ' ಆದುದರಿಂದ ಈಶ್ವರನು ಇಲ್ಲವೇ ಇಲ್ಲವೆಂದು ಹೇಳುತ್ತಾರೆ.

ಆ ರೀತಿ ದ್ವೇಷ ಮಾಡತಕ್ಕ ಕ್ರೂರರಾದ ಮನುಷ್ಯಾಧಮರನ್ನು ನರಕದಲ್ಲಿ ಹಾಕುತ್ತೇನೆ. ಅನಂತರ ಅಸುರ ಯೋನಿಯಲ್ಲಿ ಸೃಷ್ಟಿ ಮಾಡುತ್ತೇನೆ. ಅಸುರ ಯೋನಿಯಲ್ಲಿ ಹುಟ್ಟಿದವರು ಪ್ರತಿಜನ್ಮದಲ್ಲಿಯೂ ನನ್ನನ್ನು ತಿಳಿಯದೆ, ನನ್ನನ್ನು ಹೊಂದದೇನೆ ನಿತ್ಯ ನರಕಕ್ಕೆ ಹೋಗಿ ಸೇರುತ್ತಾರೆ.

ವಿಶೇಷಾಂಶ: ಮಧ್ವಸಿದ್ಧಾಂತದಲ್ಲಿ ದ್ವೇಷ ಮಾಡತಕ್ಕವನಿಗೆ ನಿತ್ಯ ನರಕವುಂಟೆಂದು ಹೇಳುತ್ತದೆ. ಇತರ ಆಚಾರ್ಯರು ಅದನ್ನು ಒಪ್ಪುವದಿಲ್ಲ.

**'ಮಾಮ್ ಅಪ್ರಾಪ್ಯೈವ** = ನನ್ನನ್ನು ಎಷ್ಟು ಮಾತ್ರಕ್ಕೂ ಹೊಂದದೆ ಅಧಮಗತಿಗೆ ಸೇರುತ್ತಾರೆ' ಎಂದು ಹೇಳಿದ್ದರಿಂದ ಇತರ ಮತಾಚಾರ್ಯರ ಸಿದ್ಧಾಂತವು ಗೀತೆಗೆ ವಿರುದ್ಧವಾಗಿದೆಯೆಂದು ಗೊತ್ತಾಗುತ್ತದೆ.

ಶ್ರೀಕೃಷ್ಣ ಪರಮಾತ್ಮನು ಅಸುರಸ್ವಭಾವವನ್ನು ಇಷ್ಟರವರೆಗೆ ವಿಸ್ತರಿಸಿ ಹೇಳಿ ಅದು ಬಹು ವಿಸ್ತಾರವಾದುದರಿಂದ ಅದನ್ನು ಸ್ಮರಣೆಯಲ್ಲಿಟ್ಟುಕೊಳ್ಳಲು ಅಶಕ್ಯವಾದುದರಿಂದ ಅದನ್ನು ಸಂಗ್ರಹಿಸಿ ಅರ್ಜುನನಿಗೆ ಹೇಳುತ್ತಾನೆ: "ಎಲೋ ಅರ್ಜುನಾ! ನರಕಕ್ಕೆ ಸಾಧನವಾದದ್ದು ಹಾಗೂ ಆತ್ಮನಿಗೆ ತಿರ್ಯಗ್ಯೋನಿ ಸಾಧನವಾದದ್ದು ಮೂರು. ಕಾಮ, ಕ್ರೋಧ ಮತ್ತು ಲೋಭ ಎಂಬ ಈ ಮೂರು ದೋಷಗಳನ್ನು ಅವಶ್ಯ ಬಿಡಬೇಕು. ಇದನ್ನು ಬಿಟ್ಟರೆ ಎಲ್ಲಾ ದೋಷಗಳನ್ನು ಬಿಟ್ಟ ಹಾಗೆ ಆಗುತ್ತದೆ. ತಮಸ್ಸಿಗೆ ಸಾಧನವಾದ ಕಾಮಕ್ರೋಧಾದಿಗಳನ್ನು ಬಿಟ್ಟವನು ತನ್ನ ಶ್ರೇಯಸ್ಸನ್ನು ಸಂಪಾದಿಸಿಕೊಂಡು ಉತ್ತಮಗತಿಗೆ ಸೇರುತ್ತಾನೆ.

ಶಾಸ್ತ್ರದ ವಿಧಿಯನ್ನು ಅತಿಕ್ರಮಿಸಿ ತನ್ನ ಇಚ್ಛೆಗೆ ಅನುಸಾರವಾಗಿ ಯಾವನು ಇರುತ್ತಾನೋ ಅವನು ಯಾವ ಸಿದ್ಧಿಯನ್ನೂ, ಯಾವ ಸುಖವನ್ನೂ, ಯಾವ ಉತ್ತಮಗತಿಯನ್ನೂ ಹೊಂದುವದಿಲ್ಲ. ಎಲೋ ಅರ್ಜುನಾ! ಇದು ಕರ್ತವ್ಯ, ಇದು ಅಕರ್ತವ್ಯ ಎಂದು ನಿರ್ಣಯ ಮಾಡಬೇಕಾದರೆ ವೇದಾದಿ ಶಾಸ್ತ್ರ ಒಂದೇ ಪ್ರಮಾಣವಾದ್ದರಿಂದ ಅದನ್ನನುಸರಿಸಿ ಕರ್ಮಮಾಡು."

ಇಲ್ಲಿ ವಿಶೇಷಾಂಶ: ಈ ಶ್ಲೋಕವು ಅಧ್ಯಾಯದ ಕೊನೆಯದ್ದಾಗಿರುತ್ತದೆ. ಈ ಅಧ್ಯಾಯಾರ್ಥವನ್ನು ಉಪಸಂಹರಿಸುವಾಗ ಶ್ರೀಕೃಷ್ಣ ಪರಮಾತ್ಮನು ದ್ವೈತ-ಸಿದ್ಧಾಂತವನ್ನೇ ಹೇಳಿರುತ್ತಾನೆ. ಅದು ಹೇಗೆಂದರೆ, ಶಾಸ್ತ್ರದ ಪ್ರಮೇಯವು ಅಸತ್ಯವಾದರೆ ಶಾಸ್ತ್ರವು ಅಪ್ರಮಾಣವಾದೀತು. ಶಾಸ್ತ್ರವು ಇಲ್ಲಿ ಪ್ರಮಾಣವೆಂದು ಹೇಳಿದ್ದರಿಂದ ಶಾಸ್ತ್ರೋಕ್ತ ಪ್ರಮೇಯವಾದ ಕರ್ತವ್ಯಾಕರ್ತವ್ಯ ಕರ್ಮವು ಸತ್ಯ-ವಾಯಿತು. ಕರ್ಮಕ್ಕೆ ಕಾರಣವಾದ ಕರ್ಮೇಂದ್ರಿಯವು ಸತ್ಯವಾಯಿತು. ಅದಕ್ಕೆ ಕಾರಣವಾದ ಪಂಚಭೂತವು ಸತ್ಯವಾಯಿತು. ಪಂಚಭೂತಾತ್ಮಕ ಪ್ರಪಂಚವೇ ಸತ್ಯವೆಂದು ಒಪ್ಪಬೇಕಾಯಿತು. ಪ್ರಪಂಚವು ಸುಳ್ಳೆಂದು ಹೇಳುವ ಅದ್ವೈತಸಿದ್ಧಾಂತಕ್ಕೆ ಈ ಶ್ಲೋಕವು ಬಾಧಕವಾಗಿರುತ್ತದೆ.

ಅದ್ವೈತ ಸಿದ್ಧಾಂತದಲ್ಲಿ ಕರ್ಮಸ್ವರೂಪವನ್ನು ಹೇಳುವ ಶಾಸ್ತ್ರಭಾಗವು 'ಅತತ್ವಾವೇದಕ' ಅಂದರೆ ಸುಳ್ಳು ಹೇಳತಕ್ಕದ್ದು ಎಂದು ಒಪ್ಪಿದರೆ ಸುಳ್ಳು ಹೇಳತಕ್ಕದ್ದು ಪ್ರಮಾಣ ಹೇಗಾಗುತ್ತದೆ? ಬ್ರಹ್ಮಸ್ವರೂಪವನ್ನು ಹೇಳತಕ್ಕ ಶಾಸ್ತ್ರದ ಭಾಗವು ಮಾತ್ರ 'ತತ್ವಾವೇದಕ' ಅಂದರೆ ಸತ್ಯವನ್ನು ಹೇಳತಕ್ಕದ್ದು ಎಂದು ಹೇಳುತ್ತಾರೆ. ಆದರೆ ಅವರ ಮತದಲ್ಲಿ ಸತ್ಯವೆಂದು ಅಂಗೀಕರಿಸಲ್ಪಟ್ಟ ಬ್ರಹ್ಮನು ವಾಚ್ಯವೂ ಅಲ್ಲ ಮತ್ತು ಜ್ಞೇಯವೂ ಅಲ್ಲ. ಅಂದರೆ ಹೇಳಲಿಕ್ಕೂ ತಿಳಿದುಕೊಳ್ಳ-ಲಿಕ್ಕೂ ಬರುವದಿಲ್ಲ. ಹೇಳಲಿಕ್ಕೆ ಬಾರದಿದ್ದ ಬ್ರಹ್ಮನನ್ನು ಶಾಸ್ತ್ರವು ಹೇಳುವಂತೆಯೇ ಇಲ್ಲ. ಆದುದರಿಂದ ಶಾಸ್ತ್ರವು ಅದ್ವೈತಸಿದ್ಧಾಂತ ಪ್ರಕಾರ ಅಪ್ರಮಾಣವೇ ಆಗಿರುತ್ತದೆ.

ಶಾಸ್ತ್ರದ ಒಂದು ಭಾಗವನ್ನೂ ಸಹ ಅಪ್ರಮಾಣವೆಂದು ಹೇಳಬಾರದು. ಗೋವುಗಳಲ್ಲಿ ಪರಸ್ಪರ ವಿರೋಧ ಬಂದಾಗ ಒಂದು ಗೋವನ್ನು ಸಂಹರಿಸಿ ವಿರೋಧ ಪರಿಹಾರ ಮಾಡತಕ್ಕವರು ಮ್ಲೇಂಛಕುಮಾರರು. ಗೋವಿನಲ್ಲಿ ವಿಶ್ವಾಸವುಳ್ಳ ಧಾರ್ಮಿಕರು ಗೋವುಗಳಿಗೆ ತಿನ್ನಲಿಕ್ಕೆ ಬೇಕಾದ ತೃಣ, ಪಿಣ್ಯಾಕ (ಹಿಂಡಿ)ಗಳನ್ನು ಕೊಟ್ಟು ಅವುಗಳ ವಿರೋಧವನ್ನು ಪರಿಹಾರ ಮಾಡುತ್ತಾರೆ. ಅದೇ ರೀತಿ ಶಾಸ್ತ್ರದ ವಾಕ್ಯಗಳಲ್ಲಿ ಪರಸ್ಪರ ವಿರೋಧ ತೋರಿದಾಗ ಅವುಗಳಿಗೆ ಬೇರೆ ಬೇರೆ ಅರ್ಥವನ್ನು ಹೇಳಿ ವಿರೋಧವನ್ನು ಪರಿಹರಿಸಿ ಎಲ್ಲಾ ಶಾಸ್ತ್ರಭಾಗವೂ ಪ್ರಮಾಣವೆಂದೇ ಹೇಳುವದು ವೈದಿಕರ ಸರಣಿ. ಅದ್ವೈತಿಗಳು ಶಾಸ್ತ್ರದ ಕೆಲವು ಭಾಗ ಅಪ್ರಮಾಣವೆಂದು ಹೇಳಿದರೆ ಒಂದು ಗೋವನ್ನು ಸಂಹರಿಸಿದ ಮ್ಲೇಂಛಕುಮಾರರಂತೆ ವೈದಿಕರೆಂದು ಅನ್ನಿಸಿಕೊಳ್ಳಲಾರರು.

ಆದುದರಿಂದ ವೇದ ಶಾಸ್ತ್ರವೆಲ್ಲವೂ ಪ್ರಮಾಣವೇ ಆಗಿರುತ್ತದೆ ಎಂದು ಹೇಳಬೇಕು. ಅದೇ ವಿಷಯವನ್ನು ಇಲ್ಲಿ ಉಪಸಂಹಾರ ಮಾಡಿದ್ದಾರೆ. ಆದ್ದರಿಂದ ಈ ಅಧ್ಯಾಯಕ್ಕೂ ಅದ್ವೈತದಲ್ಲಿ ತಾತ್ಪರ್ಯವಿಲ್ಲ.

'ವೇದಾದಿ ಶಾಸ್ತ್ರಗಳೇ ಕರ್ತವ್ಯಾಕರ್ತವ್ಯದ ವಿಷಯದಲ್ಲಿ ಪ್ರಮಾಣ-ಗಳೆಂದು ಶ್ರೀಕೃಷ್ಣನು ಹೇಳಲು ಏನು ಕಾರಣ? ಬೌದ್ಧಾದಿ ಇತರ ಶಾಸ್ತ್ರಗಳು ಪ್ರಮಾಣ ಏಕೆ ಅಲ್ಲ? ಇತರ ಶಾಸ್ತ್ರಗಳು ಪ್ರಮಾಣವಲ್ಲದಿದ್ದರೆ ವೇದಾದಿ-

ಶಾಸ್ತ್ರಗಳೂ ಪ್ರಮಾಣವಲ್ಲವೆಂದು ಹೇಳುತ್ತೇವೆ' ಎಂದು ಕೆಲವರು ಶಂಕಿಸ-ಬಹುದು. ಆದರೆ ವೇದಾದಿ ಶಾಸ್ತ್ರಗಳು ಪ್ರತ್ಯಕ್ಷ ವಿರುದ್ಧವಾದ ವಿಷಯಗಳನ್ನು ಸ್ವಲ್ಪವೂ ಹೇಳುವದಿಲ್ಲ. ಬೌದ್ಧಾದಿ ಶಾಸ್ತ್ರಗಳು ಪ್ರತ್ಯಕ್ಷ ವಿರುದ್ಧವಾದ ವಿಷಯಗಳನ್ನು ಬಹಳ ಹೇಳುತ್ತವೆ. ಉದಾಹರಣೆಗೆ, ಜಗತ್ತಿನಲ್ಲಿ ಮಿಥ್ಯಾತ್ವವನ್ನು ಬೌದ್ಧ ಶಾಸ್ತ್ರವು ಪ್ರತ್ಯಕ್ಷ ವಿರುದ್ಧವಾಗಿ ಹೇಳುತ್ತದೆ. ಜೈನಮತವು ವೃಕ್ಷಗಳಲ್ಲಿ ಚೇತನವಿಲ್ಲವೆಂದು ಹೇಳುವದರಿಂದ ಅದು ಪ್ರತ್ಯಕ್ಷ ವಿರುದ್ಧವಾದ ಮತವಾಗಿದೆ. ಆಧುನಿಕ ವಿಜ್ಞಾನದವರೂ ಕೂಡಾ ವೃಕ್ಷಗಳಲ್ಲಿ ಚೇತನವಿದೆಯೆಂದು ಅನುಭವದಿಂದ ಹೇಳುತ್ತಾರೆ. ಕ್ರೈಸ್ತರೂ ಮಹಮ್ಮದೀಯರೂ ಪುನರ್ಜನ್ಮ ಮತ್ತು ಪಿಶಾಚಿಗಳು ಇಲ್ಲವೆಂದು ಹೇಳುತ್ತಾರೆ. ಆಧುನಿಕರ ಸಂಶೋಧನೆಯಿಂದಲೂ ಅದು ಅನುಭವ ವಿರುದ್ಧವಾದ ಮತವಾಗಿದೆ.

ವೇದ ಪುರಾಣಗಳಲ್ಲಿ ಭೂಮಿಯು ಸ್ಥಿರವೆಂದು ಹೇಳಿದ್ದು ಅನುಭವ ವಿರುದ್ಧವಷ್ಟೆ? ಎಂದು ಕೆಲವರು ಶಂಕಿಸಬಹುದು. ಆದರೆ ಭೂಭ್ರಮಣವು ಕೇವಲ ತರ್ಕದಿಂದಲೇ ಕಲ್ಪಿತವಾದದ್ದು. ತರ್ಕಕ್ಕೆ ಪ್ರತಿತರ್ಕವು ಅವರವರ ಬುದ್ಧಿಶಕ್ತಿ-ಯಿಂದ ಹೇಳಲು ಶಕ್ಯವಾಗುತ್ತದೆ. ಭೂಮಿಯ ವಿಚಾರವು ಅಲ್ಪಬುದ್ಧಿಯುಳ್ಳ ಮನುಷ್ಯರಿಗೆ ಗೋಚರವಾಗತಕ್ಕದ್ದೇ ಅಲ್ಲ. ಜಗತ್ಸೃಷ್ಟಿಕರ್ತನಾದ ಪರಮಾತ್ಮನೇ ತಿಳಿದವನು. ಅವನೇ ಅವತಾರ ಮಾಡಿ ಭೂಮಿಯ ಸ್ವರೂಪವನ್ನು ಸ್ಥಿರವೆಂದು ಹೇಳಿದ್ದರಿಂದ ಅದಕ್ಕೆ ವಿರುದ್ಧವಾಗಿ ಕೇವಲ ತರ್ಕದಿಂದ ಪ್ರತಿಭಟಿಸಲು ಯಾರಿಗೂ ಸಾಮರ್ಥ್ಯವು ಸಾಲದು. ಆದುದರಿಂದ ಇತರ ಶಾಸ್ತ್ರಗಳಂತೆ ವೇದಾದಿ ಶಾಸ್ತ್ರವು ಅನುಭವವಿರುದ್ಧವಾದದ್ದನ್ನು ಹೇಳತಕ್ಕದ್ದಲ್ಲ. ಆದುದರಿಂದ ಇದನ್ನೇ ಪ್ರಮಾಣ-ವೆಂದು ಒಪ್ಪಬೇಕು.

ಎಲ್ಲರೂ ಪ್ರಮಾಣವೆಂದು ಒಪ್ಪಿದ ವ್ಯಾಕರಣ ಶಾಸ್ತ್ರವು ವೇದಕ್ಕೆ ಮಹತ್ವವನ್ನು ಅಂಗೀಕರಿಸುತ್ತದೆ. ಎಲ್ಲರೂ ಒಪ್ಪಿದ ವೈದ್ಯಶಾಸ್ತ್ರವು ವೇದಮಂತ್ರದ ಜಪದಿಂದ ರೋಗ ಪರಿಹಾರವನ್ನು ಹೇಳಿ ವೇದಕ್ಕೆ ಮಹತ್ವವನ್ನು ಒಪ್ಪಿರುತ್ತದೆ. ಅರ್ಥಶಾಸ್ತ್ರವು ಕೂಡಾ **'ತ್ರಯೀಭಿಃ ರಕ್ಷಿತೋ ಲೋಕಃ ಪ್ರಸೀದತು** = ಎಂದು ಮೂರು ವೇದಗಳಲ್ಲಿ ಹೇಳಿದ ಪ್ರಕಾರ ಲೋಕವು

ಅನುಸರಿಸಿದರೆ ಸುಖವಾಗಿರುತ್ತದೆ, ದುಃಖವನ್ನು ಹೊಂದುವದಿಲ್ಲ' ಎಂದು ಹೇಳುತ್ತದೆ. ಆದ್ದರಿಂದ ವೇದವು ಸರ್ವಸಾಮಾನ್ಯವಾದ ಶಾಸ್ತ್ರವಾಯಿತು.

ಅಲ್ಲದೇ, ವೇದವು ಅಪೌರುಷೇಯವಾದ್ದರಿಂದ ಅದರಲ್ಲಿ ಯಾವ ತರಹದ ದೋಷದ ಶಂಕೆಗೂ ಅವಕಾಶವಿಲ್ಲ. ಅಪೌರುಷೇಯ ತತ್ವವನ್ನು ಒಪ್ಪ-ದಿದ್ದರೂ ವೇದ ಎಲ್ಲಾ ಶಾಸ್ತ್ರಗಳಿಗಿಂತ ಪ್ರಾಚೀನವಾದದ್ದು ಎಂದು ಎಲ್ಲರೂ ಒಪ್ಪಿದ ಮಾತಾಗಿದೆ. ಲೋಕದಲ್ಲಿ ವಿವಾದವು ಬಂದಾಗ ವಿವಾದ ಕಾಲಕ್ಕಿಂತಲೂ ಪ್ರಾಚೀನ ಕಾಲದಲ್ಲಿ ಆದ ರಿಕಾರ್ಡನ್ನು ಅನುಸರಿಸಿ ನ್ಯಾಯಸ್ಥಾನದಲ್ಲಿ ನಿರ್ಣಯ ಮಾಡುತ್ತಾರೆ. ಅದೇ ರೀತಿ ಬೌದ್ಧಾದಿ ಇತರ ಶಾಸ್ತ್ರಗಳು ಬರುವದಕ್ಕಿಂತಲೂ ಮೊದಲೇ ಇದ್ದದ್ದು ವೇದಶಾಸ್ತ್ರವು. ಆದುದರಿಂದ ಅದನ್ನೇ ಪ್ರಮಾಣವೆಂದು ಅದಕ್ಕೆ ವಿರುದ್ಧವಾದುದ್ದನ್ನು ಅಪ್ರಮಾಣವೆಂದು ಒಪ್ಪಬೇಕು.

ಈ ದಿನ ಆದಿತ್ಯವಾರವೆಂದು ನಾಳೆ ಸೋಮವಾರವೆಂದು ಈ ರೀತಿಯಾಗಿ ವಾರದ ಸ್ವರೂಪವನ್ನು ಎಲ್ಲರೂ ವಿವಾದವಿಲ್ಲದೆ ಒಪ್ಪುತ್ತಾರೆ. ಕಾರಣವೇನೆಂದರೆ ಪರಸ್ಪರ ವಿರುದ್ಧ ಅನೇಕ ಶಾಸ್ತ್ರಗಳು ಉಂಟಾಗುವ ಮೊದಲೇ ವೇದಸಿದ್ಧಾಂತ-ದಿಂದ ವಾರ ಸ್ವರೂಪವು ಹೇಳಲ್ಪಟ್ಟಿದೆ. ಆದುದರಿಂದ ಅದಕ್ಕೆ ವಿರುದ್ಧವಾಗಿ ಯಾರಿಗೂ ಹೇಳಲು ಅವಕಾಶವಾಗುವದಿಲ್ಲ. ಅದರಂತೆಯೇ ವೇದೋಕ್ತ ಎಲ್ಲಾ ಧರ್ಮವು ಎಲ್ಲರಿಗೂ ಮಾನ್ಯವೇ ಆಗತಕ್ಕದ್ದು ಎಂದು ಶ್ರೀಕೃಷ್ಣನ ಅಭಿಪ್ರಾಯವು. ಇಲ್ಲಿಗೆ ಹದಿನಾರನೆಯ ಅಧ್ಯಾಯವು ಸಮಾಪ್ತಿಯಾಯಿತು. (ಇಪ್ಪತ್ತೈದನೆಯ ದಿನದ ಉಪನ್ಯಾಸವು ಮುಗಿಯಿತು.)

***

# ಹದಿನೇಳನೆಯ ಅಧ್ಯಾಯ

ಅರ್ಜುನನು ಪ್ರಶ್ನೆ ಮಾಡುತ್ತಾನೆ: "ಶ್ರೀಕೃಷ್ಣನೇ! ಶಾಸ್ತ್ರದ ವಿಧಿಜ್ಞಾನವಿಲ್ಲದೆ ಬಹಳ ಶ್ರದ್ಧೆಯಿಂದ ಕೂಡಿದವರಾಗಿ ಪಿತೃ, ಪ್ರಪಿತಾಮಹರಿಂದ ವಂಶ ಪರಂಪರಾ ಪ್ರಾಪ್ತವಾದ ಕರ್ಮಗಳನ್ನು ಯಾರು ಅನುಷ್ಠಾನ ಮಾಡುತ್ತಾರೆ, ಅವರಿಗೆ ಯಾವ ಗತಿಯು ಪ್ರಾಪ್ತವಾಗುತ್ತದೆ? ಹಿಂದಿನ ಅಧ್ಯಾಯದ ಕೊನೆ ಶ್ಲೋಕದಲ್ಲಿ ಶಾಸ್ತ್ರದ ವಿಧಿಯನ್ನು ತಿಳಿದು ಕರ್ಮ ಮಾಡಬೇಕೆಂದು ಹೇಳಿದ್ದಿ. ಇವರು ಶಾಸ್ತ್ರದ ವಿಧಿಯನ್ನು ತಿಳಿದಿಲ್ಲ. ಕರ್ಮವನ್ನು ಮಾತ್ರ ಶ್ರದ್ಧೆಯಿಂದ ಮಾಡುತ್ತಾರೆ. ಇಂಥವರಿಗೆ ಗತಿ ಯಾವುದೆಂದು ನನಗೆ ಸಂಶಯ ಬಂದಿದೆ." ಎಂದು ಪ್ರಶ್ನೆ ಮಾಡಿದ್ದಕ್ಕೆ ಶ್ರೀಕೃಷ್ಣ ಪರಮಾತ್ಮನು ಉತ್ತರವನ್ನು ಹೇಳುತ್ತಾನೆ:

"ಎಲೋ ಅರ್ಜುನಾ! ಶ್ರದ್ಧೆಯು ಮೂರು ಪ್ರಕಾರವಾಗಿದೆ. ಸಾತ್ವಿಕ ಶ್ರದ್ಧೆ, ರಾಜಸ ಶ್ರದ್ಧೆ ಮತ್ತು ತಾಮಸ ಶ್ರದ್ಧೆ ಎಂಬುದಾಗಿ ಈ ಮೂರು ಪ್ರಕಾರವಾದ ಶ್ರದ್ಧೆಯು ಜೀವಸ್ವರೂಪವೇ ಆಗಿದೆ. ಹಾಗೆಯೇ ಮನಸ್ಸಿನ ಪರಿಣಾಮವಾದದ್ದು ಇನ್ನೊಂದಿದೆ. ಮನಃಪರಿಣಾಮಭೂತವಾದ ಶ್ರದ್ಧೆಯು ಸ್ವಾಭಾವಿಕ ಶ್ರದ್ಧೆಗೆ ವಿಪರೀತವಾಗಿರುವುದುಂಟು. ಅಂದರೆ ಸ್ವಭಾವತಃ ಸಾತ್ವಿಕನಾದ ಜೀವನಿಗೆ ಸಂಗ-ದೋಷದಿಂದ ಮನಃಪರಿಣಾಮಭೂತವಾದ ರಾಜಸ ತಾಮಸ ಶ್ರದ್ಧೆಗಳು ಬರುವುದುಂಟು. ಸ್ವಭಾವತಃ ರಾಜಸ ತಾಮಸ ಜೀವಿಗಳಿಗೆ ಸಜ್ಜನ ಸಂಸರ್ಗದಿಂದ ಮನಃಪರಿಣಾಮಭೂತವಾದ ಸಾತ್ವಿಕ ಶ್ರದ್ಧೆಯು ಉಂಟು. ಆದ್ದರಿಂದ ಸ್ವಾಭಾ-ವಿಕವಾದ ಶ್ರದ್ಧೆಯನ್ನನುಸರಿಸಿಯೇ ಕರ್ಮಫಲವನ್ನು ನಿರೂಪಣ ಮಾಡಬೇಕಾ-ಗುತ್ತದೆ.

ಸ್ವಭಾವಭೂತವಾದ ಸಾತ್ವಿಕ ಶ್ರದ್ಧೆಯಿಂದ ಕರ್ಮವನ್ನು ಮಾಡಿದವನಿಗೆ ಶಾಸ್ತ್ರದ ವಿಧಿ ಜ್ಞಾನ ಇಲ್ಲದಿದ್ದರೂ ಸಾತ್ವಿಕವಾದ ಫಲವು ದೊರೆಯುತ್ತದೆ. ಆವರು ಶಾಸ್ತ್ರದ ವಿಧಿಯನ್ನು ತಿಳಿದು ಮಾಡಿದರೆ ವಿಶೇಷ ಫಲಪ್ರಾಪ್ತಿಯಾಗುತ್ತದೆ. ಸ್ವಾಭಾವಿಕ ಸಾತ್ವಿಕ ಶ್ರದ್ಧೆಯುಳ್ಳವರು ಶಾಸ್ತ್ರದ ವಿಧಿ ಜ್ಞಾನಕ್ಕೆ ಕ್ರಮದಿಂದ ಪ್ರಯತ್ನವನ್ನು ಮಾಡಿಯೇ ತೀರುತ್ತಾರೆ. ರಾಜಸ ತಾಮಸವಾದ ಸ್ವಾಭಾವಿಕ

ಶ್ರದ್ಧೆಯಿಂದ ಕರ್ಮವನ್ನು ಮಾಡಿದರೆ ರಾಜಸ ತಾಮಸ ಫಲಪ್ರಾಪ್ತಿಯು ಆಗುತ್ತದೆ."

ಇಲ್ಲಿ ವಿಶೇಷಾಂಶ: ಜೀವನು ಶ್ರದ್ಧಾಸ್ವರೂಪನೆಂದು ಹಿಂದೆ ಶ್ರೀಕೃಷ್ಣನು ಹೇಳಿದ್ದಾನೆ. ಶ್ರದ್ಧಾಸ್ವರೂಪನಾದರೂ ಜೀವನು ಶ್ರದ್ಧಾವುಳ್ಳವನೆಂದು ಹೇಳುವುದು ಯುಕ್ತವೇ ಆಗುತ್ತದೆ. ಸೂರ್ಯನು ಪ್ರಕಾಶಿಸುವ ಸ್ವರೂಪನಾದರೂ ಪ್ರಕಾಶ ಉಳ್ಳವನು ಸೂರ್ಯನು ಎಂಬ ವ್ಯವಹಾರದಂತೆ ಈ ವ್ಯವಹಾರವನ್ನು ತಿಳಿಯ-ಬೇಕು.

ಜೀವಸ್ವರೂಪವಾದ ಶ್ರದ್ಧೆಯು ಸಾತ್ವಿಕ ರಾಜಸ ಮತ್ತು ತಾಮಸ ಎಂದು ಮೂರು ಪ್ರಕಾರವುಳ್ಳದ್ದೆಂದು ಶ್ರೀಕೃಷ್ಣನು ಇಲ್ಲಿ ಹೇಳಿದ್ದರಿಂದ ಜೀವರು ಸ್ವಾಭಾ-ವಿಕವಾಗಿ ತ್ರಿವಿಧರು ಎಂದು ಶ್ರೀಮಧ್ವಾಚಾರ್ಯರ ಸಿದ್ಧಾಂತವು ಇಲ್ಲಿ ಸ್ಪಷ್ಟವಾಗಿ ತಿಳಿಯುತ್ತದೆ. ಎಲ್ಲಾ ಜೀವರು ಬ್ರಹ್ಮಸ್ವರೂಪರೇ ಆಗಿದ್ದರೆ, ಸ್ವಾಭಾವಿಕವಾದ ಜೀವ ತ್ರೈವಿಧ್ಯವು ಕೂಡಲಾರದು. ಆದುದರಿಂದ ಜೀವಬ್ರಹ್ಮೈಕ್ಯವು ಶ್ರೀಕೃಷ್ಣನಿಗೆ ಸಮ್ಮತವಲ್ಲವೆಂದು ತಿಳಿಯುತ್ತದೆ.

'ಮನಸ್ಸಿನಲ್ಲಿ ಮಾತ್ರವೇ ಈ ಮೂರು ವಿಧವಾದ ಶ್ರದ್ಧೆಯಿರುವುದು, ಜೀವಸ್ವರೂಪಭೂತವಾದ ಶ್ರದ್ಧೆ ಮೂರು ಪ್ರಕಾರವಾಗಿ ಇಲ್ಲ' ಎಂದು ಶ್ರೀಕೃಷ್ಣನ ವಾಕ್ಯಕ್ಕೆ ಅಭಿಪ್ರಾಯವನ್ನು ಕಲ್ಪಿಸುವುದು ಯುಕ್ತವಲ್ಲ. ಸಾತ್ವಿಕ ಶ್ರದ್ಧೆಯಿಂದ ಕೂಡಿದ ಮನಸ್ಸಿನ ಸಂಸರ್ಗವು ದೇವ ಋಷ್ಯಾದಿಗಳಿಗಿದೆ. ತಾಮಸ ಶ್ರದ್ಧೆಯಿಂದ ಕೂಡಿದ ಮನಸ್ಸು ಅಸುರ ಜೀವರಿಗೆ ಇದೆ. ಒಂದೊಂದು ಜೀವನಿಗೆ ಒಂದೊಂದು ತರಹದ ಮನಸ್ಸಿನ ಸಂಪರ್ಕವಾಗಬೇಕಾದರೆ ಜೀವಸ್ವರೂಪದಲ್ಲಿಯೇ ಒಂದು ವೈಶಿಷ್ಟ್ಯವು ಇರಬೇಕಾಗುತ್ತದೆ. ಸೂಜೀಕಲ್ಲು ಕಬ್ಬಿಣವನ್ನೇ ಎಳೆದುಕೊಳ್ಳುತ್ತದೆ. ಇತರ ಲೋಹಗಳನ್ನು ಆಕರ್ಷಣ ಮಾಡುವುದಿಲ್ಲ. ಆದ್ದರಿಂದ ಆಕರ್ಷಣೆಗೆ ಕಾರಣವಾದ ಒಂದು ವಿಶೇಷವು ಕಬ್ಬಿಣದಲ್ಲಿಯೂ ಸೂಜಿಕಲ್ಲಿನಲ್ಲಿಯೂ ಎರಡರಲ್ಲಿ ಇರಬೇಕಾಗುತ್ತದೆ. ಅದರಂತೆ ಸಾತ್ವಿಕ ಮನಸ್ಸಿನ ಸಂಸರ್ಗವನ್ನು ಯಾವ ಜೀವನು ಪಡೆಯುತ್ತಾನೋ ಆ ಜೀವನಿಗೆ ಒಂದು ವಿಶೇಷವು ಬೇಕು. ಹಾಗೇ ರಾಜಸ ತಾಮಸ ಜೀವರಲ್ಲಿಯೂ ಆಯಾವ ಮನಸ್ಸಿನ ಸಂಸರ್ಗಕ್ಕೋಸ್ಕರ

ಒಂದೊಂದು ವಿಶೇಷವನ್ನು ಕಲ್ಪಿಸಬೇಕಾಗುತ್ತದೆ. ಆದುದರಿಂದ ಜೀವತ್ರೈವಿಧ್ಯವು ಅನಿವಾರ್ಯವು, ಯುಕ್ತಿಯುಕ್ತವು. ಈ ಅರ್ಥವೇ ಶ್ರೀಕೃಷ್ಣಪರಮಾತ್ಮನಿಗೆ ಇಲ್ಲಿ ಸಮ್ಮತವಾಗಿದೆಯೆಂದು ತಿಳಿಯಬೇಕು.

ಶ್ರೀಕೃಷ್ಣಪರಮಾತ್ಮನು ಅರ್ಜುನನಿಗೆ ಹೇಳುತ್ತಾನೆ: "ಸಾತ್ವಿಕರು ವಿಷ್ಣುವನ್ನೂ ಪರಿವಾರತಯಾ ಇತರ ದೇವತೆಗಳನ್ನು ಪೂಜಿಸುತ್ತಾರೆ. ರಾಜಸರು ಯಕ್ಷರನ್ನು ರಾಕ್ಷಸರನ್ನು ಪೂಜಿಸುತ್ತಾರೆ. ತಾಮಸರು ಪ್ರೇತ ಭೂತಗಳನ್ನು ಪೂಜಿ-ಸುತ್ತಾರೆ. ಇವರೆಲ್ಲರು ಪೂಜಿಸುವ ಕಾಲಕ್ಕೆ 'ಇಂದ್ರಾಯ ಸ್ವಾಹಾ' 'ಅಗ್ನಯೇ ಸ್ವಾಹಾ' ಎಂದು ಒಂದೇ ಮಂತ್ರವನ್ನು ಹೇಳಿದರೂ ಅವರವರ ಮನಸ್ಸಿನ ಉದ್ದೇಶಕ್ಕನುಸಾರವಾಗಿ ಅವರವರು ಸ್ವೀಕರಿಸುತ್ತಾರೆ. ಅಂದರೆ ಇಂದ್ರ, ಅಗ್ನಿ, ಬ್ರಹ್ಮ ಇತ್ಯಾದಿ ಹೆಸರುಗಳು ದೇವತೆಗಳಿಗಿದ್ದಂತೆ ಯಕ್ಷ, ರಾಕ್ಷಸ, ಭೂತ, ಪ್ರೇತಗಳಿಗೂ ಇವೆ. ಆದುದರಿಂದ 'ಇಂದ್ರಾಯ ಸ್ವಾಹಾ' ಎಂದು ಹೇಳುವಾಗ ಇಂದ್ರನೊಳಗೆ ಭಾರತೀರಮಣ ಮುಖ್ಯಪ್ರಾಣನೂ, ತದಂತರ್ಗತನಾದ ಲಕ್ಷ್ಮೀನಾರಾಯಣನೂ ಇದ್ದಾನೆಂದು ಅನುಸಂಧಾನ ಮಾಡಿ ಕರ್ಮಮಾಡಿದರೆ ಸರ್ವೋತ್ತಮನಾದ ಪರಮಾತ್ಮನೂ ಪರಿವಾರ ಭೂತರಾದ ದೇವತೆಗಳೂ ಸ್ವೀಕರಿಸುತ್ತಾರೆ. ಇಷ್ಟು ಅನುಸಂಧಾನವಿಲ್ಲದೆ 'ಇಂದ್ರಾಯ ಸ್ವಾಹಾ' ಎಂದಷ್ಟೇ ಹೇಳಿದರೆ ಇಂದ್ರನೆಂದು ಹೆಸರುಳ್ಳ ಯಕ್ಷ ರಾಕ್ಷಸ ಭೂತ ಪ್ರೇತ ಪಿಶಾಚಿಗಳೂ ಸ್ವೀಕರಿಸಬಹುದು. ರಾಜಸ ತಾಮಸ ಶ್ರದ್ಧೆಯಿಂದ ಕರ್ಮ ಮಾಡತಕ್ಕವರಿಗೆ ಯಕ್ಷರ, ರಾಕ್ಷಸರ, ಭೂತಪ್ರೇತಗಳ ಪ್ರಾಪ್ತಿಯಾಗುತ್ತದೆ.

ತಾಮಸರಲ್ಲಿ ಕೆಲವರು ಶಾಸ್ತ್ರವಿಹಿತವಾಗದೆ ಇದ್ದ ತಪಸ್ಸನ್ನು ಮಾಡು-ತ್ತಾರೆ. ಕೆಲವರು ಶಾಸ್ತ್ರವಿಹಿತವಾಗಿದ್ದರೂ ಇತರರಿಗೆ ಪೀಡೆಯನ್ನುಂಟುಮಾಡುತ್ತಾ ಕರ್ಮ ಮಾಡುತ್ತಾರೆ. ಕೆಲವರು ಶಾಸ್ತ್ರವಿಹಿತವಾಗಿದ್ದರೂ ಇತರರಿಗೆ ಪೀಡಾಕರವಾಗದಿದ್ದರೂ ದಂಭ ಅಹಂಕಾರದಿಂದ ಕೂಡಿದವರಾಗಿ ಮಾಡುತ್ತಾರೆ. ಕೆಲವರು ಶಾಸ್ತ್ರವಿಹಿತವಾಗಿದ್ದರೂ, ಇನ್ನೊಬ್ಬರಿಗೆ ಪೀಡಾಕರ ಆಗದಿದ್ದರೂ, ದಂಭ ಅಹಂಕಾರ ಇಲ್ಲದಿದ್ದರೂ, ಪರಮಾತ್ಮನನ್ನು ಲಕ್ಷ್ಮ್ಯಾದಿ ದೇವತೆಗಳನ್ನು

ನೀಚತ್ವೇನ ಅನುಸಂಧಾನ ಮಾಡಿ ತಪಸ್ಸು ಮಾಡುತ್ತಾರೆ. ಇವರೆಲ್ಲರೂ ತಾಮಸರೆಂದೇ ನಿಶ್ಚಯ ಮಾಡು.

ಆಹಾರವು ಕೂಡಾ ಮೂರು ಪ್ರಕಾರ ಇದೆ. ಆಹಾರ ಭೇದದಿಂದಲೂ ಅವರವರ ಸಾತ್ವಿಕತ್ವಾದಿಗಳನ್ನು ತಿಳಿಕೊಳ್ಳಬಹುದು. ಹಾಗೆ ಯಜ್ಞ, ತಪಸ್ಸು, ದಾನ ಇವುಗಳೂ ಮೂರು ಪ್ರಕಾರವಾಗಿವೆ. ಅದನ್ನೆಲ್ಲವನ್ನು ನಿನಗೆ ತಿಳಿಸುತ್ತೇನೆ.

ಆಯುಷ್ಯ, ಮನಃಶುದ್ಧಿ, ದೇಹಶಕ್ತಿ, ಆರೋಗ್ಯ, ಸುಖ ಇವುಗಳಿಗೆ ಕಾರಣವಾದ, ಮಧುರ ರಸದಿಂದ ಕೂಡಿದ, ಹಾಲು ತುಪ್ಪಗಳಿಂದ ಕೂಡಿದ ಆಹಾರವು ಸಾತ್ವಿಕರಿಗೆ ಪ್ರಿಯವಾಗುತ್ತದೆ. ದುಃಖ ಮತ್ತು ರೋಗಗಳಿಗೆ ಕಾರಣವಾದ ಅತಿ ಖಾರ, ಅತಿ ಹುಳಿ, ಅತಿ ಉಪ್ಪು, ಅತ್ಯುಷ್ಣ ಮೊದಲಾದ ಆಹಾರಗಳು ರಾಜಸರಿಗೆ ಇಷ್ಟವಾಗುತ್ತವೆ. ಯಾತಯಾಮವಾದ (ಪಾಕ ಮಾಡಿದ ಮೇಲೆ ಒಂದು ಯಾಮಕಾಲ ದಾಟಿದ ಅನ್ನ) ನೀರಸವಾದ, ದುರ್ಗಂಧ-ಯುಕ್ತವಾದ, ನಿನ್ನೆ ದಿವಸ ಪಾಕಮಾಡಿದ, ಶೂದ್ರಾದಿಗಳು ಊಟ ಮಾಡಿದ ಮೇಲೆ ಉಳಿದ, ಪರಮಾತ್ಮನಿಗೆ ಸಮರ್ಪಣೆ ಮಾಡದೇ ಇದ್ದ ಆಹಾರವು ತಾಮಸರಿಗೆ ಪ್ರಿಯವಾದದ್ದು.

ಇನ್ನು ಯಜ್ಞಗಳಲ್ಲಿರತಕ್ಕ ಮೂರು ಪ್ರಕಾರಗಳನ್ನು ಹೇಳುತ್ತೇನೆ. ಶಾಸ್ತ್ರದ ವಿಧಿಯಲ್ಲಿ ತೋರುವಂತೆ ಫಲಾಪೇಕ್ಷೆಯಿಲ್ಲದೆ ಇದು ನನ್ನ ಕರ್ತವ್ಯ ಕರ್ಮವೆಂದು ತಿಳಿದು ಮಾಡಿದ ಯಜ್ಞವು ಸಾತ್ವಿಕ ಯಜ್ಞವೆಂದು ಹೇಳಿಕೊಳ್ಳಲ್ಪಡುತ್ತದೆ. ಫಲ ಉದ್ದೇಶದಿಂದಾಗಲಿ, ಡಂಭಕ್ಕೋಸ್ಕರವಾಗಲಿ ಮಾಡಿದ ಯಜ್ಞವು ರಾಜಸವೆಂದು ಹೇಳಲ್ಪಡುತ್ತದೆ. ಶಾಸ್ತ್ರದ ವಿಧಿಯನ್ನು ಅತಿಕ್ರಮಿಸಿದ, ಅನ್ನ, ದಾನ, ಮಂತ್ರೋ-ಚ್ಚಾರಣ, ದಕ್ಷಿಣೆ, ಶ್ರದ್ಧೆ ಇಲ್ಲದೆ ಇದ್ದ ಯಜ್ಞವು ತಾಮಸವೆಂದು ಹೇಳಲ್ಪಡುತ್ತದೆ.

ತಪಸ್ಸಿನ ಪ್ರಭೇದವನ್ನು ಹೇಳುತ್ತೇನೆ. ಶಾರೀರ ತಪಸ್ಸು, ವಾಚನಿಕ ತಪಸ್ಸು ಮತ್ತು ಮಾನಸ ತಪಸ್ಸು ಎಂಬುದಾಗಿ ತಪಸ್ಸು ಮೂರು ಪ್ರಕಾರವುಳ್ಳದ್ದು. ಈ ಒಂದೊಂದು ತಪಸ್ಸೂ ಸಾತ್ವಿಕ ರಾಜಸ ಮತ್ತು ತಾಮಸವೆಂದು ಮೂರು ಪ್ರಕಾರವುಳ್ಳದ್ದಾಗಿದೆ.

ಸರ್ವೋತ್ತಮನಾದ ಪರಮಾತ್ಮನ, ಪರಿವಾರ ದೇವತೆಗಳ, ಮಾತಾಪಿತೃಗಳ, ಬ್ರಾಹ್ಮಣರ, ಗುರುಗಳ, ಜ್ಞಾನಿಗಳ ಪೂಜೆಯನ್ನು ಮಾಡಲು ಮೃಜ್ಜಲಗಳಿಂದ ದೇಹ ಶುದ್ಧಿ ಮಾಡಿಕೊಳ್ಳಲು ಶರೀರವು ಉತ್ಸಾಹದಿಂದ ಪ್ರವೃತ್ತವಾಗುವದು, ಬ್ರಹ್ಮಚರ್ಯ (ಎಂದರೆ ಯತಿಗಳು, ಬ್ರಹ್ಮಚಾರಿಗಳು ಸ್ತ್ರೀಯರನ್ನು ಭೋಗ್ಯ ಬುದ್ಧಿಯಿಂದ ನೋಡದೇ ಇರುವದು, ಗೃಹಸ್ಥಾಶ್ರಮಿಗಳು ನಿಷಿದ್ಧ ದೇಶ ಕಾಲಗಳಲ್ಲಿ ಹಾಗೇ ಪರಸ್ತ್ರೀಯರಲ್ಲಿ ಸಂಬಂಧ ಮಾಡದೇ ಇರುವದು), ಶರೀರದಿಂದ ಇನ್ನೊಬ್ಬರಿಗೆ ಪೀಡೆಯು ಆಗದಂತೆ ಮಾಡುವುದು ಇವುಗಳೆಲ್ಲ ಶರೀರ ಸಂಬಂಧಿ ತಪಸ್ಸುಗಳೆಂದು ಹೇಳಿಸಿಕೊಳ್ಳಲ್ಪಡುತ್ತವೆ."

ಇಲ್ಲಿ ವಿಶೇಷಾಂಶ: ದ್ವಿಜರನ್ನು ಪ್ರಾಜ್ಞರನ್ನು ಬೇರೆ ಬೇರೆಯಾಗಿ ಹೇಳಿದ್ದುದರಿಂದ ದ್ವಿಜರಾಗದಿದ್ದವರು ಪ್ರಾಜ್ಞರು ಭಗವದ್ಭಕ್ತರಾಗಿರಲು ಸಂಭವ-ವಿದೆ. ಹಿಂದಿನ ಕಾಲದಲ್ಲಿ ವಿದುರ, ಧರ್ಮವ್ಯಾಧಾದಿಗಳು ಈ ರೀತಿಯಾಗಿ ಪ್ರಾಜ್ಞರಾಗಿದ್ದರು. ಅಂಥವರನ್ನು ಕೂಡ ಯಥಾಯೋಗ್ಯವಾಗಿ ಸತ್ಕಾರ ಮಾಡ-ಬೇಕೆಂದು ಶ್ರೀಕೃಷ್ಣನ ಅಭಿಪ್ರಾಯ.

ಶರೀರದಿಂದ ಇನ್ನೊಬ್ಬರಿಗೆ ಪೀಡೆಯನ್ನು ಉಂಟುಮಾಡಬಾರದೆಂದರೆ ಗೃಹಸ್ಥಾಶ್ರಮದಲ್ಲಿ ಪುತ್ರಭಾರ್ಯಾದಿಗಳಿಗೂ ತಾಡನ ಮಾಡಬಾರದೆಂದು ಅರ್ಥವಾದೀತು. ಆದುದರಿಂದ அದರ ಅಭಿಪ್ರಾಯ ಹೀಗೆ ತಿಳಿಯಬೇಕು. ಪುತ್ರಭಾರ್ಯಾದಿಗಳಿಗೆ ಅಂಗಹಾನಿಯಾಗದಂತೆ, ವೇದನೆಯು ಬಹು ಕಾಲದ್ದು ಆಗದಂತೆ ತಾಡನೆಯನ್ನು ಮಾಡಲು ಗೃಹಸ್ಥಾಶ್ರಮಿಗೆ ಅಧಿಕಾರವಿದೆ. ಗುರುಗಳು ಶಿಷ್ಯನಿಗೆ ಇದೇ ರೀತಿಯಾದ ಶಿಕ್ಷೆಯನ್ನು ಕೊಡಲು ಅರ್ಹರಾಗಿದ್ದಾರೆ. ಪುತ್ರಭಾರ್ಯಾದಿಗಳನ್ನು ಧರ್ಮದಲ್ಲಿ ನಿರತರನ್ನಾಗಿ ಮಾಡುವದು ಗೃಹಸ್ಥಾಶ್ರಮಿ-ಗಳಿಗೆ ಕರ್ತವ್ಯವಾಗಿದೆ.

"ಮನಸ್ಸಿಗೆ ದುಃಖವನ್ನು ಉಂಟುಮಾಡದ, ಸತ್ಯವಾದ ಪ್ರೀತಿಯನ್ನು ಉಂಟುಮಾಡುವ, ಹಿತಕರವಾದ ಮಾತನ್ನು ಹೇಳುವುದು, ವೇದ ಮಂತ್ರಗಳನ್ನು, ಸ್ತೋತ್ರಪಾಠಗಳನ್ನು, ಭಗವನ್ನಾಮೋಚ್ಚಾರಣೆಯನ್ನು ಮಾಡುತ್ತ ಇರುವುದು ವಾಙ್ಮಯ ತಪಸ್ಸೆಂದು ಹೇಳಲ್ಪಡುತ್ತದೆ. ಮನಸ್ಸನ್ನು ವಿಷಯದ ಕಡೆಗೆ ಹೋಗದ

ಹಾಗೆ ಮಾಡಿಕೊಳ್ಳುವುದು ಮನಸ್ಸನ್ನು ಸೌಮ್ಯವಾಗಿ ಇಟ್ಟುಕೊಳ್ಳುವುದು, ಮನ-ಸ್ಸಿಂದ ಶಾಸ್ತ್ರಾರ್ಥವನ್ನು ವಿಚಾರ ಮಾಡುವುದು, ಮನಸ್ಸನ್ನು ದೇವರಲ್ಲಿಡುವುದು, ಮನಸ್ಸಿನಲ್ಲಿ ಒಳ್ಳೆಯ ಅಭಿಪ್ರಾಯವನ್ನು ಮಾಡಿಕೊಂಡಿರುವುದು ಇದೆಲ್ಲ ಮಾನಸ ತಪಸ್ಸೆಂದು ಹೇಳಿಕೊಳ್ಳಲ್ಪಡುತ್ತದೆ.

ಉತ್ತಮ ಶ್ರದ್ಧಾಪೂರ್ವಕವಾಗಿ ಫಲಾಕಾಂಕ್ಷೆಯಿಲ್ಲದೆ ಪರಮಾತ್ಮನಲ್ಲಿ ಸಮರ್ಪಣಪೂರ್ವಕವಾಗಿ ಮಾಡಿದ ಈ ಮೂರುಪ್ರಕಾರವಾದ ತಪಸ್ಸು ಸಾತ್ವಿಕ-ವೆಂದು ಹೇಳಲ್ಪಡುತ್ತದೆ. ಜನರು ಹೊಗಳುವದಕ್ಕೋಸ್ಕರ, ಪ್ರಶಂಸೆಗಳನ್ನು ತನಗೆ ಮಾಡುವುದಕ್ಕೋಸ್ಕರ, ಮನಸ್ಸಿನಲ್ಲಿ ತನ್ನನ್ನು ದೊಡ್ಡವನೆಂದು ಇತರರು ತಿಳಿಯುವುದಕ್ಕೋಸ್ಕರ ಮಾಡಿದ ತಪಸ್ಸು ರಾಜಸವೆಂದು ಹೇಳಲ್ಪಡುತ್ತದೆ. ಇನ್ನೊಬ್ಬರಿಗೆ ಪೀಡೆಯನ್ನುಂಟು ಮಾಡತಕ್ಕ, ಇನ್ನೊಬ್ಬರ ನಾಶವನ್ನೇ ಉದ್ದೇಶಿಸಿ ಮಾಡತಕ್ಕ ಅವಿವೇಕಿಗಳ ತಪಸ್ಸು ತಾಮಸವೆಂದು ಹೇಳಲ್ಪಡುತ್ತದೆ.

ವಿಶೇಷಾಂಶ: ರಾಮಾಯಣ ಕಾಲದಲ್ಲಿ ಶಂಭೂಕನೆಂಬ ಶೂದ್ರನು ತಪಸ್ಸು ಮಾಡಿದಾಗ ಒಬ್ಬ ಬಾಲಕ ಬ್ರಾಹ್ಮಣನು ಮೃತನಾದನು. ಶ್ರೀರಾಮಚಂದ್ರನು ಆ ಶೂದ್ರನನ್ನು ನಾಶ ಮಾಡಿ ಆ ಬಾಲಕನನ್ನು ಬದುಕಿಸಿದನೆಂದು ಕಥೆಯಿದೆ. ಆ ಶೂದ್ರನು ಜಂಘ ಎಂಬ ಹೆಸರಿನ ಅಸುರನಾಗಿದ್ದನು. ಅವನು ಲೋಕಕ್ಷಯ ಆಗಬೇಕು. ತನಗೆ ಮಹೇಶ್ವರ ಪದ ಸಿಗಬೇಕು ಎಂಬ ಉದ್ದೇಶದಿಂದ ತಪಸ್ಸನ್ನು ಮಾಡಿದ್ದನು. ಅದಕ್ಕಾಗಿ ಶ್ರೀರಾಮನು ಆತನನ್ನು ಸಂಹರಿಸಿದನು. ಅಂಥವರ ತಪಸ್ಸು ತಾಮಸವೆಂದು ಹೇಳಲ್ಪಡುತ್ತದೆ. ಅದರಿಂದ ಲೋಕಾರಿಷ್ಟವಾಗುತ್ತದೆ. ಇದೇ ಅಭಿಪ್ರಾಯವನ್ನು ಶ್ರೀಕೃಷ್ಣನು ಇಲ್ಲಿ ಹೇಳಿದ್ದು. (ಇಪ್ಪತ್ತಾರನೆ ದಿನದ ಉಪನ್ಯಾಸವು ಮುಗಿಯಿತು.)

***

ಶ್ರೀಕೃಷ್ಣ ಪರಮಾತ್ಮನು ಕ್ರಮ ಪ್ರಾಪ್ತವಾದ ದಾನ ಭೇದವನ್ನು ಹೇಳುತ್ತಾನೆ: "ದಾನ ಮಾಡುವುದು ನನ್ನ ಕರ್ತವ್ಯವಾಗಿದೆ ಎಂದು ತಿಳಿದು

ಫಲಾಪೇಕ್ಷೆಯಿಲ್ಲದೆ ನನಗೆ ಇವನು ಉಪಕಾರ ಮಾಡುತ್ತಾನೆಂಬ ಬುದ್ಧಿಯನ್ನು ಬಿಟ್ಟು ಸತ್ಪಾತ್ರನಲ್ಲಿ, ಕುರುಕ್ಷೇತ್ರಾದಿ ಪುಣ್ಯದೇಶದಲ್ಲಿ, ಸೂರ್ಯಗ್ರಹಣಾದಿ ಪುಣ್ಯ ಕಾಲದಲ್ಲಿ ಕೊಡತಕ್ಕ ದಾನವು ಸಾತ್ವಿಕ ದಾನವೆಂದು ಜ್ಞಾನಿಗಳಿಂದ ಹೇಳಲ್ಪಡುತ್ತದೆ."

ಅಪಾತ್ರದಲ್ಲಿ ದಾನ ಮಾಡಿದರೆ ದರಿದ್ರನಾಗುವನು. ಸತ್ಪಾತ್ರನಲ್ಲಿ ದಾನ ಮಾಡಿದರೆ ಆ ಪಾತ್ರನು ದಾನ ಮಾಡತಕ್ಕವನನ್ನು ನರಕಾದಿ ಭಯದಿಂದ ರಕ್ಷಿಸುತ್ತಾನೆ. ಸತ್ಪಾತ್ರನು ಸಿಕ್ಕಿದಾಗ ದೇಶಕಾಲಗಳು ಉತ್ತಮವಾಗಿಲ್ಲವೆಂದು ದಾನ ಮಾಡದೆ ಇರಬಾರದು. ಸತ್ಪಾತ್ರ ಸಿಕ್ಕಿದ ಸಮಯವೇ ಪುಣ್ಯಕಾಲವೆಂದು, ಸತ್ಪಾತ್ರ ಇದ್ದ ಸ್ಥಳವೇ ಪುಣ್ಯಭೂಮಿಯೆಂದು ತಿಳಿದು ದಾನ ಮಾಡಬೇಕು.

ವಿಶೇಷಾಂಶ: ಉತ್ತುಂಕನೆಂಬ ಋಷಿಪುತ್ರನು ಗುರುಕುಲ ವಾಸ ಮಾಡಿ ಕೊನೆಗೆ ದಕ್ಷಿಣೆಯನ್ನು ಕೊಡಬೇಕೆಂದು ಸಂಕಲ್ಪಿಸಿ 'ಗುರುಗಳಿಗೆ ಇಷ್ಟವಾದದ್ದು ಯಾವುದು? ಎಂದು ಪ್ರಶ್ನೆ ಮಾಡುತ್ತಾನೆ. ಆಗ ಗುರುಪತ್ನಿಯ ಅಭಿಪ್ರಾಯದ ಮೇರೆಗೆ ಪೌಷ್ಯರಾಜನ ಹೆಂಡತಿಯ ಉತ್ತಮ ಕುಂಡಲಗಳನ್ನು ತಂದು ಕೊಡಬೇಕೆಂದು ಆ ಕುಂಡಲವನ್ನು ಧರಿಸಿಕೊಂಡು ಪುಣ್ಯ ದಿವಸದಲ್ಲಿ ಬ್ರಾಹ್ಮಣರಿಗೆ ಪರಿವೇಷಣ ಮಾಡಬೇಕೆಂದು ತಿಳಿದು ಅದನ್ನುದ್ದೇಶಿಸಿ ಪೌಷ್ಯರಾಜನ ಮನೆಗೆ ಹೊರಟನು.

ಮಧ್ಯದಾರಿಯಲ್ಲಿ ಇಂದ್ರದೇವರು ವೃಷಭಾರೂಢರಾಗಿ ಗೋಮಯವನ್ನು ತಿನ್ನು ಎಂದು ನಿರ್ಬಂಧ ಮಾಡಿ ಗೋಮಯವನ್ನು ಉತ್ತುಂಕನಿಂದ ತಿನಿಸಿದರು. ಉತ್ತುಂಕನು ಅದನ್ನು ತಿಂದು ಪೌಷ್ಯರಾಜನ ಮನೆಗೆ ಹೋಗಿ ರಾಜನ ಭೇಟಿ ಮಾಡಿ ಕುಂಡಲಗಳನ್ನು ಬೇಡಿದನು. ಅಂತಃಪುರದಲ್ಲಿ ವಾಸ ಮಾಡುತ್ತಿರುವ ನನ್ನ ಪತ್ನಿಯನ್ನು ಕೇಳಿರಿ ಎಂದು ರಾಜನು ಪ್ರತ್ಯುತ್ತರವನ್ನು ಕೊಟ್ಟನು. ಆ ಪ್ರಕಾರ ಉತ್ತುಂಕ ಋಷಿಗಳು ಅಂತಃಪುರದಲ್ಲಿ ಪ್ರವೇಶ ಮಾಡಿದಾಗ ರಾಜಪತ್ನಿಯರ ದರ್ಶನವೇ ಆಗಲಿಲ್ಲ. ಋಷಿಗಳು ವಾಪಸ್ಸು ಬಂದರು. ರಾಜನಲ್ಲಿ ಸಿಟ್ಟಿಗೆದ್ದು ಈ ರೀತಿ ಸುಳ್ಳು ಯಾಕೆ ಹೇಳಿದಿ? ನಿನ್ನ ಪತ್ನಿಯು ಅಂತಃಪುರದಲ್ಲಿಲ್ಲವೆಂದು ಹೇಳಿದರು.

ರಾಜನು ಸ್ವಲ್ಪ ಹೊತ್ತು ವಿಚಾರ ಮಾಡಿ 'ಋಷಿಗಳೇ! ಅಶುಚಿಯಾಗಿದ್ದವರಿಗೆ ಮಹಾ ಪಾತಿವ್ರತ್ಯ ಧರ್ಮದಲಿರತಕ್ಕ ನನ್ನ ಪತ್ನಿಯು ಅಂತಃಪುರದಲ್ಲಿ ಇದ್ದರೂ ದೃಷ್ಟಿವಿಷಯಳಾಗದೇ ಇರುತ್ತಾಳೆ. ಪಾತಿವ್ರತ್ಯ ಧರ್ಮದಿಂದ ಅಂಥ ಶಕ್ತಿಯನ್ನು ಪಡೆದಿದ್ದಾಳೆ. ನೀವು ಏನಾದರೂ ಅಶುಚಿ-ಯಾಗಿದ್ದಿರೋ ಎಂದು ವಿಚಾರ ಮಾಡಿರಿ' ಎಂದು ರಾಜನು ಹೇಳಿದಾಗ ಉತ್ತುಂಕರಿಗೆ ಸ್ಮರಣೆ ಬಂತು. ಗೋಮಯವನ್ನು ತಿಂದು ಕೈಕಾಲು ತೊಳೆಯದೆ ಗಂಡೂಷ, ಆಚಮನಗಳನ್ನು ಮಾಡದೆ ತಾನು ಬಂದಿದ್ದೆನೆಂಬುದು ಸ್ಮರಣೆಗೆ ಬಂತು. ಅನಂತರದಲ್ಲಿ ಆ ಪ್ರಕಾರದಲ್ಲಿ ಶುಚಿತ್ವವನ್ನು ಸಂಪಾದಿಸಿ ಪುನಃ ಅಂತಃಪುರವನ್ನು ಪ್ರವೇಶಿಸಿದರು.

ಆವಾಗ ರಾಜಪತ್ನಿಯು ಕಂಡಳು. ಅವಳು ಪ್ರತ್ಯುತ್ಥಾನ, ಅಭಿವಾದನ-ಗಳಿಂದ ಋಷಿಗಳನ್ನು ಸತ್ಕರಿಸಿದಳು. ಉತ್ತುಂಕನು ಅವಳಲ್ಲಿ ಕುಂಡಲಗಳನ್ನು ಬೇಡಿದನು. ತಕ್ಷಕನು ಈ ಕುಂಡಲಗಳನ್ನು ಪ್ರತೀಕ್ಷಿಸುತ್ತಿದ್ದಾನೆ. ಜಾಗರೂಕ-ರಾಗಿರಬೇಕು ಎಂದು ಹೇಳಿ ಕುಂಡಲಗಳನ್ನು ಕೊಟ್ಟಳು. ತಕ್ಷಕನು ನನ್ನಿಂದ ಅಪಹರಿಸಲು ಸಮರ್ಥನಾಗುವದಿಲ್ಲವೆಂದು ಹೇಳಿ ಋಷಿಗಳು ಅಲ್ಲಿಂದ ಹೊರಟರು.

ರಾಜನು ಉತ್ತುಂಕನೆಂಬ ಸತ್ಪಾತ್ರನು ಸಿಕ್ಕಿದ ದಿವಸವೇ ಪುಣ್ಯ-ತಿಥಿಯೆಂದು ಶ್ರಾದ್ಧವನ್ನು ಮಾಡಿ ಋಷಿಗಳಿಗೆ ಅನ್ನದಾನವನ್ನು ಮಾಡಿದನು. ಆ ಅನ್ನವು ಶೀತಲವಾಗಿಯೂ ತಲೆಕೂದಲುಗಳಿಂದ ಕೂಡಿದ್ದಾಗಿಯೂ ಇದ್ದದ್ದನ್ನು ನೋಡಿ ಇಂಥ ಅನ್ನವನ್ನು ದಾನಮಾಡಿದ ನಿನಗೆ ಅಂಧತ್ವವು ಪ್ರಾಪ್ತಿಯಾಗಲಿ ಎಂದು ಋಷಿಗಳು ಶಾಪಕೊಟ್ಟರು. ನನ್ನ ಅನ್ನವನ್ನು ದೂಷಿಸಿದ ಪ್ರಯುಕ್ತ ನೀವು ಪುತ್ರರಿಲ್ಲದವರಾಗಲಿ ಎಂದು ರಾಜನು ಶಾಪಕೊಟ್ಟನು. 'ಇದನ್ನು ಪರೀಕ್ಷಿಸಬೇಕು, ನಾನು ಸುಳ್ಳು ಹೇಳಲಿಲ್ಲ, ಈ ಅನ್ನವು ಅಶುಚಿಯಾಗಿದೆ' ಎಂದು ಋಷಿಗಳು ಹೇಳಿದಾಗ ರಾಜನು ಅದನ್ನು ನೋಡಿ ಪಶ್ಚಾತ್ತಾಪವುಳ್ಳವನಾಗಿ ತನ್ನ ಅಪರಾಧವನ್ನು ಕ್ಷಮಿಸಬೇಕು ಎಂದು ಪ್ರಾರ್ಥಿಸಿ ಅವರನ್ನು ಪ್ರಸನ್ನೀಕರಿಸಿ ತನಗೆ ಕೊಟ್ಟ ಶಾಪವನ್ನು ಫಲಕಾರಿಯಾಗದಂತೆ ಮಾಡಬೇಕು ಎಂದು ಪ್ರಾರ್ಥನೆ

ಮಾಡಿದನು. ಬ್ರಾಹ್ಮಣರ ವಚನವು ಕಠೋರವಾಗಿದ್ದರೂ ಮನಸ್ಸು ಮೃದುವಾಗಿರುವದರಿಂದ ಆ ಋಷಿಗಳು ಒಮ್ಮೆ ನೀನು ಅಂಧನಾದರೂ ಪುನಃ ನೀನು ಕಣ್ಣುಳ್ಳವನಾಗುತ್ತಿ ಎಂದು ಅನುಗ್ರಹಿಸಿದರು. ತನಗೆ ಕೊಟ್ಟ ಅನಪತ್ಯತ್ವ ಶಾಪವನ್ನು ತಿರುಗಿ ತೆಗೆದುಕೊಳ್ಳಬೇಕೆಂದು ಉತ್ತುಂಕನು ಹೇಳಿದರೂ ಕ್ಷತ್ರಿಯರಾದ ನಮಗೆ ಒಮ್ಮೆ ಹೇಳಿದ ಮಾತನ್ನು ವಾಪಸ್ಸು ತೆಗೆದುಕೊಳ್ಳಲಿಕ್ಕೆ ಆಗುವದಿಲ್ಲ ಎಂದು ರಾಜನು ಹೇಳಿದನು. ಉತ್ತುಂಕರು ಸುಮ್ಮನೆ ನೀನು ಶಾಪ ಕೊಟ್ಟದ್ದರಿಂದ ನಿನ್ನ ಶಾಪವು ವ್ಯರ್ಥವೇ ಆಗುತ್ತದೆ. ನನಗೇನು ಭಯವಿಲ್ಲವೆಂದು ಹೇಳಿ ಅಲ್ಲಿಂದ ತೆರಳಿದರು.

ದಾರಿಯಲ್ಲಿ ಹೋಗುವಾಗ ಮಧ್ಯದಾರಿಯಲ್ಲಿ ತಕ್ಷಕನು ಬೌದ್ಧ ಸನ್ಯಾಸಿಯಾಗಿ ಒಮ್ಮೆ ಕಾಣುವಂತೆಯೂ ಮತ್ತೊಮ್ಮೆ ಕಾಣಿಸದಂತೆಯೂ ಬರುತ್ತಿರುವಾಗ ಉತ್ತುಂಕನು ಮೂತ್ರಶಂಕೆಗೋಸ್ಕರವಾಗಿ ಕುಂಡಲಗಳನ್ನು ಕೆಳಗಿಟ್ಟು ಹೋದನು. ಅಷ್ಟರಲ್ಲಿ ಬೌದ್ಧಸನ್ಯಾಸಿರೂಪದಲ್ಲಿದ್ದ ತಕ್ಷಕನು ಆ ಕುಂಡಲವನ್ನು ಹಿಡಿದುಕೊಂಡು ಭೂಮಿಯ ಬಿಲಮಾರ್ಗದಿಂದ ಪಾತಾಳಕ್ಕೆ ಹೋಗಿ ಸೇರಿದನು. ಉತ್ತುಂಕನು ತಾನು ಪಾತಾಳಕ್ಕೆ ಹೋಗುವದಕ್ಕೋಸ್ಕರ ತನ್ನ ಕೈಯಲ್ಲಿರತಕ್ಕ ದಂಡದಿಂದ ಭೂಮಿಯಲ್ಲಿ ಬಿಲ ಮಾಡುತ್ತಿರುವಾಗ ಅದು ಅವರಿಗೆ ಅಶಕ್ಯವಾಯಿತು. ಅದನ್ನು ತಿಳಿದು ಇಂದ್ರ ದೇವರು ವಜ್ರಾಯುಧಕ್ಕೆ ಆಜ್ಞಾ ಮಾಡಿದರು. ವಜ್ರಾಯುಧವು ದಂಡದಲ್ಲಿ ಪ್ರವೇಶಮಾಡಿತು. ಆ ದಂಡದಿಂದ ಅನಾಯಾಸವಾಗಿ ಬಿಲವಾಯಿತು. ಅ ಬಿಲದಿಂದ ಉತ್ತುಂಕನು ಪಾತಾಳಕ್ಕೆ ಹೊರಟನು.

ಅಲ್ಲಿ ಮಹಾವೈಭವಪೂರ್ಣವಾದ ನಾಗಲೋಕವನ್ನು ನೋಡಿದನು. ತಕ್ಷಕಾದಿ ಸರ್ಪಗಳನ್ನು ಅನೇಕ ರೀತಿಯಿಂದ ಸ್ತೋತ್ರ ಮಾಡಿದನು. ಆದರೆ ಅವನಿಗೆ ಕುಂಡಲಗಳು ದೊರೆಯಲಿಲ್ಲ. ಅಲ್ಲಿಯೇ ಸ್ವಲ್ಪದೂರದಲ್ಲಿ ಇಬ್ಬರು ಸ್ತ್ರೀಯರು ಕಪ್ಪು, ಬಿಳಿ ಎರಡು ನೂಲುಗಳಿಂದ ವಸ್ತ್ರ ಮಾಡತಕ್ಕದ್ದನ್ನು, ಹನ್ನೆರಡು ಅರಗಳುಳ್ಳ ಚಕ್ರವನ್ನು, ಆರು ಕುಮಾರರನ್ನು, ಒಬ್ಬ ಪುರುಷನನ್ನು, ಒಂದು ಕುದುರೆಯನ್ನು ನೋಡಿದನು. ಅಲ್ಲಿ ಬಹಳವಾಗಿ ಅವರನ್ನು ಸ್ತೋತ್ರಮಾಡಿದನು.

ಆವಾಗ ಅಲ್ಲಿರತಕ್ಕ ಪುರುಷನು ಈ ಕುದುರೆಯ ಗುದದ್ವಾರದಲ್ಲಿ ಬಾಯಿಯಿಂದ ಫೂತ್ಕಾರ ಮಾಡು ಎಂದು ಹೇಳಿದನು. ಆಗ ಅಗ್ನಿಕಿಡಿಗಳೂ ಬಹಳವಾದ ಹೊಗೆಯೂ ಎದ್ದಿತು. ಆ ಹೊಗೆಯಿಂದಾಗಿ ಆ ಸರ್ಪಗಳಿಗೆ ವಾಸಮಾಡಲು ಅಶಕ್ಯವಾಯಿತು. ಉತ್ಪಾತವೆಂದು ತಿಳಿದು ಉತ್ತುಂಕನಿಗೆ ಆ ಕುಂಡಲಗಳನ್ನು ನಾಗರುಗಳು ಕೊಟ್ಟರು.

ಬಹುದೂರದ ತನಕ ಪುಣ್ಯ ದಿವಸದ ಒಳಗೆ ಗುರುಗಳ ಗೃಹಕ್ಕೆ ನಾನು ಹೇಗೆ ಹೋಗಿ ತಲುಪಲಿ ಎಂದು ಉತ್ತುಂಕನು ಚಿಂತಿಸುತ್ತಿದ್ದಾಗ ಪುರುಷನ ಆಜ್ಞೆಯಿಂದ ಆ ಅಶ್ವನಲ್ಲಿ ಆರೂಢನಾಗಿ ಕ್ಷಣಮಾತ್ರದಲ್ಲಿ ಗುರುಗೃಹಕ್ಕೆ ಬಂದು ಸೇರಿದನು. ಆ ಕುಂಡಲವನ್ನು ಗುರುಪತ್ನಿಗೆ ಸಮರ್ಪಣ ಮಾಡಿದಾಗ ಗುರುಗಳು, ಗುರುಪತ್ನಿಯರು ಬಹಳ ಸಂತೋಷಪಟ್ಟರು.

ಉತ್ತುಂಕನು 'ದಾರಿಯಲ್ಲಿ ಸಿಕ್ಕಿದ ವೃಷಭಾರೂಢ ಪುರುಷನು ಯಾರು? ಪಾತಾಳಲೋಕದಲ್ಲಿ ಇಬ್ಬರು ಸ್ತ್ರೀಯರು, ಎರಡು ಕರಿಬಿಳಿ ನೂಲುಗಳ ಚಕ್ರವು, ಕುಮಾರರುಗಳು, ಪುರುಷನು, ಕುದುರೆಯು ಇವುಗಳೆಲ್ಲ ನನ್ನಿಂದ ನೋಡ-ಲ್ಪಟ್ಟಿದ್ದಾವೆ. ಇವುಗಳೆಲ್ಲ ಯಾರು?' ಎಂದು ಕೇಳಿದನು. ಅವಾಗ ಗುರುಗಳು ವೃಷಭಾರೂಢನಾದ ಪುರುಷನು ಇಂದ್ರನೆಂದು, ನೀನು ಪಾತಾಳ ಲೋಕಕ್ಕೆ ಹೋದಾಗ ಸರ್ಪಗಳ ವಿಷಬಾಧೆ ನಿನಗಾಗಬಾರದೆಂದು ಅಮೃತವನ್ನು ಗೋಮಯದ ನೆಪದಿಂದ ತಿನಿಸಿದ್ದಾರೆಂದೂ, ಪಾತಾಳದಲ್ಲಿದ್ದ ಎರಡು ಕರಿ ಬಿಳಿ ನೂಲುಗಳು ರಾತ್ರಿಹಗಲೂ ಎಂದು, ಇಬ್ಬರು ಸ್ತ್ರೀಯರು ಧಾತಾ ವಿಧಾತಾ ಎಂಬ ಇಬ್ಬರೆಂದು, ಹನ್ನೆರಡು ಅರವುಳ್ಳ ಚಕ್ರವು ಸಂವತ್ಸರವೆಂದು, ಆರು ಕುಮಾರರು ಷಡೃತುಗಳೆಂದು, ಆ ಕುದುರೆಯು ಅಗ್ನಿಯೆಂದು, ಆ ಪುರುಷನು ಪ್ರಜಾಪತಿಯೆಂದು ಉಪದೇಶ ಮಾಡಿದರು.

ಈ ಕಥೆಯಿಂದ ತಿಳಿಯತಕ್ಕ ಅಂಶ ಬಹಳವಿದೆ. ಸತ್ಪಾತ್ರ ಸಿಕ್ಕಿದ ದಿವಸವೇ ಪುಣ್ಯತಿಥಿಯಾದದ್ದರಿಂದ ದಾನ ಮಾಡಬೇಕೆಂದು, ಅಶುಚಿಯಾದ ಅನ್ನದಾನ ಮಾಡತಕ್ಕವನು ಅಂಧನಾಗುತ್ತಾನೆಂದು, ಸುಮ್ಮನೆ ಶಾಪ ಕೊಟ್ಟದ್ದು ವ್ಯರ್ಥವಾಗುತ್ತದೆಂದು, ಪತಿವ್ರತಾ ಸ್ತ್ರೀಯರು ಪಾತಿವ್ರತ್ಯಧರ್ಮದಿಂದ ಅದೃಶ್ಯತ್ವ

ಶಕ್ತಿ ಪಡೆಯುತ್ತಾರೆಂದು, ಆಹಾರ ತೆಗೆದುಕೊಂಡ ಮೇಲೆ ಕೈಕಾಲುಗಳನ್ನು ತೊಳೆದುಕೊಂಡು ಗಂಡೂಷ ಮಾಡಿ ಆಚಮನ ಮಾಡಿದರೇನೇ ಶುಚಿತ್ವವೆಂದು, ಗುರುಕುಲದಲ್ಲಿ ವಾಸಮಾಡಿ ಗುರುಗಳ ಸೇವೆಯಿಂದ ಗುರುಗಳ ಪೂರ್ಣ ಅನುಗ್ರಹಕ್ಕೆ ಪಾತ್ರನಾದ ಶಿಷ್ಯನಿಗೆ ಇಂದ್ರಾದಿ ದೇವತೆಗಳೆಲ್ಲರೂ ರಕ್ಷಕರಾಗಿರುತ್ತಾರೆಂತಲೂ ತಿಳಿಯಬೇಕು.

ಸತ್ಪಾತ್ರರೆಂದರೆ ವಿಷ್ಣುಭಕ್ತನಾಗಿರಬೇಕು. ವೇದಾಧ್ಯಯನದಿಂದ ಬ್ರಹ್ಮಜ್ಞಾನ ಸಂಪಾದಿಸಿರಬೇಕು. ಸ್ವಧರ್ಮನಿರತನಾಗಿರಬೇಕು. ಅವೈಷ್ಣವರಿಗೆ ಜಲಬಿಂದುವನ್ನೂ, ಒಂದು ಮುಷ್ಟಿ ಅಕ್ಕಿಯನ್ನೂ ಸಹ ಕೊಡಬಾರದು ಎಂದು ಶಾಸ್ತ್ರವಿದೆ. ಆದುದರಿಂದಲೇ ಹಿಂದೆ ಧೃತರಾಷ್ಟ್ರನು ವಿರಕ್ತನಾಗಿ ಅರಣ್ಯಕ್ಕೆ ತಪಸ್ಸಿಗೋಸ್ಕರ ಹೋಗುವಾಗ ಶ್ರಾದ್ಧ ಮಾಡುವದಕ್ಕೋಸ್ಕರ ವಿತ್ತವನ್ನು ವಿದುರನ ಮೂಲಕ ಧರ್ಮರಾಜನಲ್ಲಿ ಬೇಡಿದಾಗ ಧರ್ಮರಾಜನು ಕೋಶಾಧಿಕಾರಿಯಾದ ಭೀಮಸೇನನನ್ನು ಕೇಳಿದನು. ಭೀಮಸೇನನು ವಿತ್ತವನ್ನು ಕೊಡಲಿಲ್ಲ. ವಿತ್ತವನ್ನು ಕೊಟ್ಟರೆ ಧೃತರಾಷ್ಟ್ರನು ತನ್ನ ಮಕ್ಕಳಾದ ವಿಷ್ಣು-ವೈಷ್ಣವದ್ರೋಹಿಗಳಾದ ದುರ್ಯೋಧನಾದಿಗಳಿಗೂ ಶ್ರಾದ್ಧವನ್ನು ಮಾಡುತ್ತಾನೆ. ಆದುದರಿಂದ ನಾನು ಶ್ರಾದ್ಧಕ್ಕೋಸ್ಕರ ವಿತ್ತವನ್ನು ಕೊಡಲಾರೆ ಎಂದು ಹೇಳಿದನು. ಅವಾಗ ಧರ್ಮ-ರಾಜನು, ಅರ್ಜುನನೊಂದಿಗೆ ಏನು ಮಾಡುವುದೆಂದು ವಿಚಾರಮಾಡಿ ಕೋಶದ ಹೊರಗೆ ದಾನಭೋಗಾದಿಗಳಿಗೋಸ್ಕರ ಪ್ರತ್ಯೇಕವಾಗಿ ತಮ್ಮ ಸ್ವಾಧೀನದಲ್ಲಿ ತೆಗೆದಿಟ್ಟಿರತಕ್ಕದ್ದನ್ನು ಧೃತರಾಷ್ಟ್ರನಿಗೆ ಕೊಟ್ಟನು. ಮುಖ್ಯಭಾಗವತಧರ್ಮದಲ್ಲಿ ಇರತಕ್ಕ ಭೀಮಸೇನನ ಮೇಲೆ ತಂದೆಯು ಸಿಟ್ಟು ಮಾಡಬಾರದೆಂದು ವಿದುರನ ಮೂಲಕ ಅರ್ಜುನ, ಧರ್ಮರಾಜನು ಇವರಿಬ್ಬರು ಹೇಳಿ ಕಳುಹಿಸಿದರು. ಆವಾಗ ಧೃತರಾಷ್ಟ್ರನು ಸಿಟ್ಟು ಮಾಡಲಿಲ್ಲವೆಂದು ಮಹಾಭಾರತದಲ್ಲಿ ಕಥೆಯಿದೆ.

ಈ ಕಥೆಯಿಂದ ತಿಳಿಯತಕ್ಕ ವಿಷಯವೇನೆಂದರೆ ವಿಷ್ಣುದ್ರೋಹಿ-ಗಳಿಗೋಸ್ಕರವಾಗಿ ಸ್ವಲ್ಪವನ್ನು ಕೊಡಬಾರದು ಎಂಬುದು ಭಾಗವತದ ಮುಖ್ಯಧರ್ಮ. 'ಯುಧಿಷ್ಠಿರ ಅರ್ಜುನಾದಿಗಳು ಧೃತರಾಷ್ಟ್ರನಿಗೆ ದ್ರವ್ಯವನ್ನು ಹೇಗೆ ಕೊಟ್ಟರು?' ಎಂಬ ಪ್ರಶ್ನೆಯು ಬರಬಹುದು. ಆದರೆ ಇದಕ್ಕೆ ಸಪ್ತಮಸ್ಕಂಧ

ಭಾಗವತದಲ್ಲಿ ಪ್ರಹ್ಲಾದನಿಗೆ ನರಸಿಂಹದೇವರು ಹೇಳಿದ ಸಮಾಧಾನವನ್ನು ವಿಚಾರಮಾಡಿದರೆ ಗೊತ್ತಾಗುತ್ತದೆ. 'ನನ್ನ ತಂದೆಯಾದ ಹಿರಣ್ಯಕಶಿಪು ವಿಷ್ಣು-ದ್ರೋಹಿಯಾದ್ದರಿಂದ ಅವನ ಅಂತ್ಯೇಷ್ಟಿಯನ್ನು ನಾನು ಹೇಗೆ ಮಾಡಲಿ?' ವಿಷ್ಣುದ್ರೋಹಿಗಳಿಗೆ ಜಲಬಿಂದುವನ್ನು, ಮುಷ್ಟಿ ತಂಡುಲವನ್ನು ಕೊಡಬಾರದೆಂದು ಶಾಸ್ತ್ರವಿದೆಯಷ್ಟೆ?' ಎಂದು ಪ್ರಹ್ಲಾದನು ಪ್ರಶ್ನೆ ಮಾಡಿದ್ದಕ್ಕೆ ನರಸಿಂಹದೇವರು ಆ ಶಾಸ್ತ್ರದ ವಚನವು ಬಂಧುಗಳಾಗದಿದ್ದವರನ್ನು ಕುರಿತಾಗಿದೆ. ಆದುದರಿಂದ ನಿನ್ನ ತಂದೆಗೆ ಉತ್ತರಕ್ರಿಯೆಯನ್ನು ಮಾಡು ಎಂದು ಸಮಾಧಾನವನ್ನು ಮಾಡಿದನು.

ಆದ್ದರಿಂದ ಅದೇ ದೃಷ್ಟಿಯಿಂದ ಯುಧಿಷ್ಠಿರಾದಿ ಅರ್ಜುನರು ಬಂಧುತ್ವ ನಿಮಿತ್ತದಿಂದಲೇ ಶ್ರಾದ್ಧಕೋಸ್ಕರವಾಗಿ ದ್ರವ್ಯದಾನ ಮಾಡಿದರೆಂದು ತಿಳಿಯಬೇಕು. ಭೀಮಸೇನನು ಏಕಾಂತಭಕ್ತನಾಗಿ ಮುಖ್ಯ ಭಾಗವತ ಧರ್ಮನಿರತರಾದ್ದರಿಂದ ಬಂಧುಗಳಾಗಿದ್ದವರು ಸಹ ವಿಷ್ಣುದ್ರೋಹಿಗಳಾಗಿದ್ದರೆ ಅವರಿಗೆ ಏನನ್ನು ಕೊಡ-ಲಾಗದು. ಅಂಥಾ ಮುಖ್ಯಭಾಗವತ ಧರ್ಮದಲ್ಲಿ ಅಧಿಕಾರ ಇಲ್ಲದವರು ಬಂಧುಗಳ ಮಟ್ಟಿಗೆ ವಿಷ್ಣುದ್ರೋಹಿಗಳಾಗಿದ್ದರೂ ಕೊಟ್ಟರೆ ಬಾಧಕವಿಲ್ಲ ಎಂದು ಪರಸ್ಪರ ವಿರೋಧವನ್ನು ತಿಳಿದುಕೊಳ್ಳಬೇಕು.

'ಅನ್ನ ಮತ್ತು ಜಲ ಇದರ ದಾನಕ್ಕೆ ಪಾತ್ರಾಪಾತ್ರ ವಿವೇಕವು, ಜಾತಿ ವಿವೇಕವು ಸಹ ಬೇಕಾಗಿಲ್ಲ. ಹಿರಣ್ಯಾದಿ ದಾನಗಳಿಗೆ ಮಾತ್ರವೇ ಈ ಪಾತ್ರದ ವಿಚಾರ' ಎಂದು ಶಾಸ್ತ್ರದಲ್ಲಿ ತೋರುತ್ತದೆ. ಕೆಲವು ಶಾಸ್ತ್ರದಲ್ಲಿ ಅನ್ನದಾನಕ್ಕೂ ಸಹ ಸತ್ಪಾತ್ರವೇ ಆಗಬೇಕೆಂಬುದು ಕಾಣುತ್ತದೆ. ಈ ವಿರೋಧವನ್ನು ಬೇರೆ ಬೇರೆ ರೀತಿಯಿಂದ ಪರಿಹರಿಸಲೇಬೇಕು. ಶ್ರಾದ್ಧದಿನದಲ್ಲಿ ಅಪಾತ್ರರಿಗೆ ಅನ್ನವನ್ನು ಜಲವನ್ನು ದಾನ ಮಾಡಬಾರದೆಂದು, ಇತರ ವಿಶೇಷ ಸಮಾರಂಭಗಳಲ್ಲಿ ಅನ್ನ, ಜಲದಾನಗಳಿಗೆ ಪಾತ್ರಾಪಾತ್ರ ವಿಚಾರ ಮಾಡುವುದು ಅನಾವಶ್ಯಕವೆಂದು ಒಂದು ರೀತಿಯಿಂದ ವಿರೋಧ ಪರಿಹಾರ ಮಾಡುವದು. ಭೀಮಸೇನನಂತಹ ಮುಖ್ಯ ಭಾಗವತ ಧರ್ಮ ನಿರತರಿಗೆ ಮಾತ್ರವೇ ಯಾವಾಗಲೂ ಅನ್ನ ಜಲದಾನಕ್ಕೂ ಸಹ ಪಾತ್ರಾಪಾತ್ರ ವಿಚಾರವು ಮುಖ್ಯವಾಗಿರುತ್ತದೆ. ಇತರ ಅಧಿಕಾರಿಗಳಿಗೆ

ಶ್ರಾದ್ಧವ್ಯತಿರಿಕ್ತ ಸಮಯದಲ್ಲಿ ಅನ್ನ ಜಲದಾನಗಳಿಗೆ ಪಾತ್ರಾಪಾತ್ರ ವಿಚಾರ ಬೇಡವೆಂದು ವಿರೋಧ ಪರಿಹಾರ ಮಾಡಬೇಕು.

ಅವೈಷ್ಣವರಿಗೆ ದಾನ ಮಾಡಬಾರದೆಂದರೆ ವಿಷ್ಣು ಭಕ್ತರಾಗದಿದ್ದವರಿಗೆ ದಾನ ಮಾಡಬಾರದು ಎಂದು ಇಟ್ಟುಕೊಂಡರೆ ನಿತ್ಯದಲ್ಲಿಯೂ ಭೂತಬಲಿಯನ್ನು ಹಾಕುವಾಗ ಪಕ್ಷ್ಯಾದಿಗಳು ಸಹ ಆ ಅನ್ನದಾನಕ್ಕೆ ಅರ್ಹವಾಗಿರುವಾಗ ವಿಷ್ಣುಭಕ್ತ-ರಾಗದಿದ್ದವರಿಗೆ ಕೊಡಬಾರದೆಂದು ಅರ್ಥಮಾಡದೆ ವಿಷ್ಣುದ್ರೋಹಿಗೆ ಕೊಡಬಾರ-ದೆಂದು ಅರ್ಥ ಮಾಡಬೇಕು. ಗೃಹಸ್ಥಾಶ್ರಮಿಯು ತನ್ನ ಮನೆಯಲ್ಲಿರತಕ್ಕ ಮಕ್ಕಳಿಗೆ, ಬಾಲ್ಯಾವಸ್ಥೆಯಲ್ಲಿ ಸಣ್ಣಮಕ್ಕಳಿಗೆ ಅನ್ನವನ್ನು ಕೊಡಬೇಕಾಗುತ್ತದೆ. ಅವರು ಸಣ್ಣ ಮಕ್ಕಳಾದ್ದರಿಂದ ವಿಷ್ಣುಭಕ್ತಿಯನ್ನು ಇನ್ನೂ ಹೊಂದಿರಲಿಕ್ಕಿಲ್ಲ. ಆದ್ದರಿಂದ ವಿಷ್ಣುದ್ರೋಹಿಗಳಿಗೆ ದಾನ ಮಾಡಬಾರದೆಂಬ ಅಭಿಪ್ರಾಯವನ್ನು ಇಟ್ಟುಕೊಳ್ಳ-ಬೇಕಾಗುತ್ತದೆ.

ಶ್ರೀಕೃಷ್ಣ ಪರಮಾತ್ಮನು ಪ್ರತ್ಯುಪಕಾರವನ್ನು ಅಪೇಕ್ಷಿಸಿಯಾಗಲೀ, ಸಂಪದಾದಿ ಫಲವನ್ನು ಉದ್ದೇಶಿಸಿಯಾಗಲೀ 'ಇಷ್ಟು ದ್ರವ್ಯ ಕೊಡಬೇಕಲ್ಲ!' ಎಂಬ ಕ್ಲೇಶದಿಂದ ಕೊಡತಕ್ಕ ದಾನವಾಗಲೀ ರಾಜಸವೆಂದು ಹೇಳಿದ್ದಾನೆ. ಅಪ್ರಶಸ್ತ ದೇಶಕಾಲಗಳಲ್ಲಾಗಲಿ, ನಟವಿಟಗಾಯಕರಾದ ಅಪಾತ್ರರಲ್ಲಾಗಲಿ, ಪಾದ ಪ್ರಕ್ಷಾಲನ ಸತ್ಕಾರವಿಲ್ಲದೆ ತಿರಸ್ಕಾರಪೂರ್ವಕವಾಗಲಿ ಕೊಡತಕ್ಕ ದಾನವನ್ನು ತಾಮಸವೆಂದು ಹೇಳಿದ್ದಾನೆ. 'ಹೀಗೆ ದಾನ, ತಪಸ್ಸು, ಮೊದಲಾದ ವಿಷಯಗಳಲ್ಲಿ ಅನೇಕ ನಿಯಮಗಳನ್ನು ಹೇಳುತ್ತಿರುವಾಗ ಇಷ್ಟು ನಿಯಮಗಳನ್ನನುಸರಿಸಲು ಸಾಧ್ಯವಿಲ್ಲದಿದ್ದಾಗ ಆ ಕರ್ಮವು ಸಂಪೂರ್ಣ ಆಗುವ ಬಗೆ ಹೇಗೆ?' ಎಂದು ಅರ್ಜುನನು ಕೇಳಿದನು.

ಶ್ರೀಕೃಷ್ಣ ಪರಮಾತ್ಮನು ಸಮಾಧಾನ ಹೇಳುತ್ತಾನೆ: "ಪರಮಾತ್ಮನಿಗೆ ಓಂ ತತ್ ಮತ್ತು ಸತ್ ಎಂಬ ಪ್ರಧಾನ ನಾಮಗಳು ಇವೆ. ಅನಂತನಾಮವುಳ್ಳ ಪರಮಾತ್ಮನಿಗೆ ಈ ನಾಮಗಳು ವಿಶೇಷ ನಾಮಗಳಾಗಿವೆ. ಓಂ ಎಂದರೆ ಸರ್ವಾಧಾರನು, ಸರ್ವಾಂತರ್ಯಾಮಿಯು ಎಂದು ಅರ್ಥವು. ತತ್ ಎಂಬಲ್ಲಿ ದುಷ್ಟರಿಗೆ ದೂರದಲ್ಲಿರತಕ್ಕವನು, ಸರ್ವತ್ರ ವ್ಯಾಪ್ತನು. ಸತ್ ಎಂದರೆ

ನಿರ್ದುಷ್ಟನು, ಇರತಕ್ಕವನು, ಪ್ರಶಸ್ತಕರ್ಮದಿಂದ ಆರಾಧ್ಯನು, ಯಜ್ಞದಾನ ತಪ್ಪೋನಿಷ್ಠೆಗಳಿಂದ ಪ್ರಾಪ್ತನು ಎಂದು ಅರ್ಥವು. ಈ ಅರ್ಥಜ್ಞಾನಪೂರ್ವಕವಾಗಿ ಈ ನಾಮವನ್ನು ಉಚ್ಚಾರ ಮಾಡಿದರೆ ಕರ್ಮವು ಸಂಪೂರ್ಣವಾಗುವದು.

ಆ ಕರ್ಮಗಳ ನಿಯಮಗಳನ್ನು ಶಕ್ತಿಯಿದ್ದಷ್ಟು ಮಾಡಿ ಈ ನಾಮಗಳನ್ನು ಉಚ್ಚಾರ ಮಾಡಿದರೆ, ಮಾಡಲು ಅಸಾಧ್ಯವಾದ ನಿಯಮಗಳು ಉಳಿದರೂ ಕರ್ಮವು ಪರಿಪೂರ್ಣವಾಗುತ್ತದೆ. ಆದುದರಿಂದ ಪ್ರತಿಯೊಂದು ಯಜ್ಞ, ದಾನ, ತಪಸ್ಸುಗಳಲ್ಲಿ ಪರಮಾತ್ಮನ ನಾಮಗಳನ್ನು ಉಚ್ಚಾರ ಮಾಡಬೇಕು. ಲೋಕದಲ್ಲಿ ಯಾರು ಯಾರಿಂದ ಉಪಕೃತನಾಗಿದ್ದಾನೋ ಅವನು ಆ ಉಪಕಾರಿಯ ಹೆಸರನ್ನು ಹೇಳಿಕೊಂಡು ತನ್ನ ಕರ್ಮವನ್ನು ಮಾಡುತ್ತಿರುತ್ತಾನೆ. ಇದೇ ರೀತಿ ಸರ್ವವಿಷಯ-ದಲ್ಲಿಯೂ ಪರಮಾತ್ಮನು ನಮಗೆ ಉಪಕಾರಕನಾಗಿದ್ದಾನೆ. ಮೋಕ್ಷಾದಿ ಪುರುಷಾರ್ಥಕ್ಕೆ ಸಾಧನವಾದದ್ದು ಯಜ್ಞಾದಿರೂಪ ಭಗವದಾರಾಧನೆಯು. ಆ ಯಜ್ಞಾದಿರೂಪಗಳನ್ನು ಪರಮಾತ್ಮನೇ ಸೃಷ್ಟಿ ಮಾಡಿದ್ದಾನೆ. ಆ ಯಜ್ಞಮಾಡುವ ರೀತಿ ತಿಳಿಸುವದಕ್ಕೋಸ್ಕರ ವೇದವನ್ನು ಉಪದೇಶ ಮಾಡಿದ್ದಾನೆ. ಆ ವೇದಗಳ ಉಚ್ಚಾರಣೆಗೋಸ್ಕರ ಬ್ರಾಹ್ಮಣರನ್ನು ಸೃಷ್ಟಿ ಮಾಡಿದ್ದಾನೆ. ಹೀಗೆ ಅನೇಕ ರೀತಿಯಲ್ಲಿ ಸರ್ವವಿಧದಿಂದಲೂ ಉಪಕಾರಕನಾದ ಪರಮಾತ್ಮನ ನಾಮೋ-ಚ್ಚಾರಣೆ ಮಾಡದಿದ್ದರೆ ಕರ್ಮವು ಸಂಪೂರ್ಣವಾಗಲಾರದು.

ಶಾಸ್ತ್ರಜ್ಞಾನ ಇಲ್ಲದವರಿಗೂ ಸಾತ್ವಿಕ ಶ್ರದ್ಧೆಯಿದ್ದರೆ ಶ್ರದ್ಧಾಪೂರ್ವಕ ಮಾಡಿದ ಕರ್ಮಕ್ಕೆ ಫಲ ಉಂಟೆಂದು ನಾನು ಹಿಂದೆ ಹೇಳಿದ್ದೇನೆ. ಆವಾಗ ನಿನಗೆ ಒಂದು ಸಂಶಯ ಬರಬಹುದು. ಶಾಸ್ತ್ರಜ್ಞಾನ ಇಲ್ಲದಿದ್ದವರಿಗೆ ಶ್ರದ್ಧಾಮಾತ್ರದಿಂದ ಕರ್ಮವು ಫಲಪ್ರದವಾಗುವಂತೆ ಶ್ರದ್ಧೆಯಿಲ್ಲದವರಿಗೆ ಶಾಸ್ತ್ರಜ್ಞಾನ ಇದ್ದು ಕರ್ಮ ಮಾಡಿದರೆ ಫಲ ಬರುವುದೋ? ಎಂದು ನೀನು ಶಂಕಿಸಿದರೆ ಅದಕ್ಕೆ ಇಷ್ಟು ಉತ್ತರ: 'ಶ್ರದ್ಧೆಯಿಲ್ಲದೆ ಮಾಡಿದ ಹೋಮ, ದಾನ, ತಪಸ್ಸು ಮುಂತಾದ್ದೆಲ್ಲವು ಅಸತ್ಕರ್ಮವೆಂದೇ ಹೇಳಲ್ಪಡುತ್ತದೆ. ಅದು ಈ ಲೋಕದಲ್ಲಿಯೂ ಪರಲೋಕ-ದಲ್ಲಿಯೂ ಫಲಪ್ರದವಾಗಲಾರದು. ಆದುದರಿಂದ ಶ್ರದ್ಧೆಯು ಮುಖ್ಯವು.

ಶಾಸ್ತ್ರಜ್ಞಾನವು, ಶ್ರದ್ಧೆಯ ಜೊತೆಗೆ ಇದ್ದರೆ ಸುವರ್ಣಪುಷ್ಪಕ್ಕೆ ಪರಿಮಳವು ಇದ್ದರೆ ಹೇಗೋ ಹಾಗೆ ವಿಶೇಷವಾಗುತ್ತದೆ.'

ಏನೂ ಶ್ರದ್ಧೆಯಿಲ್ಲದವರು ಕರ್ಮ ಮಾಡುವುದು ವ್ಯರ್ಥವಾದರೆ ಅವರು ಮತ್ತೇನು ಮಾಡಬೇಕು? ಎಂದು ನೀನು ಕೇಳಿದರೆ **"ಶ್ರದ್ಧಯಾ ದೇಯಮ್ ಅಶ್ರದ್ಧಯಾ ದೇಯಮ್"** ಎಂಬ ಶ್ರುತಿಯಲ್ಲಿ ಶ್ರದ್ಧೆಯಿಂದ ಕರ್ಮಾಚರಣೆ ಮಾಡಬೇಕು. ಶ್ರದ್ಧೆಯಿಲ್ಲದವರೂ ಕರ್ಮಾಚರಣೆ ಮಾಡಬೇಕು. ಶ್ರದ್ಧೆಯಿಲ್ಲದೆ ಮಾಡಿದ ಕರ್ಮಾಚರಣೆಯು ಕಾಲಕ್ರಮದಿಂದ ಅವನಿಗೆ ಶ್ರದ್ಧೆಯನ್ನುಂಟುಮಾಡಿ ಪುನಃ ಶ್ರದ್ಧಾಪೂರ್ವಕ ಕರ್ಮ ಮಾಡಿದಾಗ ಐಹಿಕ, ಪಾರತ್ರಿಕ ಫಲಪ್ರದವು ಆಗುತ್ತದೆ. ಎಂಟು ವರ್ಷದಲ್ಲಿ ಉಪನಯನ ಆಗತಕ್ಕ ಬ್ರಹ್ಮಚಾರಿಗೆ ತಿಳುವಳಿಕೆ ಇಲ್ಲದಿದ್ದ ಪ್ರಯುಕ್ತ ಶ್ರದ್ಧಾಭಕ್ತ್ಯಾದಿಗಳು ಇಲ್ಲದಿದ್ದರೂ ಸಂಧ್ಯಾವಂದನಾದಿ ಕರ್ಮಗಳನ್ನು ಮಾಡುತ್ತಾ ಬರಬೇಕು. ಅದು ಶ್ರದ್ಧೆಗೆ ಕಾರಣವಾಗುತ್ತದೆ. ಇದರಂತೆ ಶ್ರದ್ಧೆಯಿಲ್ಲದ ಎಲ್ಲಾ ಪುರುಷರು ಶ್ರದ್ಧೆಯಿಲ್ಲವೆಂದು ಕರ್ಮಾಚರಣೆ ಬಿಡಬಾರದು.

ಶ್ರದ್ಧಾಭಕ್ತಿಯು ಬೀಜದಂತೆ ಪ್ರಧಾನವಾದದ್ದು. ಇದಕ್ಕೊಂದು ದೃಷ್ಟಾಂತ: ಒಬ್ಬ ಹಳ್ಳಿಯ ಪುರುಷ ಒಂದು ಪಟ್ಟಣಕ್ಕೆ ಪ್ರವೇಶ ಮಾಡಿದಾಗ ಉತ್ತಮವಾದ ಮಾವಿನ ಹಣ್ಣನ್ನು ಕ್ರಯಕ್ಕೆ ಪಡೆದನು. ಅದನ್ನು ತಿಂದಾಗ ಅದರ ರುಚಿ ನೋಡಿ ಈ ಮಾವಿನ ಮರವನ್ನು ತನ್ನ ಮನೆಯ ಬಾಗಿಲಲ್ಲಿ ನೆಡಬೇಕೆಂಬ ಬಯಸಿದನು. ಮಾವಿನ ಹಣ್ಣನ್ನು ಕೊಟ್ಟಿರತಕ್ಕ ಪುರುಷನಲ್ಲಿ ಆ ಮಾವಿನಮರದ ಕೃಷಿ ಮಾಡುವ ಎಲ್ಲಾ ಕ್ರಮವನ್ನು ಕೇಳಿಕೊಂಡನು. ಆ ಬೀಜವನ್ನು ಭದ್ರವಾಗಿ ಹಿಡಿದುಕೊಂಡು ಬಂದು ಮನೆಯಲ್ಲಿ ಎತ್ತರವಾದ ಸ್ಥಳದಲ್ಲಿ ಸುರಕ್ಷಿತವಾಗಿ ಇಟ್ಟುಬಿಟ್ಟನು. ಹೊಂಡ ತೆಗೆದು, ಗೊಬ್ಬರ ಹಾಕಿ ಬೇಲಿ ಮಾಡಿ ಅದರ ಮೊಳಕೆಯನ್ನು ನಿರೀಕ್ಷಿಸುತ್ತಿದ್ದನು. ಬಹಳ ಸಮಯವು ಹೊದರೂ ಅಂಕುರವು ತೋರಲಿಲ್ಲ. ಪುನಃ ಆ ಹಣ್ಣನ್ನು ಕ್ರಯಕ್ಕೆ ಕೊಟ್ಟವನು ಇದ್ದಲ್ಲಿ ಹೋಗಿ, 'ಎಷ್ಟು ಪ್ರಯಾಸಪಟ್ಟರೂ ಅಂಕುರವೇ ಉತ್ಪನ್ನವಾಗಲಿಲ್ಲ' ಎಂದು ತನ್ನ ದುಃಖವನ್ನು ಹೇಳಿಕೊಂಡನು.

ಆವಾಗ ಆ ಪುರುಷನು ಇವನು ಮಾಡಿದ ಕೆಲಸಗಳೆಲ್ಲವನ್ನೂ ವಿಚಾರ ಮಾಡಿ 'ಬೀಜವನ್ನು ನೀನು ಬಿತ್ತಿದ್ದು ಯಾವಾಗ?' ಎಂದು ಕೇಳಿದನು. ಆವಾಗ ಈ ಹಳ್ಳಿಯ ಪುರುಷನಿಗೆ ಥಟ್ಟನೆ ಸ್ಮರಣೆ ಬಂತು. 'ನಾನು ಬೀಜವನ್ನು ಬಿತ್ತಲೇ ಇಲ್ಲ. ಮನೆಯಲ್ಲಿ ಭದ್ರವಾಗಿ ಇಟ್ಟಿದ್ದೆ' ಎಂದು ಹೇಳಿದನು. ಆವಾಗ ಆ ಮಾವಿನ ಹಣ್ಣನ್ನು ಕ್ರಯಕ್ಕೆ ಕೊಟ್ಟ ಪುರುಷನು 'ಇಷ್ಟು ಮಾಡಿದ ಕಾರ್ಯವು ವ್ಯರ್ಥ-ವಾಯಿತು. ಬೀಜ ಬಿತ್ತದೆ ಬೇರೆ ಏನು ಕೆಲಸ ಮಾಡಿದರೂ ಉಪಯೋಗ-ವಿಲ್ಲವಷ್ಟೇ?' ಎಂದು ಹೇಳಿದಾಗ ಈ ಹಳ್ಳಿಯ ಪುರುಷನಿಗೆ ಬಹಳ ನಾಚಿಕೆಯಾಯಿತು. ನನ್ನ ದಡ್ಡತನವೇ ಇದಕ್ಕೆ ಮೂಲಕಾರಣವೆಂದು ಬಹಳ ಪಶ್ಚಾತ್ತಾಪ ಪಟ್ಟನು.

ಇದರಂತೆ ಅನೇಕ ಜನರು ಶಾಸ್ತ್ರೋಕ್ತ ವಿಧಿ ಪ್ರಕಾರವಾಗಿ ಬಹು ಶ್ರಮದಿಂದ ಯಜ್ಞಾದಿ ಕರ್ಮಗಳನ್ನು ಮಾಡುತ್ತಿದ್ದರೂ ಬೀಜದಂತೆ ಪ್ರಧಾನವಾದ ಶ್ರದ್ಧೆಯೆಂಬ ಕಾರಣ ಇಲ್ಲದೇ ಇದ್ದುದರಿಂದ ಎಲ್ಲಾ ಕರ್ಮಗಳು ನಿಷ್ಫಲ-ವಾಗುವವು.

ಇಲ್ಲಿ ವಿಶೇಷಾಂಶ: ಈ ಅಧ್ಯಾಯದ ಕೊನೆಯಲ್ಲಿ ಶ್ರದ್ಧೆಯೇ ಎಲ್ಲಾ ಕರ್ಮಗಳಿಗೆ ಪ್ರಧಾನವಾದದ್ದು ಎಂದು ಹೇಳಿದ್ದರಿಂದ ಮಧ್ವಸಿದ್ಧಾಂತದ ತತ್ವವನ್ನೇ ಉಪಸಂಹಾರ ಮಾಡಿದಂತಾಯಿತು. ಉಪಸಂಹಾರದಲ್ಲಿ ಹೇಳಿದ ವಿಷಯವೇ ಇಡೀ ಅಧ್ಯಾಯದ ಸಾರಾಂಶವು ಎಂದು ತಿಳಿಯಬೇಕು. ಶ್ರದ್ಧೆಯು ಬೇಕೆಂದು ಹೇಳಿದರೆ ಈಶ್ವರನು ಅವನ ಗುಣಗಳು ಸತ್ಯವೆಂದೂ, ಆ ಅನಂತಗುಣಪರಿ-ಪೂರ್ಣನಾದ ಪರಮಾತ್ಮನು ನಮ್ಮಿಂದ ಆರಾಧಿತನಾದರೆ ನಮ್ಮನ್ನು ರಕ್ಷಿಸುತ್ತಾನೆಂದೂ, ಇದನ್ನೆಲ್ಲ ಹೇಳುವ ಶಾಸ್ತ್ರವು ಪ್ರಮಾಣವೆಂದೂ ವಿಶ್ವಾಸವಿಡುವುದಕ್ಕೇ ಶ್ರದ್ಧೆಯೆಂದು ಹೆಸರು. ಇದು ಮಧ್ವಸಿದ್ಧಾಂತದಲ್ಲಿಯೇ ಕೂಡುತ್ತದೆ. ಅದ್ವೈತಸಿದ್ಧಾಂತದಲ್ಲಿ ಎಲ್ಲವೂ ಸುಳ್ಳಾದದ್ದರಿಂದ ಶಾಸ್ತ್ರವು ಪ್ರಮಾಣವೆಂದು ಅದರಲ್ಲಿ ಹೇಳಿದಂತೆ ಅನುಷ್ಠಾನ ಮಾಡಿದರೆ ಈಶ್ವರನು ರಕ್ಷಿಸುತ್ತಾನೆಂದು ಶ್ರದ್ಧೆಯು ಉಂಟಾಗಲಾರದು. ಆದುದರಿಂದ ಅದ್ವೈತಮತಕ್ಕೆ ಈ

ಅಧ್ಯಾಯವು ಸಂಪೂರ್ಣ ವಿರೋಧಿಯಾಗಿದೆ. ಇಲ್ಲಿಗೆ ಈ ಹದಿನೇಳನೆಯ ಅಧ್ಯಾಯ ಮುಗಿಯಿತು.

(ಇಪ್ಪತ್ತೇಳನೆ ದಿವಸದ ಉಪನ್ಯಾಸ ಮುಗಿಯಿತು)

***

# ಹದಿನೆಂಟನೆಯ ಅಧ್ಯಾಯ

ಅರ್ಜುನನು ಶ್ರೀಕೃಷ್ಣನಲ್ಲಿ ಪ್ರಶ್ನೆ ಮಾಡುತ್ತಾನೆ: "ಎಲೋ ಶ್ರೀಕೃಷ್ಣನೇ! ಸನ್ಯಾಸ ಮತ್ತು ತ್ಯಾಗ ಇವುಗಳ ಅರ್ಥವೇನು?"

ಶ್ರೀಕೃಷ್ಣಪರಮಾತ್ಮನು ಉತ್ತರ ಕೊಡುತ್ತಾನೆ: "ಕಾಮ್ಯಕರ್ಮವು ಎರಡು ಪ್ರಕಾರವಾದದ್ದು. ನಿಯತಕಾಮ್ಯ ಮತ್ತು ವೈಕಲ್ಪಿಕ ಕಾಮ್ಯವೆಂದು. ನಿಯತ ಕಾಮ್ಯವೆಂದರೆ ಪುತ್ರಾದಿ ಫಲಕ್ಕೋಸ್ಕರವೇ ಇದ್ದ ಕಾಮ್ಯ. ವೈಕಲ್ಪಿಕ ಕಾಮ್ಯವೆಂದರೆ ಪುತ್ರಾದಿ ಫಲವನ್ನಪೇಕ್ಷಿಸದೆ ಮಾಡಿದರೆ ಭಗವತ್ಪ್ರೀತಿ ಸಾಧನವಾಗಿ ಅಕಾಮ್ಯ-ವೆಂದು ಹೇಳಲ್ಪಡುತ್ತದೆ. ಅದೇ ಕರ್ಮವು ಫಲಾಪೇಕ್ಷೆಯಿಂದ ಮಾಡಿದರೆ ಕಾಮ್ಯವೆಂದು ಹೇಳಲ್ಪಡುತ್ತದೆ. ಈ ಎರಡು ಪ್ರಕಾರವುಳ್ಳ ಕರ್ಮಗಳ ಪೈಕಿ ನಿಯತ ಕಾಮ್ಯಕರ್ಮಗಳನ್ನು ಸರ್ವಾತ್ಮನಾ ಬಿಟ್ಟು ವೈಕಲ್ಪಿಕ ಕಾಮ್ಯಕರ್ಮಗಳನ್ನು ಇತರ ನಿತ್ಯ ನೈಮಿತ್ತಿಕ ಕರ್ಮಗಳಂತೆ ಭಗವತ್ಪ್ರೀತಿಯನ್ನು ಉದ್ದೇಶಿಸಿ ಅನುಷ್ಠಾನ ಮಾಡುವುದಕ್ಕೆ ಸನ್ಯಾಸವೆಂದು ಹೆಸರು. ತ್ಯಾಗವೆಂದರೆ ಕರ್ಮದ ಫಲವನ್ನು ಬಿಡುವದು. ಫಲವನ್ನು ಉದ್ದೇಶಿಸದಿರುವುದು.

ಕೆಲವರು ಜ್ಞಾನಿಗಳು ಕರ್ಮವು ಬಂಧಕವಾಗುವದರಿಂದ ಬಿಡತಕ್ಕದ್ದೇ ಎಂದು ಹೇಳುತ್ತಾರೆ. ಇನ್ನೂ ಕೆಲವರು ಯಜ್ಞ ದಾನ ಮತ್ತು ತಪಸ್ಸು ಎಂಬ ಕರ್ಮ ಬಿಡಲೇಬಾರದು ಎಂದು ಹೇಳುತ್ತಾರೆ. ಇಬ್ಬರೂ ಜ್ಞಾನಿಗಳಾದುದರಿಂದ ಎರಡೂ ಮಾತು ಸತ್ಯವಾದದ್ದೇ ಆಗಿದೆ. ಅದು ಹೇಗೆಂದರೆ ಕರ್ಮ ಬಿಡಬೇಕೆಂ-ಬವರ ಅಭಿಪ್ರಾಯ ಕರ್ಮ ಮಾಡುವಾಗ ಫಲದ ಉದ್ದೇಶ ಮಾಡಬಾರದೆಂದು ಆಗಿರುತ್ತದೆ.

ನನ್ನ ಸಿದ್ಧಾಂತವು ಇಷ್ಟೇ ಆಗಿರುತ್ತದೆ. ಯಜ್ಞ, ದಾನ, ತಪಸ್ಸು ಮುಂತಾದ ಕರ್ಮಗಳನ್ನು ಎಷ್ಟು ಮಾತ್ರಕ್ಕೂ ಬಿಡಬಾರದು. ಅವುಗಳು ಮನುಷ್ಯರನ್ನು ಪವಿತ್ರ ಮಾಡತಕ್ಕವುಗಳಾಗಿವೆ. ಜ್ಞಾನಿಗಳಾದರೂ ಕೂಡ ಕರ್ಮ ಮಾಡಿದರೆ ಮೋಕ್ಷದಲ್ಲಿ ವಿಶೇಷವಾದ ಆನಂದದ ಅನುಭವವನ್ನು ಹೊಂದುತ್ತಾರೆ.

ಅಜ್ಞಾನಿಗಳಾದವರು ಕರ್ಮಾನುಷ್ಠಾನದಿಂದ ಅಂತಃಕರಣ ಶುದ್ಧಿಯನ್ನು ಹೊಂದುತ್ತಾರೆ.

"ಕೆಲವರು ಕರ್ಮವನ್ನು ಬಿಟ್ಟಿದ್ದಾರಷ್ಟೆ?" ಎಂದು ನೀನು ಪ್ರಶ್ನೆ ಮಾಡಬಹುದು. ಆದರೆ ಅದು ಸರ್ವಥಾ ಅನ್ಯಾಯವು. ಶಾಸ್ತ್ರವಿಹಿತವಾದ, ವರ್ಣಾಶ್ರಮೋಚಿತವಾದ ಕರ್ಮದಲ್ಲಿ ದೋಷವನ್ನು ಆರೋಪಿಸಿ ಆ ಕರ್ಮವನ್ನು ಬಿಡುವುದು ತಮೋಗುಣದ ಉದ್ರೇಕದಿಂದ ಮಾಡುವ ಕೆಲಸವಾಗಿರುತ್ತದೆ.

ಕೆಲವರು ಕರ್ಮ ಮಾಡಬೇಕೆಂದೇ ತಾವು ಹೇಳಿದರೂ "ನಮಗೆ ಮಾಡಲು ಸಾಧ್ಯವಿಲ್ಲ, ದೇಹಾಯಾಸಾದಿಗಳಿಂದ ನಾವು ಬಿಟ್ಟಿದ್ದೇವೆ" ಎಂದು ಹೇಳುತ್ತಾರೆ. ಇಂಥವರ ತ್ಯಾಗವು ರಾಜಸ ತ್ಯಾಗವೆಂದು ಹೇಳಲ್ಪಡುತ್ತದೆ. ಕರ್ಮದಲ್ಲಿ ದೋಷವನ್ನು ಭಾವಿಸಿ ಕರ್ಮತ್ಯಾಗ ಮಾಡಿದವರಿಗಿಂತ ಇವರನ್ನು ಶ್ರೇಷ್ಠರೆಂದೇ ಹೇಳಬೇಕು. ಕರ್ಮದಲ್ಲಿ ದೋಷವನ್ನು ಹೇಳತಕ್ಕವರು ತಾವು ನಷ್ಟರಾಗುವುದಲ್ಲದೆ ಇತರರಿಗೂ ಕರ್ಮದಲ್ಲಿ ದೋಷವನ್ನೇ ಪ್ರತಿಪಾದನೆ ಮಾಡಿ ಹಾಳು ಮಾಡುತ್ತಾರೆ. ರಾಜಸತ್ಯಾಗಿಗಳು ಹಾಗಲ್ಲ. ಅವರು ತಾವು ಮಾತ್ರ ಕರ್ಮ ಮಾಡುವದಿಲ್ಲ. ಆದರೆ ಇನ್ನೊಬ್ಬರಿಗೆ ಕರ್ಮ ಮಾಡುವುದು ಬೇಡವೆಂದು ಹೇಳುವದಿಲ್ಲ. ಆದುದರಿಂದ ಅವರ ತ್ಯಾಗವು ರಾಜಸತ್ಯಾಗವೆಂದು ಹೇಳಲ್ಪ-ಡುತ್ತದೆ.

ಶಾಸ್ತ್ರವಿಹಿತವಾದ ಕರ್ಮವು ನಮಗೆ ಕರ್ತವ್ಯವಾಗಿದೆ ಎಂದು ತಿಳಿದು "ಅಹಂ, ಮಮ" ಎಂಬ ಅಭಿಮಾನವನ್ನು ತ್ಯಾಗಮಾಡಿ, ಫಲತ್ಯಾಗ, ಕರ್ತೃತ್ವತ್ಯಾಗವನ್ನು ಮಾಡಿ ಕರ್ಮ ಮಾಡತಕ್ಕವರ ತ್ಯಾಗವು ಸಾತ್ವಿಕ ತ್ಯಾಗವಾಗಿ-ರುತ್ತದೆ. ಈ ಸಾತ್ವಿಕ ತ್ಯಾಗಿಗಳು ಕರ್ಮವು ಕಷ್ಟಸಾಧ್ಯವೆಂದು ಕರ್ಮದಲ್ಲಿ ದ್ವೇಷ ಮಾಡುವದಿಲ್ಲ. ಕರ್ಮದ ಫಲವನ್ನು ಅಪೇಕ್ಷಿಸುವದಿಲ್ಲ. ಅವರ ದೇಹದಲ್ಲಿ ಸತ್ವಗುಣವು ವ್ಯಾಪಿಸಿ ಇರುತ್ತದೆ. ಅವರು ಪರಮಾತ್ಮನ ತತ್ವಜ್ಞಾನಿಗಳಾಗಿರುತ್ತಾರೆ. ತತ್ವದ ಬಗ್ಗೆ ಸಂಶಯುವಿಲ್ಲದವರಾಗಿರುತ್ತಾರೆ.

ತ್ಯಾಗವೆಂದರೆ ಸರ್ವಕರ್ಮತ್ಯಾಗವೆಂದು ಅರ್ಥ ಮಾಡುವುದು ಯುಕ್ತವಲ್ಲ. ಎಲ್ಲಾ ಕರ್ಮವನ್ನು ತ್ಯಾಗ ಮಾಡಿದವನಿಗೆ ದೇಹಧಾರಣೆಯೇ

ಆಗಲಾರದು. 'ದೇಹಧಾರಣೆ ಆಗಬೇಕಾದರೆ ಭೋಜನಾದಿ ಕರ್ಮವನ್ನು ಮಾಡ-ಬೇಕಾಗುತ್ತದೆ. ಅದಕ್ಕಾಗಿ ದ್ರವ್ಯಾರ್ಜನ ಮಾಡಬೇಕಾಗುತ್ತದೆ. ನ್ಯಾಯದಿಂದ ದ್ರವ್ಯ ಸಂಪಾದಿಸುವುದು ಬಹು ಕಷ್ಟಸಾಧ್ಯವಾಗಿದೆ. ದ್ರವ್ಯಸಂಪಾದನಕ್ಕೋಸ್ಕರ ಎಷ್ಟೋ ಪಾಪಕರ್ಮಗಳನ್ನು ಅನಿವಾರ್ಯವಾಗಿ ಮಾಡಬೇಕಾಗುತ್ತದೆ. ಆ ದ್ರವ್ಯವನ್ನು ಸಂಪಾದಿಸಿ ಅಡಿಗೆಗೆ ಬೇಕಾದ ವಸ್ತುಗಳನ್ನು ತಂದು ಬೇಯಿಸುವಾಗ ಎಷ್ಟೋ ಕ್ರಿಮಿಕೀಟಾದಿಗಳ ಹಿಂಸೆಯಾಗುತ್ತದೆ' - ಇತ್ಯಾದಿ ಅನೇಕ ಪಾಪಕರ್ಮಗಳ ಪರಿಹಾರಕ್ಕೋಸ್ಕರ ಪಂಚ ಯಜ್ಞಾದಿ ಕರ್ಮಗಳನ್ನು ಮಾಡಲೇ ಬೇಕಾಗುತ್ತದೆ. ಆದುದರಿಂದ ಕರ್ಮವನ್ನು ಬಿಟ್ಟು ಇರಲು ಸಾಧ್ಯವೇ ಇಲ್ಲ. ಆದುದರಿಂದ ತ್ಯಾಗವೆಂದರೆ ಫಲತ್ಯಾಗವೆಂದೇ ಅರ್ಥವು. ಫಲತ್ಯಾಗ ಮಾಡದೇ ಇದ್ದವನು ಸ್ವರ್ಗ, ನರಕ, ಮನುಷ್ಯಲೋಕಗಳಲ್ಲಿ ತಿರುಗುತ್ತಾ ಇರಬೇಕಾಗುತ್ತದೆ. ನಿಷ್ಕಾಮ-ಕರ್ಮ ಅನುಷ್ಠಾನ ಮಾಡುವ ಸನ್ಯಾಸಿಗಳಿಗೆ ಈ ಅನರ್ಥದ ಸಂಭವವಿಲ್ಲ.
(ಇಪ್ಪತ್ತೆಂಟನೆ ದಿನದ ಉಪನ್ಯಾಸವು ಮುಗಿಯಿತು)

***

ಶ್ರೀಕೃಷ್ಣನು ಸ್ವಧರ್ಮಾನುಷ್ಠಾನ ಮಾಡುವಾಗ 'ನಾನೇ ಸ್ವತಂತ್ರ ಕರ್ತಾ' ಎಂಬ ಅನುಸಂಧಾನವನ್ನು ತ್ಯಾಗ ಮಾಡಬೇಕೆಂದು ಹಿಂದೆ ಹೇಳಿದ್ದನ್ನು ವಿವರಿಸಿ ಹೇಳುತ್ತಾನೆ:

"ಎಲೋ ಅರ್ಜುನ! ಕಪಿಲರೂಪಿ ಪರಮಾತ್ಮನು ಉಪದೇಶ ಮಾಡಿದ ಸಾಂಖ್ಯ ಶಾಸ್ತ್ರದಲ್ಲಿ ಎಲ್ಲರೂ ಮಾಡತಕ್ಕ ಎಲ್ಲ ಕರ್ಮಗಳಿಗೆ ಐದು ಕಾರಣಗಳಿವೆ ಎಂದು ಹೇಳಿದ್ದಾರೆ. ಹೇಗೆಂದರೆ ಭೋಜನರೂಪವಾದ ಒಂದು ಕರ್ಮದಲ್ಲಿ, ಕೂತುಕೊಳ್ಳಲಿಕ್ಕೆ ಸ್ಥಳವು ಒಂದು ಕಾರಣ. ಎರಡನೆಯದಾಗಿ ಭೋಜನಕರ್ತೃವು ಕಾರಣ. ಮೂರನೆಯದಾಗಿ ಅಡಿಗೆ ಮಾಡತಕ್ಕವರು, ಪರಿಚಾರಕರು, ಬಡಿಸುವ-ವರು, ಪಾತ್ರೆಗಳು, ಸೌಟು ಮೊದಲಾದುವುಗಳು ಕಾರಣಗಳಾಗಿವೆ. ನಾಲ್ಕನೆಯದು, ಅನ್ನವನ್ನು ಕಲೆಸುವುದು, ಪಿಂಡಾಕಾರವಾಗಿ ಮಾಡುವುದು, ಬಾಯಿ ತೆಗೆದು ಆ

ತುತ್ತನ್ನು ಬಾಯಿಯೊಳಗೆ ಇಡುವುದು ಮೊದಲಾದ ಕ್ರಿಯೆಗಳು. ಐದನೆಯದ್ದು ಅದೃಷ್ಟ ಮತ್ತು ಪರಮಾತ್ಮ. ಈ ಪ್ರಕಾರ ಐದು ಕಾರಣಗಳಿಲ್ಲದೆ ಯಾವ ಕಾರ್ಯವು ಆಗುವುದಿಲ್ಲ. ಹೀಗಿದ್ದರೂ ತಾನೊಬ್ಬನೇ ಈ ಕಾರ್ಯಗಳನ್ನು ಮಾಡಿದೆನೆಂದು ತಿಳಿದರೆ ಅದು ಮಿಥ್ಯಾಜ್ಞಾನವಾಗುತ್ತದೆ. ಆದ್ದರಿಂದ ತಾನೊಬ್ಬನೇ ಕರ್ತಾ ಎಂದು ತಿಳಿದುಕೊಳ್ಳದೇ ಕರ್ಮ ಮಾಡಬೇಕು. ಈ ತರಹದ ಅನು-ಸಂಧಾನವಿದ್ದರೆ ಕರ್ತೃವಿಗೆ ಕರ್ಮದ ಲೇಪವಾಗುವುದಿಲ್ಲ.

ಇದಕ್ಕೆ ಉದಾಹರಣೆ: ಪರಮಾತ್ಮನ ಆಜ್ಞಾ ಪ್ರಕಾರವಾಗಿ, ರುದ್ರದೇವರು ಜಗತ್ತಿನ ಸಂಹಾರವನ್ನು ಮಾಡುತ್ತಾರೆ. ಯಮದೇವರು ಪಾಪಿಗಳನ್ನು ಶಿಕ್ಷಿಸುತ್ತಾರೆ. ಯಮದೇವರಿಗೂ, ರುದ್ರದೇವರಿಗೂ ಸ್ವತಂತ್ರ ಕರ್ತೃತ್ವಾಭಿಮಾನವು ಇಲ್ಲ. ಪರಮಾತ್ಮನ ಆಜ್ಞಾಪ್ರಕಾರ ಪರಮಾತ್ಮನ ಸೇವೆ ಮಾಡುತ್ತಿದ್ದೇವೆಂದು ಅವರು ತಿಳಿದಿದ್ದಾರೆ. ಆದುದರಿಂದ ಕರ್ಮದಿಂದ ಉಂಟಾಗಬಹುದಾದ ಪಾಪಲೇಪವು ಅವರಿಗಿಲ್ಲ. ಇಷ್ಟೇ ಅಲ್ಲದೇ ಮಹಾಪುಣ್ಯವನ್ನೇ ಹೊಂದುತ್ತಾರೆ.

ಜೀವನಿಗೆ ಸ್ವತಂತ್ರಕರ್ತೃತ್ವ ಇಲ್ಲದಿದ್ದರಿಂದ ಜೀವನನ್ನೇ ಕುರಿತು, ಶಾಸ್ತ್ರದಲ್ಲಿ 'ಇದನ್ನು ಮಾಡು, ಇದನ್ನು ಮಾಡಬೇಡ' ಎಂಬ ವಿಧಿ ನಿಷೇಧವು ಕೂಡಲಾರದು ಎಂದು ಶಂಕಿಸಬೇಡ. ಜೀವನಲ್ಲಿ ಭವದಧೀನವಾದ ಕರ್ತೃತ್ವ ಇದೆ. ರಾಜನ ಪ್ರೇರಣೆಯಿಂದ ಕರ್ಮವನ್ನು ಮಾಡತಕ್ಕ ಭೃತ್ಯಾದಿಗಳಿಗೆ ರಾಜನು ವಿಧಿ-ನಿಷೇಧಗಳನ್ನು ಮಾಡುವಂತೆ ಭಗವದಧೀನ ಜೀವರುಗಳಿಗೆ ಶಾಸ್ತ್ರದ ವಿಧಿ-ನಿಷೇಧಗಳು ಕೂಡುತ್ತವೆ. ಅಲ್ಲದೇ, ಸ್ವತಂತ್ರ ಕರ್ತೃತ್ವವು ಜೀವರಿಗೆ ಇದ್ದರೇನೆ ಶಾಸ್ತ್ರದ ವಿಧಿ ನಿಷೇಧವು ಕೂಡಲಾರದು. ಸ್ವತಂತ್ರ ಕರ್ತೃವಾದ ಪರಮಾತ್ಮನನ್ನು ಕುರಿತು ಶಾಸ್ತ್ರದ ವಿಧಿ ನಿಷೇಧಗಳು ಪ್ರವೃತ್ತವಾಗುವುದಿಲ್ಲವಷ್ಟೆ? ಆದುದರಿಂದ ಸ್ವತಂತ್ರ ಕರ್ತೃತ್ವವನ್ನು ತಿಳಿಯದೇ ಭಗವದಧೀನ ಕರ್ತೃತ್ವವನ್ನೇ ತಿಳಿದುಕೊ.

"ನಿನಗೆ ಜ್ಞಾನ, ಕರ್ಮ, ಕರ್ತೃ ಇವುಗಳಲ್ಲಿನ ಪ್ರಭೇದಗಳನ್ನು ತಿಳಿಸುತ್ತೇನೆ. ಇದು ಕೂಡ ಸಾಂಖ್ಯ ಶಾಸ್ತ್ರದಲ್ಲೇ ಹೇಳಲ್ಪಟ್ಟಿದೆ. ಸಮಸ್ತ ಪ್ರಾಣಿಗಳಲ್ಲಿ, ಸಮಸ್ತ ಜಡವಸ್ತುಗಳಲ್ಲಿಯೂ ಅಂತರ್ಯಾಮಿಯಾಗಿ ಒಬ್ಬನೇ ಸರ್ವೋತ್ತಮನಾದ ಪರಮಾತ್ಮನು ಇದ್ದಾನೆ ಎಂಬ ಜ್ಞಾನವು ಸಾತ್ವಿಕ."

ಇಲ್ಲಿ ವಿಶೇಷಾಂಶ: ಶಂಕರಾಚಾರ್ಯರು ಬೇರೆ ಬೇರೆ ದೇಹಗಳಲ್ಲಿ ಒಬ್ಬನೇ ಆತ್ಮನಿದ್ದಾನೆ, ಜೀವಾತ್ಮ ಮತ್ತು ಪರಮಾತ್ಮರಿಗೆ ಭೇದವಿಲ್ಲವೆಂಬ ಜ್ಞಾನವು ಸಾತ್ವಿಕ ಎಂದು ವ್ಯಾಖ್ಯಾನ ಮಾಡಿದ್ದಾರೆ. ಬೇರೆ ಬೇರೆ ದೇಹಗಳಲ್ಲಿ ಎಂದು ಅವರು ಹೇಳುವಾಗ ದೇಹಭೇದ ಎಂಬ ಜಡಭೇದವನ್ನು ಅವರು ಒಪ್ಪಿ-ದಂತಾಯಿತು. ಅದು ಅವರ ಸಿದ್ಧಾಂತಕ್ಕೆ ವಿರೋಧವಾಗುತ್ತದೆ. ಯಾವ ಭೇದ-ವನ್ನೂ ಒಪ್ಪದೆ ಇರೋಣವೇ ಅದ್ವೈತ ಸಿದ್ಧಾಂತ.

"ಜೀವರನ್ನು ಜಡಗಳನ್ನು ಬೇರೆ ಬೇರೆಯಾಗಿ ತಿಳಿದು ಇವುಗಳ ದೆಶೆಯಿಂದ ಪ್ರತ್ಯೇಕವಾಗಿ ಪರಮಾತ್ಮನಿದ್ದಾನೆಂದು ತಿಳಿಸುವ, ಆದರೆ, ಪರಮಾ-ತ್ಮನ ಅನಂತ ಗುಣಗಳು, ಅನಂತ ಕ್ರಿಯೆಗಳು, ಅನಂತ ರೂಪಗಳು ಮತ್ತು ಇವುಗಳಲ್ಲಿರುವ ಐಕ್ಯವನ್ನು ತಿಳಿಯದೆ ಇರುವ ಜ್ಞಾನವು ರಾಜಸವೆಂದು ಹೇಳಲ್ಪಡುತ್ತದೆ."

ಇಲ್ಲಿ ವಿಶೇಷಾಂಶ: ಬೇರೆ ಬೇರೆ ದೇಹಗಳಲ್ಲಿ ಬೇರೆ ಬೇರೆ ಆತ್ಮನನ್ನು ವಿಷಯೀಕರಿಸುವ ಜ್ಞಾನವು ರಾಜಸವೆಂದು ಅದ್ವೈತ ಭಾಷ್ಯದಲ್ಲಿ ಬರೆದಿರುತ್ತಾರೆ. ಇದು ಯುಕ್ತವಲ್ಲ. ಅದ್ವೈತ ಮತ ಪ್ರಕಾರ ಇದು ವಿಪರೀತ ಜ್ಞಾನವಾದುದರಿಂದ ತಾಮಸಜ್ಞಾನವೆಂದು ಹೇಳಲಿಕ್ಕೆ ಯೋಗ್ಯವಾಗಿರುತ್ತದೆ ಹೊರತು ರಾಜಸವೆಂದಲ್ಲ. ರಾಜಸಜ್ಞಾನವು ಸಾತ್ವಿಕಜ್ಞಾನಕ್ಕಿಂತ ನಿಕೃಷ್ಟವಾಗಿರಬೇಕು. ತಾಮಸಜ್ಞಾನಕ್ಕಿಂತ ಉತ್ಕೃಷ್ಟವಾಗಿರಬೇಕು. ಯಥಾರ್ಥ ಜ್ಞಾನವು ಸಾತ್ವಿಕ ಜ್ಞಾನವೆಂದು ಹೇಳಲ್ಪಡು-ತ್ತದೆ. ವಿಪರೀತ ಜ್ಞಾನವು ತಾಮಸ ಜ್ಞಾನವೆಂದು ಹೇಳಲ್ಪಡುತ್ತದೆ. ಕೆಲವು ವಿಷಯಗಳಲ್ಲಿ ಯಥಾರ್ಥಜ್ಞಾನ ಮತ್ತೆ ಕೆಲವು ಅಂಶಗಳಲ್ಲಿ ಅಯಥಾರ್ಥ ಜ್ಞಾನವಿದ್ದರೆ, ಅಂತಹ ಜ್ಞಾನವನ್ನು ರಾಜಸ ಜ್ಞಾನವೆಂದು ಹೇಳಬಹುದು. ಅದ್ವೈತ ಭಾಷ್ಯದಲ್ಲಿ ತಾಮಸ ಜ್ಞಾನಕ್ಕೂ ರಾಜಸ ಜ್ಞಾನಕ್ಕೂ ವ್ಯತ್ಯಾಸ ಕಂಡುಬರುವುದಿಲ್ಲ.

"ಜೀವಾತ್ಮನ ಅಜ್ಞಾನದಿಂದ ಕಲ್ಪಿತವಾದದ್ದು ಈ ಜಗತ್ತು ಎಂಬ ಜ್ಞಾನವು ತಾಮಸ ಜ್ಞಾನವೆಂದು ಹೇಳಲ್ಪಡುತ್ತದೆ."

ಇಲ್ಲಿ ವಿಶೇಷಾಂಶ: ಇಲ್ಲಿ ಶಂಕರಾಚಾರ್ಯರು ದೇಹವನ್ನೇ ಆತ್ಮವೆಂದು ಪ್ರತಿಮೆಯನ್ನೇ ದೇವರೆಂದು ವಿಷಯೀಕರಿಸುವ ವಿಪರೀತ ಜ್ಞಾನವು ತಾಮಸ ಜ್ಞಾನವೆಂದು ತಮ್ಮ ಭಾಷ್ಯದಲ್ಲಿ ಬರೆದಿರುತ್ತಾರೆ. ರಾಜಸ ಮತ್ತು ತಾಮಸ ಜ್ಞಾನಗಳೆರಡೂ ವಿಪರೀತ ಜ್ಞಾನವೇ ಆದುದರಿಂದ ಇವರ ಮತದ ಪ್ರಕಾರ ರಾಜಸ ಮತ್ತು ತಾಮಸ ಜ್ಞಾನಗಳಿಗೆ ವ್ಯತ್ಯಾಸವಿಲ್ಲದಂತಾಯಿತುಎಂದು ಈ ಮೊದಲೇ ಹೇಳಿದ್ದೇವೆ. ಅಲ್ಲದೇ, 'ದೇಹ ಮತ್ತು ಆತ್ಮ ಒಂದೇ' ಎಂಬ ಜ್ಞಾನವು, ಮತ್ತು 'ಪ್ರತಿಮೆ ಮತ್ತು ದೇವರು ಒಂದೇ' ಎಂಬ ಜ್ಞಾನವು ವಿಪರೀತ ಜ್ಞಾನವಾದರೆ 'ದೇಹ ಮತ್ತು ಆತ್ಮರು ಬೇರೆ' 'ಪ್ರತಿಮೆ ಮತ್ತು ಈಶ್ವರನು ಬೇರೆ' ಎಂಬ ಭೇದಜ್ಞಾನವು ಯಥಾರ್ಥಜ್ಞಾನವೆಂದಾಯಿತು. ಭೇದಜ್ಞಾನವು ಯಥಾರ್ಥಜ್ಞಾನವೆಂದು ಒಪ್ಪಿದರೆ ತಮ್ಮ ಅದ್ವೈತಸಿದ್ಧಾಂತಕ್ಕೆ ವಿರೋಧ ಮಾಡಿದಂತಾಯಿತು.

"ಶಾಸ್ತ್ರವಿಹಿತವಾದ ವರ್ಣಾಶ್ರಮೋಚಿತವಾದ 'ನಾನು' 'ನನ್ನದು' ಎಂಬ ಅಭಿಮಾನವಿಲ್ಲದ ರಾಗದ್ವೇಷಗಳಿಲ್ಲದ ಫಲಾಪೇಕ್ಷೆ ಇಲ್ಲದ ಕರ್ಮವು ಸಾತ್ವಿಕ ಕರ್ಮವೆಂದು ಹೇಳಲ್ಪಡುತ್ತದೆ. ಫಲಾಪೇಕ್ಷೆಯುಳ್ಳ ಪುರುಷನು ನಾನೇ ಮಾಡುತ್ತೇನೆಂಬ ಅಹಂಕಾರದಿಂದ ಕೂಡಿದವನಾಗಿ ಬಹಳ ಆಯಾಸಪಟ್ಟು ಮಾಡತಕ್ಕ ಕರ್ಮವು ರಾಜಸಕರ್ಮವೆಂದು ಹೇಳಲ್ಪಡುತ್ತದೆ. ಕರ್ಮ ಮಾಡಿದ ಮೇಲೆ ಆಗತಕ್ಕ ಧನಕ್ಷಯ, ಬಲಕ್ಷಯ, ಆಯುಃಕ್ಷಯ, ಪುಣ್ಯಕ್ಷಯಗಳನ್ನು, ಕರ್ಮ ಮಾಡುವಾಗ ಇನ್ನೊಬ್ಬರಿಗೆ ಆಗತಕ್ಕ ಹಿಂಸೆಯನ್ನು, ಪ್ರಕೃತ ಕರ್ಮ ಮಾಡಲು ತನಗೆ ಸಾಮರ್ಥ್ಯ ಉಂಟೋ ಇಲ್ಲವೋ ಎಂಬುದನ್ನು ವಿಚಾರ ಮಾಡದೆ ನಾನೇ ಮಾಡುತ್ತೇನೆಂಬ ಅಹಂಕಾರದಿಂದ, ಸಮಾಪ್ತಿ ಇಲ್ಲದೆ ಆರಂಭ ಮಾಡತಕ್ಕ ಕರ್ಮವನ್ನು ತಾಮಸ ಕರ್ಮವೆಂದು ಹೇಳುತ್ತಾರೆ.

ಅಹಂಕಾರ, ಮಮಕಾರ, ಫಲಾಪೇಕ್ಷೆ ಇಲ್ಲದೆ, ನಾನೇ ಮಾಡುತ್ತೇನೆಂಬ ಮಾತುಗಳನ್ನು ಹೇಳದೆ, ಕರ್ಮ ಮಾಡಲಿಕ್ಕೆ ಬೇಕಾದ ದುಃಖಸಹನ, ಉತ್ಸಾಹ, ಪ್ರಯತ್ನಗಳಿಂದ ಕೂಡಿ, ಫಲ ದೊರಕಲಿ, ದೊರೆಯದೇ ಇರಲಿ ನಿರ್ವಿಕಾರನಾಗಿ

ಇರತಕ್ಕವನನ್ನು ಸಾತ್ವಿಕ ಕರ್ಮ ನಿರತನೆಂದು ಹೇಳುತ್ತಾರೆ. ಕರ್ಮ ಫಲಾಪೇಕ್ಷೆ-ಯುಳ್ಳವನು, ಲೋಭಿಯು, ಇನ್ನೊಬ್ಬರ ದ್ರವ್ಯವನ್ನು ಅಪೇಕ್ಷೆ ಮಾಡುವವನು, ಪರಪೀಡೆ ಮಾಡುವ ಸ್ವಭಾವವುಳ್ಳವನು, ಹೊರಗಿನ ಒಳಗಿನ ಶುಚಿತ್ವ ಇಲ್ಲದ-ವನು, ಫಲ ದೊರಕಿದರೆ ಹರ್ಷವನ್ನು ಹೊಂದುವವನು, ದೊರೆಯದಿದ್ದರೆ ಶೋಕವನ್ನು ಹೊಂದುವವನನ್ನು ರಾಜಸ ಕರ್ತೃವೆಂದು ಹೇಳುತ್ತಾರೆ. ಭಗವದ-ರ್ಪಣ ಮಾಡದೇ, ತತ್ವಜ್ಞಾನ ಇಲ್ಲದೇ, ಪಶುತುಲ್ಯನಾಗಿ, ವಿನಯ ಇಲ್ಲದವನಾಗಿ, ಗೂಢದ್ವೇಷ ಮಾಡತಕ್ಕವನಾಗಿ, ಪರವಂಚಕನಾಗಿ, ಆಲಸ್ಯವುಳ್ಳವನಾಗಿ, ಮನೋ-ದೌರ್ಬಲ್ಯವುಳ್ಳವನಾಗಿ, ಈಗ ಮಾಡಬೇಕಾದ ಕರ್ಮವನ್ನು ಯಾವಾಗಲೋ ಮಾಡತಕ್ಕವನನ್ನು ತಾಮಸ ಕರ್ತೃವೆಂದು ಹೇಳುತ್ತಾರೆ.

ಬುದ್ಧಿ ಮತ್ತು ಧೈರ್ಯದಲ್ಲಿಯೂ ಸಾತ್ವಿಕಾದಿ ಪ್ರಭೇದವನ್ನು ಹೇಳುತ್ತೇನೆ ಕೇಳು: ಕಾಮ್ಯಕರ್ಮ, ನಿವೃತ್ತಿಕರ್ಮ ಇವುಗಳ ಮಧ್ಯದಲ್ಲಿ ಯಾವುದನ್ನು ಮಾಡಬೇಕು ಯಾವುದನ್ನು ಮಾಡಬಾರದು, ಯಾವುದರಿಂದ ಭಯ ಮತ್ತು ಬಂಧ, ಯಾವುದರಿಂದ ಅಭಯ ಮತ್ತು ಮೋಕ್ಷ ಎಂಬುದನ್ನು ವಿಚಾರಮಾಡಿ ತಿಳಿಯುವ ಬುದ್ಧಿಯು ಸಾತ್ವಿಕ ಬುದ್ಧಿ. ಧರ್ಮ, ಅಧರ್ಮ, ಕರ್ತವ್ಯ, ಅಕರ್ತವ್ಯ ಇವುಗಳನ್ನು ಕೆಲವು ಅಂಶದಲ್ಲಿ ಯಥಾರ್ಥವಾಗಿಯೂ, ಕೆಲವು ಅಂಶದಲ್ಲಿ ಅಯಥಾರ್ಥವಾಗಿಯೂ ವಿಚಾರ ಮಾಡುವ ಬುದ್ಧಿಯು ರಾಜಸವೆಂದು ಹೇಳಲ್ಪಡುತ್ತದೆ. ಎಲ್ಲವನ್ನು ವಿಪರೀತವಾಗಿಯೇ ವಿಮರ್ಶೆ ಮಾಡುವ ಬುದ್ಧಿಯನ್ನು ತಾಮಸವೆಂದು ಹೇಳುತ್ತಾರೆ.

ಯಾವ ಧೈರ್ಯದಿಂದ ಮನಸ್ಸಿನ, ಪ್ರಾಣಗಳ, ಮತ್ತು ಇಂದ್ರಿಯಗಳ ಕ್ರಿಯೆಗಳನ್ನು ಅಮಾರ್ಗದಲ್ಲಿ ಹೋಗದಂತೆ ಪ್ರಯತ್ನ ಮಾಡಲಾಗುತ್ತದೋ ಆ ಧೈರ್ಯವನ್ನು ಸಾತ್ವಿಕ ಧೈರ್ಯವೆಂದು ಹೇಳುತ್ತಾರೆ. ಪ್ರಯತ್ನದಿಂದ ಧರ್ಮದಲ್ಲಿ ಪ್ರವೃತ್ತಿ ಮಾಡಿದರೂ ಫಲಾಪೇಕ್ಷೆಯಿಂದ ಸಹಿತವಾಗಿ, ನಾನೇ ಕರ್ತೃವೆಂಬ ಅಭಿಮಾನ ಸಹಿತವಾಗಿ ಧರ್ಮಾನುಷ್ಠಾನದಲ್ಲಿ ಮನಸ್ಸು ಇಂದ್ರಿಯಗಳನ್ನು ಧರಿಸುವ ಧೈರ್ಯವು ರಾಜಸ ಧೈರ್ಯವೆಂದು ಹೇಳಲ್ಪಡುತ್ತದೆ. ಭಯಪ್ರದವಾದ ಪ್ರಬಲ ಪುರುಷರ ವಿರೋಧದಲ್ಲಿ, ಶೋಕಕ್ಕೆ ಕಾರಣವಾದ ಬಂಧುಜನಕಲಹದಲ್ಲಿ,

ವಿಷಾದಕ್ಕೆ ಕಾರಣವಾದ ವ್ಯರ್ಥ ದ್ರವ್ಯ ವ್ಯಯದಲ್ಲಿ ಯಾರು ಪ್ರಯತ್ನ ಮಾಡುತ್ತಾನೋ, ಅವನ ಧೈರ್ಯವು ತಾಮಸ ಧೈರ್ಯವೆಂದು ಹೇಳಲ್ಪಡುತ್ತದೆ.

ಸುಖದಲ್ಲಿ ಮೂರು ಪ್ರಕಾರವನ್ನು ನಿನಗೆ ಹೇಳುತ್ತೇನೆ: ಸುಖಕ್ಕೋಸ್ಕರ ಪ್ರವೃತ್ತಿ ಮಾಡುವಾಗ ಮೊದಲು ಬಹಳ ದುಃಖವನ್ನು ಅನುಭವಿಸಿ, ಕ್ರಮದಿಂದ ಸುಖವು ಅಭಿವೃದ್ಧಿಯಾಗುತ್ತ ದುಃಖವೆಲ್ಲ ನಾಶವಾಗಿ, ಕೊನೆಗೆ ಅಮೃತ ಸದೃಶವಾದ, ಆತ್ಮನಿಗೆ ಪ್ರಸನ್ನತೆಯನ್ನು ಉಂಟುಮಾಡುವ ಸುಖವು ಸಾತ್ವಿಕ ಸುಖವೆಂದು ಹೇಳಲ್ಪಡುತ್ತದೆ. ಉದಾಹರಣೆಗೆ ಸಚ್ಛಾಸ್ತ್ರಾಭ್ಯಾಸ ಅಥವಾ ಪರಮಾತ್ಮನ ಧ್ಯಾನ. ಶಾಸ್ತ್ರಾಭ್ಯಾಸ ಅಥವಾ ಧ್ಯಾನವನ್ನು ಮಾಡುವಾಗ, ಆರಂಭದಲ್ಲಿ ಮನಸ್ಸು ಅದರಲ್ಲಿ ಇಡಲು ಸಾಧ್ಯವಾಗದೆ ಬಹು ಕಷ್ಟವನ್ನು ಅನುಭವಿಸಬೇಕಾಗುತ್ತದೆ. ಕ್ರಮದಿಂದ ಅಭ್ಯಾಸ ಮಾಡುತ್ತ ಸಮಸ್ತದುಃಖವು ಪರಿಹಾರವಾಗಿ, ಅತ್ಯಂತ ಸುಖವನ್ನು ಕೊನೆಗೆ ಹೊಂದುತ್ತಾನೆ.

ಇಂದ್ರಿಯಗಳನ್ನು ಸ್ತ್ರೀ ಮೊದಲಾದ ವಿಷಯದಲ್ಲಿ ಸಂಬಂಧ ಮಾಡುವಾಗ, ಆರಂಭದಲ್ಲಿ ಅಮೃತಕ್ಕೆ ಸಮಾನವಾದ ಸುಖವಾದರೂ, ಪರಿಣಾಮದಲ್ಲಿ ವಿಷಕ್ಕೆ ಸಮಾನವಾದ ದುಃಖಕ್ಕೆ ಕಾರಣವಾಗುತ್ತದೆ. ಅಂಥ ಸುಖವನ್ನು ರಾಜಸ ಸುಖವೆಂದು ಹೇಳುತ್ತಾರೆ. ಸುಖವನ್ನು ಅನುಭವಿಸುವ ಕಾಲದಲ್ಲೂ ಮತ್ತು ಕೊನೆಯಲ್ಲಿಯೂ ಆತ್ಮನ ವಿವೇಕ ಶಕ್ತಿಯನ್ನು ನಾಶ ಮಾಡುವ, ನಿದ್ರಾ ಆಲಸ್ಯಗಳಿಂದ ಉಂಟಾಗುವ ಸುಖವು ತಾಮಸ ಸುಖವೆಂದು ಹೇಳಲ್ಪಡುತ್ತದೆ.

ಜ್ಞಾನ, ಸುಖ, ಬುದ್ಧಿ ಇವುಗಳಲ್ಲಿ ಸಾತ್ವಿಕ, ರಾಜಸ, ತಾಮಸವೆಂಬ ಪ್ರಭೇದವನ್ನು ಇಷ್ಟರವರೆಗೆ ಹೇಳಿದ್ದರಿಂದ, ಸಾತ್ವಿಕಾದಿ ಪ್ರಭೇದವುಳ್ಳದ್ದು ಇಷ್ಟೇ ಎಂದು ತಿಳಿದುಕೊಳ್ಳಬೇಡ. ಪೃಥ್ವಿಯಲ್ಲಾಗಲಿ ಸ್ವರ್ಗದಲ್ಲಾಗಲಿ, ಸತ್ವರಜಸ್ತಮಗಳ ಸಂಬಂಧವಿಲ್ಲದ್ದು ಯಾವುದೂ ಇಲ್ಲ. ಆದ್ದರಿಂದ ಪೃಥ್ವಿಯಲ್ಲಿಯೂ, ಸ್ವರ್ಗಾದಿಗಳಲ್ಲಿಯೂ ಇರುವ ಎಲ್ಲ ವಸ್ತುಗಳಲ್ಲಿಯೂ ಸಾತ್ವಿಕಾದಿ ಪ್ರಭೇದವು ಇರತಕ್ಕದೆಂದು ತಿಳಿದುಕೋ.”

ಅರ್ಜುನನು ಪ್ರಶ್ನೆ ಮಾಡುತ್ತಾನೆ: "ನಾನು ಕರ್ಮ ಮಾಡುತ್ತೇನೆ, ಆದರೆ ಘೋರವಾದ ಯುದ್ಧವೆಂಬ ಕರ್ಮ ಮಾಡಲು ನನಗೆ ಇಚ್ಛೆಯಿಲ್ಲ. ಬ್ರಾಹ್ಮಣ ಧರ್ಮವನ್ನು ನಾನು ಆಚರಿಸುತ್ತೇನೆ, ಇಂಥವರು ಇಂಥ ಧರ್ಮವನ್ನು ಆಚರಿಸ–ಬೇಕೆಂಬ ವಿಭಾಗವಿಲ್ಲವಷ್ಟೆ?"

ಇದಕ್ಕೆ ಶ್ರೀ ಕೃಷ್ಣ ಪರಮಾತ್ಮನು ಹೇಳುತ್ತಾನೆ: "ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಮತ್ತು ಶೂದ್ರರಿಗೆ ಕರ್ಮಗಳು ವಿಭಾಗ ಮಾಡಲ್ಪಟ್ಟಿವೆ. ಬ್ರಾಹ್ಮಣನು ಪರಮಾತ್ಮನ ಮುಖದಿಂದ ಹುಟ್ಟಿದವನು. ಆದುದರಿಂದ ಮುಖಕ್ಕೆ ಸಂಬಧಿಸಿದ ಕೆಲಸವನ್ನು ಅವನು ಮಾಡಬೇಕು. ಜಪ ಮತ್ತು ಉಪದೇಶವು ಮುಖದ ಕಾರ್ಯವಾದುದರಿಂದ, ಅದನ್ನು ಅವನು ಮಾಡದೆ ಇದ್ದರೆ ಅವನಿಗೆ ನರಕವು ಸರ್ವಥಾ ಆಗುತ್ತದೆ. ಕ್ಷತ್ರಿಯರು ಪರಮಾತ್ಮನ ಬಾಹುವಿನಿಂದ ಹುಟ್ಟಿದವರು. ಆದುದರಿಂದ ಅವರು ಬಾಹುವಿಂದಾಗತಕ್ಕ ದುಷ್ಟನಿಗ್ರಹವನ್ನು ಅವಶ್ಯ ಮಾಡಬೇಕು. ವೈಶ್ಯನು ಪರಮಾತ್ಮನ ತೊಡೆಯಿಂದ ಹುಟ್ಟಿದವನು. ಆದುದರಿಂದ ಅವನು ಪ್ರಜಾ ವೃದ್ಧಿಯನ್ನು ಮಾಡಬೇಕು. ಶೂದ್ರನು ಪರಮಾತ್ಮನ ಪಾದದಿಂದ ಹುಟ್ಟಿದವನಾದ ಪ್ರಯುಕ್ತ, ಪಾದದ ಕೆಲಸವಾದ ಗಮನಾಗಮನ ರೂಪವಾದ ಉತ್ತಮ ವರ್ಣದವರ ಸೇವೆಯನ್ನು ಮಾಡಬೇಕು. ಈ ರೀತಿಯಾಗಿ ಆಯಾಯ ವರ್ಣಧರ್ಮಗಳು ಅವರವರಿಗೆ ಪ್ರತ್ಯೇಕವಾಗಿ ವಿಭಾಗ ಮಾಡಲ್ಪಟ್ಟದ್ದರಿಂದ ಕ್ಷತ್ರಿಯನಾದ ನೀನು ಯುದ್ಧರೂಪ ಧರ್ಮವನ್ನೇ ಮಾಡಬೇಕಾಗುತ್ತದೆ.

ಬ್ರಾಹ್ಮಣನಿಗೆ ಜಪೋಪದೇಶ ಮಾತ್ರವಲ್ಲದೆ – ಶಮ ಅಂದರೆ ಭಗವನ್ನಿಷ್ಠವಾದ ಬುದ್ಧಿ, ದಮ ಎಂದರೆ ಇಂದ್ರಿಯ ನಿಗ್ರಹ, ತಪಸ್ಸು ಅಂದರೆ ಕೃಚ್ಛ್ರ ಚಾಂದ್ರಾಯಣಾದಿ ವ್ರತಗಳು, ಶೌಚ ಅಂದರೆ ಮನಃಶುದ್ಧಿ ಮತ್ತು ಮಣ್ಣು, ನೀರು – ಇವುಗಳಿಂದ ಬಾಹ್ಯ ಶುದ್ಧಿ, ಕ್ಷಾಂತಿ ಅಂದರೆ ಸಹನ ಶಕ್ತಿ, ಆರ್ಜವ ಅಂದರೆ ಮನಸ್ಸು ಮಾತು ಮತ್ತು ಶರೀರದ ಕರ್ಮಗಳಲ್ಲಿ ಒಂದೇ ರೀತಿಯಾಗಿರುವುದು, ಜ್ಞಾನ ಮತ್ತು ವಿಜ್ಞಾನ ಅಂದರೆ ಪರಾಪರತತ್ವಗಳ ಸಾಮಾನ್ಯ ಯಥಾರ್ಥ ಜ್ಞಾನ ಮತ್ತು ವಿಶೇಷ ತತ್ವಜ್ಞಾನ, ಆಸ್ತಿಕ್ಯ ಬುದ್ಧಿ ಅಂದರೆ ಪರಲೋಕ ಇದೆ ಎಂಬ ಬುದ್ಧಿ – ಇವುಗಳೆಲ್ಲ ಸ್ವಾಭಾವಿಕ ಧರ್ಮಗಳು.

ಬ್ರಾಹ್ಮಣರಲ್ಲಿ ಇವುಗಳು ಪ್ರಧಾನಗಳಾಗಿರುತ್ತವೆ. ಇತರ ವರ್ಣಗಳಲ್ಲಿ ಈ ಗುಣಗಳು ಬ್ರಾಹ್ಮಣರಲ್ಲಿ ಇರುವಷ್ಟು ಇರುವುದಿಲ್ಲ.

ಶೌರ್ಯ ಅಂದರೆ ಶತ್ರುಗಳಿಗೆ ಹೆದರದೆ ಇರುವುದು, ತೇಜಸ್ಸು ಅಂದರೆ ಇನ್ನೊಬ್ಬರಿಂದ ಬಲಾತ್ಕರಿಸಲಿಕ್ಕೆ ಸಾಧ್ಯವಾಗದೆ ಇರುವುದು, ಧೃತಿ ಅಂದರೆ ಧೈರ್ಯ ಅರ್ಥಾತ್ ಆರಂಭ ಮಾಡಿದ ಕಾರ್ಯವನ್ನು ಸಮಾಪ್ತಿ ಮಾಡುವ ಸಾಮರ್ಥ್ಯವು, ದಾಕ್ಷ್ಯ ಅಂದರೆ ಪಾಟವ, ಯುದ್ಧಕ್ಕೆ ಹೋಗಿ ತಿರುಗಿ ಬಾರದಿ-ರುವಿಕೆಯು, ದಾನ ಮತ್ತು ದುಷ್ಟರಿಗೆ ದಂಡನೆಯನ್ನು ಮಾಡುವ ಸಾಮರ್ಥ್ಯ – ಇವೆಲ್ಲ ಕ್ಷತ್ರಿಯರಿಗೆ ಸ್ವಾಭಾವಿಕವಾದ ಧರ್ಮ.

ಕೃಷಿ ಮಾಡುವುದು, ಗೋ ರಕ್ಷಣೆ ಹಾಗೂ ವ್ಯಾಪಾರವು ಪರಮಾತ್ಮನ ಪ್ರೀತಿಯ ಉದ್ದೇಶವಾಗಿ ಮಾಡಲ್ಪಟ್ಟರೆ ವೈಶ್ಯರ ಸ್ವಾಭಾವಿಕ ಧರ್ಮವಾಗುವುದು. ಮೂರು ವರ್ಣದವರ ಸೇವೆ ಮಾಡುವುದು ಶೂದ್ರನಿಗೆ ಸ್ವಾಭಾವಿಕ ಧರ್ಮವಾಗಿದೆ. ಮೂರು ವರ್ಣದವರು ದೊಡ್ಡ ಕರ್ಮಗಳನ್ನು ಮಾಡುವಾಗ ಸಹಾಯಕರಿಲ್ಲದಿದ್ದರೆ, ಆ ಕರ್ಮವನ್ನು ಅವರಿಗೆ ಮಾಡಲು ಸಾಧ್ಯವಾಗದು. ಆದುದರಿಂದ ಅವರ ಸೇವೆ ಮಾಡತಕ್ಕಂಥವನು ಬೇಕಾಗುತ್ತದೆ. ಆದುದರಿಂದ ಅದು ಶೂದ್ರರಿಗೆ ಮುಖ್ಯ ಧರ್ಮವು.

ಪ್ರತಿಯೊಂದು ವರ್ಣದವರು ತಮಗೆ ಸಂಬಂಧಪಟ್ಟ ಕರ್ಮದಲ್ಲಿ ಶ್ರದ್ಧೆಯಿಂದ ಆಸಕ್ತರಾಗಿದ್ದರೆ ಉತ್ಕೃಷ್ಟ ಸಿದ್ಧಿಯನ್ನು ಹೊಂದುತ್ತಾರೆ. ತಮ್ಮ ತಮ್ಮ ವರ್ಣಕ್ಕೆ ಸಂಬಂಧಪಟ್ಟ ಧರ್ಮದಲ್ಲಿ ನಿರತರಾದವರನ್ನೇ ಮನುಷ್ಯರೆಂದು ಹೇಳುತ್ತಾರೆ. ಸ್ವಧರ್ಮ ಭ್ರಷ್ಟರಾದವರನ್ನು ಜ್ಞಾನಿಗಳು ಮನುಷ್ಯರೆಂದು ಒಪ್ಪದೆ ಪಶುವೆಂದೇ ಕರೆಯುತ್ತಾರೆ.”

ಉತ್ಕೃಷ್ಟವಾದ ಸಿದ್ಧಿಯನ್ನು ಹೊಂದಬೇಕಾದರೆ ಅವನು ಮನುಷ್ಯ ಜಾತಿಯಲ್ಲಿ ಹುಟ್ಟಿದರಾಯಿತು. ಬ್ರಾಹ್ಮಣನಾಗಿಯೇ ಹುಟ್ಟಬೇಕಾಗಿಲ್ಲ. ಈ ವರ್ಣಗಳಿಗೆ ವ್ಯವಸ್ಥಿತ ಧರ್ಮವನ್ನು ಹೇಳಿದ್ದು ಮನುಷ್ಯರನ್ನು ಕುರಿತೇ ಆಗಿರುತ್ತದೆ. ದೇವತೆಗಳಲ್ಲಿ ವರ್ಣಧರ್ಮದ ವ್ಯವಸ್ಥೆ ಇರುವುದಿಲ್ಲ. ಅವರು ಎಲ್ಲ ತರಹದ ಧರ್ಮವನ್ನು ಅನುಷ್ಠಾನ ಮಾಡುತ್ತಾರೆ.

ಧರ್ಮಾನುಷ್ಠಾನವೇ ಇವನಿಗೆ ಸಿದ್ಧಿಯನ್ನು ಕೊಡುತ್ತದೆಂದು ಹೇಳಿದರೆ, ಧರ್ಮವು ಅಚೇತನವಾದುದರಿಂದ ಅದಕ್ಕೆ ಉತ್ತಮ ಸಿದ್ಧಿಯನ್ನು ಕೊಡತಕ್ಕ ಸಾಮರ್ಥ್ಯವು ಹೇಗೆ? ಎಂಬ ಶಂಕೆಯು ಬಂದೀತು. ಆದರೆ ಆ ಧರ್ಮವು ಉತ್ತಮ ಸಿದ್ಧಿಯನ್ನು ಕೊಡುತ್ತದೆಂದರೆ, ಆ ಧರ್ಮದಿಂದ ಆರಾಧಿತನಾದ ಪರಮಾತ್ಮನು ಪ್ರಸನ್ನನಾಗಿ ಉತ್ತಮ ಸಿದ್ಧಿಯನ್ನು ಕೊಡುತ್ತಾನೆಂದೇ ಅರ್ಥ.

"ಪರಮಾತ್ಮನು ಸರ್ವತ್ರ ವ್ಯಾಪ್ತನಾಗಿದ್ದಾನೆ. ನಾವು ಯಾವ ದೇಶ, ಕಾಲಗಳಲ್ಲಿ ಧರ್ಮಾನುಷ್ಠಾನ ಮಾಡಿದರೂ ಸರ್ವವ್ಯಾಪ್ತನಾದ ಪರಮಾತ್ಮನಿಗೆ ಅದು ತಿಳಿಯುತ್ತದೆ. ಅವನ ಅನುಗ್ರಹದಿಂದಲೇ ನಾವು ಎಲ್ಲ ಕೆಲಸಗಳನ್ನು ಮಾಡುವವರಾದ ಪ್ರಯುಕ್ತ ಅವನಿಗೆ ಕೃತಜ್ಞರಾಗಿರತಕ್ಕದ್ದು ನಮ್ಮ ಕರ್ತವ್ಯ-ವಾಗಿದೆ. ಸ್ವಧರ್ಮಾನುಷ್ಠಾನವೇ ಅವನ ಆರಾಧನೆಯಾದ್ದರಿಂದ, ಅದನ್ನು ನಾವು ಮಾಡಿ ಅವನನ್ನು ಪ್ರಸನ್ನೀಕರಿಸಿ ಅವನಿಗೆ ಕೃತಜ್ಞರಾಗುವುದು ಅವಶ್ಯಕವಾಗಿದೆ.

ಸ್ವಧರ್ಮಾನುಷ್ಠಾನವನ್ನು ಸರಿಯಾಗಿ ಮಾಡಲಿಕ್ಕೆ ಸಾಧ್ಯವಾಗದೆ ಹೋದರೂ, ಪರಧರ್ಮಾನುಷ್ಠಾನವನ್ನೂ ಚೆನ್ನಾಗಿ ಮಾಡಲು ಶಕ್ಯವಿದ್ದರೂ, ಪರಧರ್ಮಾನುಷ್ಠಾನಕ್ಕಿಂತ ಸ್ವಧರ್ಮಾನುಷ್ಠಾನವೇ ಶ್ರೇಷ್ಠವಾದದ್ದು. ತಮ್ಮ ಸ್ವಾಭಾವಿಕ ಕರ್ಮದಲ್ಲಿ ದೋಷ ಉಂಟೆಂದು ತಿಳಿದು ಅದನ್ನು ಬಿಡುವುದು ನ್ಯಾಯವಲ್ಲ. ಸ್ವಧರ್ಮವನ್ನು ಬಿಟ್ಟು ಪರಧರ್ಮಕ್ಕೆ ಹೋದರೂ ಪರಧರ್ಮ-ದಲ್ಲಿಯೂ ದೋಷವಿದೆ."

ಉದಾಹರಣೆ: ಬ್ರಾಹ್ಮಣನು ವೇದಾಧ್ಯಯನ, ತಪಸ್ಸು ಇವುಗಳಲ್ಲಿ ನಿರತನಾದಾಗ ಅವನಿಗೆ ಕುಟುಂಬ ಪೋಷಣವನ್ನು ಮಾಡಲು ಕಷ್ಟಸಾಧ್ಯ-ವಾಗುತ್ತದೆಂಬ ದೋಷವು ಕಾಣುತ್ತದೆ. ಅದನ್ನು ಬಿಟ್ಟು ವೈಶ್ಯರ ಕೃಷ್ಯಾದಿ ಕರ್ಮಗಳಲ್ಲಿ ತೊಡಗಿದರೆ ಅದರಲ್ಲೂ ದೋಷವು ಕಾಣುತ್ತದೆ. ಭೂಮಿಯನ್ನು ಕರ್ಷಣ ಮಾಡುವಾಗ, ಪ್ರಾಣಿಗಳ ಹಿಂಸೆಯಾಗುತ್ತದೆ. ತಾನು ಬಿಸಿಲು, ಮಳೆ ಮುಂತಾದ ಬಾಧೆಗಳನ್ನು ಅನುಭವಿಸಬೇಕಾಗುತ್ತದೆ. ದ್ರವ್ಯ ವ್ಯಯವನ್ನು ಮಾಡಿ ಕಷ್ಟಪಟ್ಟು ಕೃಷಿ ಮಾಡಿದಾಗ ಒಮ್ಮೊಮ್ಮೆ ಮಳೆಯು ಇಲ್ಲದೆ ಮಾಡಿದ್ದೆಲ್ಲ ನಷ್ಟವಾಗಿ ತುಂಬಾ ಶೋಕವನ್ನು ಹೊಂದುವ ಪ್ರಸಂಗವಿದೆ. ಅದೇ ರೀತಿ ಕ್ಷತ್ರಿಯರ

ಧರ್ಮವಾದ ಯುದ್ಧದಲ್ಲಿ, ತನ್ನ ನಾಶ, ತನ್ನ ರಾಜ್ಯ ನಾಶ ಮೊದಲಾದ ಭಯವು ಬಂದೇ ಬರುವದು. ಶೂದ್ರರಿಗೆ ಸೇವಾವೃತ್ತಿಯು ಕಷ್ಟಕರವಾದದ್ದು.

"ಈ ರೀತಿಯಾಗಿ ಬೆಂಕಿಯು ನಿಯತವಾಗಿ ಹೊಗೆಯಿಂದ ಕೂಡಿದಂತೆ ಎಲ್ಲ ವರ್ಣ ಧರ್ಮಗಳೂ ದೋಷದಿಂದ ಕೂಡಿಯೇ ಇವೆ. ಅಗ್ನಿಯಲ್ಲಿ ಹೊಗೆಯಿದೆಯೆಂದು ಅಗ್ನಿಯನ್ನು ಪರಿತ್ಯಾಗ ಮಾಡಿದರೆ ಅಡಿಗೆ ಇಲ್ಲದಂತಾಗಿ ಉಪವಾಸ ಬೀಳಬೇಕಾಗುತ್ತದೆ. ಮನೆಯಲ್ಲಿ ದೀಪವಿಲ್ಲದಂತಾಗಿ ಕಗ್ಗತ್ತಲೆಯಲ್ಲಿ ಕಷ್ಟಪಡಬೇಕಾಗುತ್ತದೆ. ಆದುದರಿಂದ ಹೇಗೆ ಅಗ್ನಿಯಲ್ಲಿ ಹೊಗೆಯ ದೋಷ-ವಿದ್ದರೂ ಅಗ್ನಿಯನ್ನು ನಾವು ಸರ್ವಥಾ ಬಿಡುವುದಿಲ್ಲವೋ ಹಾಗೆ ಆವಾವ ವರ್ಣಧರ್ಮದಲ್ಲಿ ಪ್ರತಿಯೊಂದರಲ್ಲಿಯೂ ದೋಷ ಇದ್ದುದರಿಂದ ಸ್ವಧರ್ಮವನ್ನು ಬಿಟ್ಟರೆ ಇವನಿಗೆ ಉತ್ತಮ ಸಿದ್ಧಿಯೇ ಇಲ್ಲದಂತಾಗುತ್ತದೆ."

ಪರಧರ್ಮವನ್ನು ಆಶ್ರಯಿಸಿದವನಿಗೆ ಸ್ವಧರ್ಮ ತ್ಯಾಗದಿಂದ ಒಂದು ಪಾಪ. ಜೊತೆಗೆ ಪರಧರ್ಮ ಆಚರಣೆಯು ಶಾಸ್ತ್ರ ನಿಷಿದ್ಧವಾದುದರಿಂದ ಅದರಿಂದಲೂ ಪಾಪ ಸಂಭವಿಸುತ್ತದೆ. ಪ್ರತಿ ಒಂದು ಧರ್ಮದಲ್ಲಿಯೂ ದೋಷ ಇದ್ದ ಮೇಲೆ ಪರಧರ್ಮದಲ್ಲಿಯೂ ದೋಷ ಇರುವುದರಿಂದ ಅದರಿಂದ ಮತ್ತೊಂದು ಪಾಪ. ಆದುದರಿಂದ ಸ್ವಧರ್ಮ ತ್ಯಾಗ ಮಾಡಿದವನಿಗೆ ಸ್ವಧರ್ಮಾನುಷ್ಠಾನದಿಂದ ಉಂಟಾಗತಕ್ಕ ಉತ್ತಮ ಸಿದ್ಧಿಯು ಇಲ್ಲದಂತಾಗುವುದು ಮಾತ್ರವಲ್ಲದೆ, ಈ ರೀತಿಯಲ್ಲಿ ಮೂರು ದೋಷಗಳು ಪ್ರಾಪ್ತವಾಗುತ್ತವೆ. ಆದುದರಿಂದ ಸ್ವಧರ್ಮಾಚರಣೆಯಲ್ಲಿ ದೋಷವಿದ್ದರೂ, ಸ್ವಧರ್ಮವನ್ನು ತ್ಯಾಗ ಮಾಡಬಾರದು.

ತಮ್ಮ ಮನೆಯಲ್ಲಿ ವಾಸ ಮಾಡಲು ಹೆಚ್ಚಿನ ಅನುಕೂಲತೆ ಇಲ್ಲವೆಂದು ತಿಳಿದು ತಮ್ಮ ಮನೆಯನ್ನು ಬಿಟ್ಟು ಇನ್ನೊಬ್ಬರ ಮನೆ ಹೊಕ್ಕುವುದು ನ್ಯಾಯವಾಗುವುದಿಲ್ಲ. ತನ್ನ ಮನೆಯಲ್ಲಿಯೇ ಎಷ್ಟು ಕಷ್ಟವಾದರೂ ತಾನು ಇರಬೇಕಾಗುತ್ತದೆ. ಅದರಂತೆ ಸ್ವಧರ್ಮದಲ್ಲಿಯೇ ತಾನು ಇರಬೇಕು. ಭಕ್ತಿ-ಪೂರ್ವಕವಾಗಿ ತಮ್ಮ ಧರ್ಮಾಚರಣೆಯಲ್ಲಿರುವಾಗ ದೋಷಗಳು ಎಲ್ಲವೂ ಪರಿಶುದ್ಧವಾಗುವವು.

ಉದಾಹರಣೆ: ಕ್ಷತ್ರಿಯನು ಯುದ್ಧವನ್ನು ಮಾಡುವಾಗ ಹಿಂಸೆಯೆಂಬ ದೋಷವು ಪ್ರಾಪ್ತವಾಗುವುದಾದರೂ ಭಗವದ್ಭಕ್ತಿಪೂರ್ವಕವಾಗಿ, ಭಗವದಾರಾಧನಾ ಬುದ್ಧಿಯಿಂದ ಮಾಡಿದರೆ ಹಿಂಸಾ ದೋಷವೇ ಇಲ್ಲದಂತಾ–ಗುವುದು. ಭಗವದ್ಭಕ್ತಿ ಉಳ್ಳವನಾಗಿ ಯುದ್ಧ ಮಾಡತಕ್ಕವನಿಗೆ ತನ್ನ ನಾಶ, ತನ್ನ ರಾಜ್ಯ ನಾಶ ಆದರೂ ದುಃಖವಾಗುವುದಿಲ್ಲ. ಭಗವತ್ಪ್ರೀತ್ಯರ್ಥವಾಗಿ ಮಾಡಿದರೂ, ಯುದ್ಧದಿಂದ ಈ ರಾಜ್ಯವು ನಾಶವಾದರೆ ಇದಕ್ಕಿಂತ ದೊಡ್ಡದಾದ ಮೋಕ್ಷ ಸಾಮ್ರಾಜ್ಯವು ತನಗೆ ಸಿಕ್ಕುತ್ತದೆಂದು ತಿಳಿದು ದುಃಖ ಪಡುವ ಸಂಭವವೂ ಇರುವುದಿಲ್ಲ.

ಹಾಗೆಯೇ ಬ್ರಾಹ್ಮಣನಾದವನಿಗೆ ವೇದಾಧ್ಯಯನ, ತಪಸ್ಸು ಮೊದಲಾದುವುಗಳನ್ನು ಭಗವದ್ಭಕ್ತಿಪೂರ್ವಕವಾಗಿ, ಭಗವದಾರಾಧನ ರೂಪವಾಗಿ ಮಾಡುತ್ತಿರುವಾಗ ಕುಟುಂಬ ಪೋಷಣದ ಚಿಂತೆಯೇ ಅವನಿಗೆ ಬರಲು ಪ್ರಸಂಗವಿಲ್ಲ. ಪರಮಾತ್ಮನ ಧ್ಯಾನದಿಂದ ಅವನು ತೃಪ್ತನಾಗಿರುವಾಗ ಬೇರೆ ಕಡೆಗೆ ಅವನಿಗೆ ಲಕ್ಷ್ಯವೇ ಇರುವುದಿಲ್ಲ. ಈ ಲೋಕದಲ್ಲಿ ತಪಸ್ಸಿಗಾಗಿ ಕೆಲವು ಸಮಯದ ತನಕ ಕಷ್ಟವನ್ನು ಅನುಭವಿಸಿದರೂ, ಪರಲೋಕದಲ್ಲಿ ಶಾಶ್ವತವಾದ ಆನಂದವು ಸಿಗುತ್ತದೆಂದು ಅವನು ಸಮಾಧಾನವನ್ನು ಮಾಡಿಕೊಳ್ಳುತ್ತಾನೆ. ಔಷಧವನ್ನು ಸ್ವೀಕರಿಸುವಾಗ ಆ ಔಷಧವು ಕಹಿಯಾಗಿ ಇರುವುದರಿಂದ ಅದಕ್ಕೆ ಬಹಳ ಪಥ್ಯ ಮಾಡಬೇಕಾದುದರಿಂದ ಆಗತಕ್ಕ ಕ್ಲೇಶಗಳನ್ನು ಸಹಿಸುವುದರಿಂದ ಮುಂದೆ ಬಹು ಕಾಲದಲ್ಲಿ ಆರೋಗ್ಯದಿಂದ ಸುಖವಾಗಿ ಇರಬಹುದು ಎಂದು ತಿಳಿದು ದುಃಖವನ್ನು ಸಹನ ಮಾಡುವಂತೆ ಬ್ರಾಹ್ಮಣನು ಸ್ವಧರ್ಮದಲ್ಲಿದ್ದಾಗ ಸಂಭವಿಸಬಹುದಾದ ದುಃಖಗಳನ್ನು ಭವದ್ಭಕ್ತಿಯಿಂದ ಭಗವಂತನ ಪ್ರೀತಿಗಾಗಿ, ಮೋಕ್ಷ ಸುಖಕ್ಕಾಗಿ ಸಹನ ಮಾಡಲು ಸಮರ್ಥನಾಗುತ್ತಾನೆ. ಆದುದರಿಂದ ಸ್ವಧರ್ಮಾನುಷ್ಠಾನವನ್ನು ಮಾಡಬೇಕು.

ಆ ಧರ್ಮಾನುಷ್ಠಾನುದಿಂದ ಮೋಕ್ಷರೂಪವಾದ ಉತ್ತಮ ಸಿದ್ಧಿಯ ಕ್ರಮ ಹೀಗೆ: ಧರ್ಮಾನುಷ್ಠಾನದಿಂದ ಮನಸ್ಸಿನ ಶುದ್ಧಿ. ಶುದ್ಧವಾದ ಮನಸ್ಸುಳ್ಳವನಿಗೆ ಧೈರ್ಯದಿಂದ ಮನೋನಿಗ್ರಹ. ಅದರಿಂದ ಶಬ್ದಾದಿ ವಿಷಯ ಸಂಪರ್ಕವನ್ನು

ಬಿಟ್ಟು ಬಿಡಲು ಶಕ್ಯವಾಗುತ್ತದೆ. ವಿಷಯಗಳ ಸಂಪರ್ಕವಾಗದೆ ಇದ್ದರೆ ರಾಗದ್ವೇಷಗಳು ಇಲ್ಲದಂತಾಗವವು. ಅಂಥವನು ಜನಜಂಗುಳಿ ಇಲ್ಲದ ಏಕಾಂತದಲ್ಲಿ ವಾಸ ಮಾಡುವನು. ಮದಕ್ಕೆ ಕಾರಣವಾಗದ ಲಘುವಾದ, ಸಾತ್ವಿಕವಾದ ಆಹಾರವನ್ನು ಸೇವನೆ ಮಾಡುತ್ತ ಧ್ಯಾನ ಯೋಗದಲ್ಲಿ ನಿರತನಾಗುವನು. ಅವನಿಗೆ ದಿನೇ ದಿನೇ ವಿಷಯದಲ್ಲಿ ಅನಾಸಕ್ತಿ ಮತ್ತು ಪರಮಾತ್ಮನಲ್ಲಿ ಪ್ರೇಮ ಹೆಚ್ಚುತ್ತ, ಅಹಂಕಾರ, ಕಾಮ, ಕ್ರೋಧಾದಿಗಳನ್ನು ಬಿಟ್ಟ-ವನಾಗಿ, ಶಾಂತನಾಗಿ ಬ್ರಹ್ಮಧ್ಯಾನ ಮಾಡುತ್ತ, ಪ್ರಸನ್ನಚಿತ್ತನಾಗಿ ಯಾವುದರಿಂ-ದಲೂ ದುಃಖವನ್ನು ಹೊಂದುವುದಿಲ್ಲ. ಯಾವುದನ್ನೂ ಅಪೇಕ್ಷಿಸುವುದಿಲ್ಲ. ಎಲ್ಲ ಪ್ರಾಣಿಗಳಲ್ಲಿಯೂ ಅವರವರ ಯೋಗ್ಯತೆಗೆ ಸರಿಯಾದ ಭಾವನೆಯನ್ನು ಇಡುವ ಸಮಚಿತ್ತನಾಗಿ, ಪರಮಾತ್ಮನ ಭಕ್ತಿಯನ್ನು ಹೆಚ್ಚು ಮಾಡಿಕೊಳ್ಳುತ್ತಾನೆ. ಆ ಉತ್ತಮ ಭಕ್ತಿಯಿಂದ ಪರಮಾತ್ಮನನ್ನು ಎಷ್ಟು ತಿಳಿದುಕೊಳ್ಳಲು ಸಾಧ್ಯವಿದೆಯೋ ಅಷ್ಟು ಯಥಾರ್ಥವಾಗಿ ತಿಳಿದುಕೊಳ್ಳುತ್ತಾನೆ. ಈ ರೀತಿಯಾಗಿ ಸಮಸ್ತ ವರ್ಣಾ-ಶ್ರಮೋಚಿತ ಧರ್ಮಗಳನ್ನು ಯಾವಾಗಲೂ ತಪ್ಪದೆ ಮಾಡತಕ್ಕವನಾಗಿ ನನ್ನನ್ನೇ ಆಶ್ರಯಿಸಿಕೊಂಡು ನನ್ನ ಅನುಗ್ರಹಕ್ಕೆ ಪಾತ್ರನಾಗಿ, ಶಾಶ್ವತವಾದ ಉತ್ತಮ ಸ್ಥಾನವನ್ನು ಹೊಂದುತ್ತಾನೆ.

"ಎಲ್ಲ ಕರ್ಮಗಳನ್ನು ನನಗೆ ಸಮರ್ಪಣ ಮಾಡಿ, ನನ್ನನ್ನೇ ಸರ್ವೋತ್ತಮನೆಂದು ತಿಳಿದು ನನ್ನಲ್ಲೇ ಮನಸ್ಸಿಡತಕ್ಕವನಾಗು. ನನ್ನ ಅನುಗ್ರಹ-ದಿಂದ ನಿನಗೆ ಎಲ್ಲ ದುಃಖಗಳು ಪರಿಹಾರವಾಗುತ್ತದೆ." (ಇಪ್ಪತ್ತೊಂಭತ್ತನೆ ದಿನದ ಉಪನ್ಯಾಸವು ಮುಗಿಯಿತು.)

***

ಶ್ರೀಕೃಷ್ಣ ಪರಮಾತ್ಮನು ಅರ್ಜುನನ್ನು ಕುರಿತು ಉಪದೇಶ ಮಾಡುತ್ತಾನೆ: "ಎಲೋ ಅರ್ಜುನಾ! ನಾನು ಇಷ್ಟು ಉಪದೇಶ ಮಾಡಿದ್ದನ್ನು, 'ನನಗೆ ಹೇಳತಕ್ಕ-ವರು ಯಾರು?' ಎಂಬ ಅಹಂಕಾರದಿಂದ ಕೇಳದೆ ಇದ್ದರೆ, ಪುರುಷಾರ್ಥಗಳಿಂದ ರಹಿತನಾಗುತ್ತಿ. 'ನಾನು ಯುದ್ಧವನ್ನು ಮಾಡುವುದಿಲ್ಲ' ಎಂದು ನೀನು ಸಂಕಲ್ಪ

ಮಾಡಿದರೂ, ನಿನ್ನ ಪೂರ್ವ ಸಂಸ್ಕಾರಕ್ಕೆ ಅನುಗುಣವಾಗಿ, ಈಶ್ವರನ ಇಚ್ಛೆಯಿಂದ ಯುದ್ಧ ಮಾಡಬೇಕೆಂದು ಪ್ರೇರೇಪಿಸಲ್ಪಡುತ್ತಿ. ನೀನು ಇಚ್ಛೆ ಇಲ್ಲದಿದ್ದರೂ, ಪರಮಾತ್ಮನ ಅಧೀನನಾಗಿ ಯುದ್ಧವನ್ನು ಮಾಡತಕ್ಕವನೇ ಆಗುತ್ತಿ. ಈಶ್ವರನು ಸಮಸ್ತಪ್ರಾಣಿಗಳ ಹೃದಯದಲ್ಲಿ ನಿಯಾಮಕನಾಗಿದ್ದಾನೆ. ಅವನನ್ನು ಸರ್ವ ಪ್ರಕಾರದಿಂದಲೂ ಮೊರೆ ಹೊಂದಿದರೆ, ಅವನ ಅನುಗ್ರಹದಿಂದ ಶಾಂತಿಯ ಶಾಶ್ವತ ಸ್ಥಾನವು ನಿನಗೆ ಸಿಗುತ್ತದೆ''.

ಇಲ್ಲಿ ವಿಶೇಷಾಂಶ: ಇಲ್ಲಿಗೆ ಶ್ರೀಕೃಷ್ಣನ ಉಪದೇಶವು ಮುಗಿಯಿತು. ಈ ಉಪಸಂಹಾರದಲ್ಲಿ ಶ್ರೀಕೃಷ್ಣನು ಜೀವೇಶ್ವರರ ಭೇದವನ್ನು, ಪರಮಾತ್ಮನು ಸರ್ವ ನಿಯಾಮಕನೆಂದು ಅವನ ಮಹಿಮೆಯನ್ನು, ಅವನ ಅನುಗ್ರಹದಿಂದಲೇ ಉತ್ತಮ ಸುಖಪ್ರಾಪ್ತಿಯೆಂದು ಹೇಳಿದ್ದು ಮಧ್ವಸಿದ್ಧಾಂತದ ಸಾರವಾಗಿರುತ್ತದೆ. ಇಲ್ಲಿನ ಈಶ್ವರ ಶಬ್ದಕ್ಕೆ ಹದಿನೈದನೆಯ ಅಧ್ಯಾಯದಲ್ಲಿ ಶಂಕರಾಚಾರ್ಯರು ಭಾಷ್ಯದಲ್ಲಿ ಹೇಳಿದಂತೆ ನಾರಾಯಣನೆಂದು ಅರ್ಥವಾಗುತ್ತದೆ. ಆದುದರಿಂದ ನಾರಾಯಣನ ಸರ್ವೋತ್ತಮತ್ವವು ಗೀತೆಯ ಉಪಸಂಹಾರ ಎಂದಾಯಿತು.

ಈ ಒಂದೇ ಶ್ಲೋಕವನ್ನು ನೋಡಿ ಇಡೀ ಗೀತೆಯ ಅಭಿಪ್ರಾಯವನ್ನು, ಸ್ಥಾಲೀಪುಲಾಕನ್ಯಾಯ (ಅಂದರೆ ಅನ್ನ ಬೇಯಿಸಲಿಕ್ಕೆ ಇಟ್ಟಾಗ ಇದು ಸರಿಯಾಗಿ ಪಕ್ವವಾಗಿದೆಯೋ ಇಲ್ಲವೋ ಎಂಬ ಸಂಶಯವನ್ನು ಒಂದು ಅನ್ನದ ಕಾಳನ್ನು ಪರೀಕ್ಷಿಸಿ ಪಾತ್ರೆಯಲ್ಲಿರತಕ್ಕ ಎಲ್ಲ ಅನ್ನವು ಸರಿಯಾಗಿ ಬೆಂದಿದೆ ಎಂದು ನಿಶ್ಚಯ ಮಾಡುವ ನ್ಯಾಯ) ದಿಂದ ತಿಳಿಯಬಹುದು.

"ಎಲೋ ಅರ್ಜುನಾ! ಇಷ್ಟರವರೆಗೆ ಅತ್ಯಂತ ಗೋಪ್ಯವಾದ, ತಿಳಿದುಕೊಳ್ಳಲಿಕ್ಕೆ ಯೋಗ್ಯವಾದ ತತ್ವವು ನಿನಗೆ ಹೇಳಲ್ಪಟ್ಟಿತು. ಇದನ್ನೆಲ್ಲ ಚೆನ್ನಾಗಿ ವಿಚಾರ ಮಾಡಿ, ನಿನಗೆ ಇಚ್ಛೆ ಬಂದಂತೆ ಮಾಡು. ಅತ್ಯಂತ ಗುಹ್ಯವಾದ, ಉತ್ತಮವಾದ ಮಾತನ್ನು ಮತ್ತೆ ಕೇಳು. ನೀನು ನನಗೆ ಅತ್ಯಂತ ಇಷ್ಟನಾಗಿದ್ದಿ. ನಿನಗೆ ಹಿತವನ್ನೇ ನಾನು ಹೇಳುತ್ತೇನೆ. ನನ್ನಲ್ಲಿ ಮನಸ್ಸಿಡು. ನನ್ನಲ್ಲಿ ಭಕ್ತಿ ಮಾಡು. ನನ್ನನ್ನೇ ನೀನು ಹೊಂದುತ್ತಿ. ಇದು ಸತ್ಯವಾದ ಮಾತು. ನಾನು ಪ್ರತಿಜ್ಞೆ ಮಾಡಿ

ಹೇಳುತ್ತೇನೆ. ನೀನು ನನಗೆ ಅತ್ಯಂತ ಪ್ರಿಯನಾದುದರಿಂದ ನನ್ನ ಮಾತಿನಲ್ಲಿ ಸಂಶಯ ಮಾಡುವ ಅವಕಾಶವಿಲ್ಲ.

ನನ್ನಲ್ಲಿ ಮನಸ್ಸು ಇಡುವ ಕ್ರಮ ಹೇಗೆಂದರೆ, ಇತರ ದೇವತೆಗಳನ್ನೇ ಉದ್ದೇಶ ಮಾಡಿಕೊಂಡು ಮಾಡತಕ್ಕ ಎಲ್ಲ ಧರ್ಮಗಳನ್ನು ಬಿಟ್ಟುಬಿಡು. ಸರ್ವೋತ್ತಮನಾದ ನನ್ನೊಬ್ಬನನ್ನೇ ಮೊರೆ ಹೋಗು. ನನ್ನನ್ನು ಹೊಂದುವುದೆಂದರೆ, ನಾನು ಸರ್ವೋತ್ತಮನೆಂದು ತಿಳಿದು ಎಲ್ಲರಿಗಿಂತಲೂ ನನ್ನಲ್ಲಿ ಹೆಚ್ಚಿನ ಪ್ರೇಮ ಮಾಡಿ, ಸರ್ವವನ್ನೂ ನನ್ನಲ್ಲಿ ಸಮರ್ಪಿಸಿ, ಕಾಯಿಕ, ವಾಚಿಕ ಹಾಗೂ ಮಾನಸಿಕವಾದ ತ್ರಿವಿಧ ಪೂಜೆಯನ್ನು ಮಾಡುತ್ತ, ನನ್ನ ದಾಸನಾಗಿದ್ದೇನೆ ಎಂದು ತಿಳಿದು, ನಾನು ರಕ್ಷಣೆ ಮಾಡೇ ಮಾಡುತ್ತೇನೆಂಬ ವಿಶ್ವಾಸ ಇಟ್ಟು (ಇದನ್ನೇ ಶರಣಾಗತಿ ಎನ್ನುತ್ತಾರೆ) ಮೊರೆ ಹೋಗುವುದು. ಇದು ಮೋಕ್ಷ ಫಲಕ್ಕೆ ಕಾರಣವಾಗಿದೆ. ಇಂಥ ಶರಣಾಗತಿಯನ್ನು ಹೊಂದು. ನಿನ್ನನ್ನು ಸಂಸಾರ ಬಂಧದಿಂದ ಬಿಡುಗಡೆ ಮಾಡುತ್ತೇನೆ. ನೀನು ದುಃಖ ಪಡಬೇಡ."

ಇಲ್ಲಿ ವಿಶೇಷಾಂಶ: ಇಲ್ಲಿ ಇತರ ಭಾಷ್ಯಕಾರರು 'ಸರ್ವಧರ್ಮಗಳನ್ನು ಪರಿತ್ಯಾಗ ಮಾಡಿ ನಿರ್ಗುಣ ಬ್ರಹ್ಮನೊಂದಿಗೆ ಐಕ್ಯವನ್ನು ಉಪಾಸನೆ ಮಾಡಬೇಕು. ಇದರಿಂದ ಮೋಕ್ಷವು ಸಿಗುತ್ತದೆ' ಎಂಬ ಅರ್ಥವನ್ನು ಬರೆದಿರುತ್ತಾರೆ. ಈ ಅರ್ಥವು ಯುಕ್ತವಲ್ಲ. ಸರ್ವಧರ್ಮವನ್ನು ಬಿಡಬೇಕೆಂದು ಕೃಷ್ಣನು ಹೇಳಿದರೆ, ಇಷ್ಟರವರೆಗೆ ಧರ್ಮವನ್ನು ಮಾಡಬೇಕೆಂದು ಹೇಳಿದ್ದು ಹುಚ್ಚರ ವಾಕ್ಯದಂತೆ ವಿರುದ್ಧವಾಗುವುದಿಲ್ಲವೇ? 'ಅಧಮಾಧಿಕಾರಿಗಳಿಗೆ ಧರ್ಮಾನುಷ್ಠಾನವನ್ನು ಮಾಡಬೇಕೆಂದು ಹೇಳಿ ಉತ್ತಮಾಧಿಕಾರಿಗಳಿಗೆ ಯಾವ ಧರ್ಮವೂ ಬೇಡ ಎಂದು ಈಗ ಕೃಷ್ಣನು ಹೇಳುವುದರಿಂದ ಪರಸ್ಪರ ವಿರೋಧವು ಬರುವುದಿಲ್ಲ' ಎಂದು ಇತರ ಭಾಷ್ಯಕಾರರು ಬರೆಯುತ್ತಾರೆ. ಅದು ಯುಕ್ತವಲ್ಲ. ಅರ್ಜುನನು ಉತ್ತಮಾಧಿಕಾರಿ. ಏಕೆಂದರೆ ಅವನು ದೇವೇಂದ್ರನು. ಅವನೇ ಅಧಮಾಧಿಕಾರಿಯಾದರೆ, ಇನ್ನು ಉತ್ತಮಾಧಿಕಾರಿಗಳು ಬೇರೆ ಯಾರಿದ್ದಾರೆ? ಅವನು ದಿವ್ಯ ಚಕ್ಷುಸ್ಸಿನಿಂದ ವಿಶ್ವರೂಪ ದರ್ಶನವನ್ನು ಮಾಡಿದ್ದಾನೆಂದು ಹಿಂದೆ ಹೇಳಲಾಗಿದೆ.

ಅಂಥ ಬ್ರಹ್ಮಸಾಕ್ಷಾತ್ಕಾರಿಯಾದ ಉತ್ತಮಾಧಿಕಾರಿಯಾದ ಅರ್ಜುನನು, ಇತರ ಭಾಷ್ಯಕಾರರ ವ್ಯಾಖ್ಯಾನದ ಪ್ರಕಾರ ಎಲ್ಲ ಧರ್ಮಗಳನ್ನು ಬಿಡಬೇಕಾಗಿತ್ತು. ಹಾಗೆ ಮಾಡದೆ ಅರ್ಜುನನು ಯುದ್ಧವನ್ನು ಮಾಡಿದ್ದಾನೆ. ಲೋಕಸಂಗ್ರಹಕ್ಕೋಸ್ಕರವಾಗಿ ಅರ್ಜುನನು ಯುದ್ಧ ಮಾಡಿದನೆಂದು ಹೇಳುವುದು ಯುಕ್ತವಲ್ಲ. ಲೋಕಸಂಗ್ರಹ-ಕ್ಕೋಸ್ಕರ ಕರ್ಮಾನುಷ್ಠಾನವನ್ನು ಅರ್ಜುನನಂತೆ ಎಲ್ಲ ಜ್ಞಾನಿಗಳು ಮಾಡ-ಬೇಕಾಗುತ್ತದೆ. ಆದುದರಿಂದ ಸರ್ವಧರ್ಮವನ್ನು ಬಿಡು ಎಂಬುದು ಯಾರನ್ನು ಕುರಿತು? ಎಂಬ ಪ್ರಶ್ನೆಯು ಇಲ್ಲಿ ಉಳಿದೇ ಉಳಿಯುತ್ತದೆ.

ಇಷ್ಟೇ ಅಲ್ಲದೆ ಎಲ್ಲ ಧರ್ಮವನ್ನು ಬಿಟ್ಟು ನನ್ನಲ್ಲಿ ಶರಣಾಗತಿಯನ್ನು ಹೊಂದು ಎಂದು ಇಲ್ಲಿ ಹೇಳಲಾಗಿದೆ. ಶರಣಾಗತಿ ಎಂದರೆ ಹಿಂದೆ ಹೇಳಿದ ಪ್ರಕಾರ, ಭಕ್ತಿಪೂರ್ವಕವಾಗಿ, ಅಖಂಡವಾಗಿ ಕಾಯಿಕ, ವಾಚಿಕ, ಮಾನಸಿಕವಾದ ಪರಮಾತ್ಮನ ಪೂಜೆಯೆಂದು ಅರ್ಥವಾಗುತ್ತದೆ. ಸರ್ವಧರ್ಮವನ್ನು ಬಿಟ್ಟಮೇಲೆ ತ್ರಿವಿಧ ಪೂಜೆ ಮಾಡುವುದು ಕೂಡುವುದಿಲ್ಲ. ಆದುದರಿಂದ ಇತರ ದೇವತೆಗಳನ್ನೇ ಉದ್ದೇಶವಿಟ್ಟು ಮಾಡತಕ್ಕ ಕಾಮ್ಯಕರ್ಮಾನುಷ್ಠಾನವನ್ನು ಮಾಡಬಾರದೆಂದು ಉಪಸಂಹಾರ ಎಂದು ಹೇಳಿದರೆ ಯಾವ ವಿರೋಧವು ಬರುವುದಿಲ್ಲ.

ನಿರ್ಗುಣ ಬ್ರಹ್ಮೈಕ್ಯ ಉಪಾಸನೆಯನ್ನು ಇಲ್ಲಿ ಶ್ರೀಕೃಷ್ಣನು ಹೇಳಿದ್ದಾನೆಂದು ಅರ್ಥ ಮಾಡುವುದು ಎಷ್ಟು ಮಾತ್ರಕ್ಕೂ ಕೂಡುವುದಿಲ್ಲ. ಲೋಕದಲ್ಲಿ ಶರಣಾಗತಿ ಎಂಬ ಶಬ್ದವು ಸರ್ವಾತ್ಮನಾ ರಕ್ಷಣೆ ಮಾಡತಕ್ಕ ಸ್ವಾಮಿಯನ್ನು ಮೊರೆ ಹೋಗುವುದು ಎಂಬ ಅರ್ಥದಲ್ಲಿ ಪ್ರಯೋಗ ಮಾಡಲ್ಪಡುತ್ತದೆ. ಆದುದರಿಂದ ಐಕ್ಯ ಉಪಾಸನೆಯೆಂದು ಅರ್ಥ ಮಾಡುವುದು ಬಹಳ ಕ್ಲಿಷ್ಟವಾಗುತ್ತದೆ.

ಅಲ್ಲದೆ ಈ ಶರಣಾಗತಿಯನ್ನು ಹೊಂದಿದವರಿಗೆ ಮೋಕ್ಷವನ್ನು 'ಕೊಡುತ್ತೇನೆ' ಎಂದು ಶ್ರೀಕೃಷ್ಣನು ಹೇಳಿದ್ದಾನೆ. ಅದ್ವೈತಭಾಷ್ಯದ ಪ್ರಕಾರ, ಮೋಕ್ಷವೆಂದರೇನು? ಬ್ರಹ್ಮೈಕ್ಯವೇ ಮೋಕ್ಷವೆಂದರೆ ಬ್ರಹ್ಮೈಕ್ಯವು ಈಗಲೂ ಇರುತ್ತದೆ. ಈಗ ಇಲ್ಲದೆ ಇದ್ದದ್ದು ಹೊಸದಾಗಿ ಬಂದರೆ, ಅದಕ್ಕೆ ಒಂದು ಕಾಲದಲ್ಲಿ ನಿವೃತ್ತಿಯು ಆಗಬೇಕಾಗುತ್ತದೆ. 'ತತ್ವಮಸಿ' ಎಂಬ ಶ್ರುತಿಯಲ್ಲಿ 'ಅಸಿ' ಎಂಬ ಲಟ್ ಪ್ರಯೋಗದಿಂದ ಈಗಲೂ ಐಕ್ಯವಿದೆ ಎಂದು ಅದ್ವೈತ ಭಾಷ್ಯ

ಪ್ರಕಾರ ಅರ್ಥವು ಆಗುತ್ತದೆ. ಆದುದರಿಂದ ಮೋಕ್ಷವೆಂದರೆ ಬ್ರಹ್ಮೈಕ್ಯವೆಂದು ಹೇಳಿದರೆ, ಈಗಲೂ ಮೋಕ್ಷವಿದೆ ಎಂತಾಯಿತು. ಶ್ರೀಕೃಷ್ಣನು ಮೋಕ್ಷವನ್ನು ಕೊಡುತ್ತೇನೆಂದು ಹೇಳಿದ್ದು ಕೂಡುವುದಿಲ್ಲ.

ಬ್ರಹ್ಮೈಕ್ಯದ ಅನುಭವವೇ ಮೋಕ್ಷವೆಂದೂ, ಅದು ಈಗ ಇಲ್ಲವೆಂದೂ, ಅದನ್ನು ಶ್ರೀಕೃಷ್ಣನು ಕೊಡುತ್ತಾನೆಂದೂ ಅರ್ಥ ಮಾಡಿದರೆ, ಮೋಕ್ಷದಲ್ಲಿ ಎರಡು ಪದಾರ್ಥವು ಇರಬೇಕಾಗಿ ಬಂತು. ಒಂದು ಬ್ರಹ್ಮೈಕ್ಯ, ಮತ್ತೊಂದು ಅದರ ಅನುಭವ. ಹೀಗೆ ಎರಡು ವಸ್ತುಗಳನ್ನು ಮೋಕ್ಷದ ಅವಸ್ಥೆಯಲ್ಲಿ ಒಪ್ಪಿದಂ-ತಾಯಿತು. ಅದು ಅದ್ವೈತ ಸಿದ್ಧಾಂತಕ್ಕೆ ವಿರುದ್ಧ. ಆದುದರಿಂದ ಅದ್ವೈತ ಭಾಷ್ಯಕಾರರು ಹೇಳಿದ ಈ ಶ್ಲೋಕದ ಪ್ರತಿಯೊಂದು ಶಬ್ದದ ಅರ್ಥವೂ ಅಯುಕ್ತವಾಗಿದೆ.

"ಎಲೋ ಅರ್ಜುನ! ತಪಸ್ಸು ಮಾಡದಿದ್ದವನಿಗೆ, ಅಭಕ್ತನಿಗೆ, ಕೇಳ-ಬೇಕೆಂದು ಇಚ್ಛೆ ಇಲ್ಲದವನಿಗೆ, ನನ್ನಲ್ಲಿ ದೋಷವನ್ನು ಆರೋಪಿಸತಕ್ಕವನಿಗೆ ಈ ವಿಷಯುವನ್ನು ಉಪದೇಶ ಮಾಡಬೇಡ. ಈ ನನ್ನ ಉಪದೇಶವು ಬಹಳ ಶ್ರೇಷ್ಠ-ವಾದದ್ದು, ಅತ್ಯಂತ ಗೋಪ್ಯವಾದದ್ದು. ನನ್ನ ಭಕ್ತರಿಗೆ ಇದನ್ನು ಹೇಳಬೇಕು. ಭಕ್ತರಲ್ಲಿ ಹೇಳಿದರೆ, ನನ್ನಲ್ಲಿ ಶ್ರೇಷ್ಠವಾದ ಭಕ್ತಿಯು ಉತ್ಪನ್ನವಾಗುತ್ತದೆ. ಅವನು ನನ್ನನ್ನು ಹೊಂದುತ್ತಾನೆ. ಸಂಶಯವಿಲ್ಲ. ಗೀತೆಯ ಉಪದೇಶ ಮಾಡತಕ್ಕವರಿಗೆ ಸಮಾನನಾದ, ನನಗೆ ಅತ್ಯಂತ ಪ್ರೀತಿ ಪಾತ್ರನಾದವನು, ಮನುಷ್ಯರಲ್ಲಿ ಇಲ್ಲಿಯ-ವರೆಗೂ ಇದ್ದಿಲ್ಲ, ಈಗಲೂ ಇಲ್ಲ. ಇನ್ನು ಮುಂದೆಯೂ ಇಲ್ಲ.

ಈ ಉಪದೇಶವನ್ನು ಯಾರು ಅಧ್ಯಯನ ಮಾಡುತ್ತಾರೋ, ಅವರು ಜ್ಞಾನಯಜ್ಞದಿಂದ ನನ್ನನ್ನು ಪೂಜೆ ಮಾಡಿದಂತಾಗುತ್ತದೆ. ಶ್ರದ್ಧೆಯಿಂದ ಈ ನನ್ನ ಉಪದೇಶವನ್ನು ಯಾರು ಕೇಳುತ್ತಾರೋ, ಅವನು ಕೂಡಾ ಮುಕ್ತನಾಗಿ ಉತ್ತಮ ಲೋಕವನ್ನು ಹೊಂದುತ್ತಾನೆ."

"ಎಲೋ ಅರ್ಜುನ! ನಾವು ಇಷ್ಟರತನಕ ಹೇಳಿದ ಉಪದೇಶವನ್ನು ಏಕಾಗ್ರ ಚಿತ್ತದಿಂದ ನೀನು ಕೇಳಿದ್ದಿ. ನಿನ್ನ ಮೋಹವು ನಷ್ಟವಾಯಿತೋ?" ಎಂದು

ಶ್ರೀಕೃಷ್ಣನು ಪ್ರಶ್ನೆ ಮಾಡುತ್ತಾನೆ. ಅರ್ಜುನನು ಹೇಳುತ್ತಾನೆ- "ಎಲೋ ಶ್ರೀಕೃಷ್ಣನೇ! ನಿನ್ನ ಅನುಗ್ರಹದಿಂದ ನನ್ನ ಅಜ್ಞಾನವೆಲ್ಲವೂ ನಷ್ಟವಾಯಿತು. ನನಗೆ ಹಿಂದಿನ ಸ್ಮರಣೆ ಬರಲು ಆರಂಭವಾಗಿದೆ. ನನಗೆ ಈಗ ಏನೂ ಸಂದೇಹವಿಲ್ಲ. ನಿನ್ನ ಉಪದೇಶ ಪ್ರಕಾರ ನಾನು ಮಾಡುತ್ತೇನೆ."

ಸಂಜಯನು ಹೇಳುತ್ತಾನೆ: "ಈ ಪ್ರಕಾರವಾದ ವಾಸುದೇವಾರ್ಜುನರ ಸಂವಾದವನ್ನು ನಾನು ಕೇಳಿದೆನು. ನನಗೆ ಆಶ್ಚರ್ಯವೂ, ರೋಮಾಂಚನವೂ ಆಗುತ್ತದೆ. ವೇದವ್ಯಾಸದೇವರ ಅನುಗ್ರಹದಿಂದಲೇ ಕುರುಕ್ಷೇತ್ರದಲ್ಲಿ ನಡೆದ ಅತ್ಯಂತ ಗುಹ್ಯವಾದ ಈ ಉಪದೇಶವು ಹಸ್ತಿನಾವತಿಯಲ್ಲಿದ್ದ ನನಗೆ ಕೇಳಿಸಿತು. ಈ ಉಪದೇಶವು ಸಾಕ್ಷಾತ್ ಶ್ರೀಕೃಷ್ಣನ ಮುಖದಿಂದಲೇ ಆಗಿದೆ. ಅದ್ಭುತವಾದ ಈ ಸಂವಾದವನ್ನು ಸ್ಮರಣೆ ಮಾಡುತ್ತ ಮಾಡುತ್ತ ನಾನು ಮತ್ತೆ ಮತ್ತೆ ಸಂತೋಷದಲ್ಲಿ ಇದ್ದೇನೆ. ಪರಮಾತ್ಮನ ಅತ್ಯದ್ಭುತವಾದ ವಿಶ್ವರೂಪವನ್ನು ಸ್ಮರಿಸಿ ಬಹಳ ಆಶ್ಚರ್ಯವು ನನಗಾಗುತ್ತಿದೆ. ನನಗೆ ವಿಶೇಷವಾದ ಸಂತೋಷವಾಗಿದೆ.

ಎಲೋ ಧೃತರಾಷ್ಟ್ರನೇ! ಯಾರಿಗೆ ಜಯವಾಗುತ್ತದೆಂದು ನೀನು ಕೇಳಿದರೆ, ಸರ್ವಸ್ವಾಮಿಯಾದ ಶ್ರೀಕೃಷ್ಣನು, ಧನುರ್ಧಾರಿಗಳಲ್ಲಿ ಶ್ರೇಷ್ಠನಾದ ಅರ್ಜುನನು ಯಾವ ಪಕ್ಷದಲ್ಲಿ ಇದ್ದಾರೆಯೋ, ಆ ಪಕ್ಷಕ್ಕೆ ಎಲ್ಲಾ ಸಂಪತ್ತು, ವಿಶೇಷವಾದ ಜಯವು, ರಾಜ್ಯಲಕ್ಷ್ಮಿಯು ನಿಶ್ಚಲವಾಗಿರುತ್ತದೆ ಎಂದು ನನ್ನ ನಿಶ್ಚಯವು."

ಇಲ್ಲಿಗೆ ಗೀತೆಯು ಸಮಾಪ್ತಿಯು. ಇದುವರೆಗೆ ಹೇಳಿದ ಉಪನ್ಯಾಸವು ಶ್ರೀ ಮಧ್ವಾಂತರ್ಗತ ಶ್ರೀ ಸೀತಾಪತಿ ಶ್ರೀ ರಾಮಚಂದ್ರನಿಗೆ ಸಮರ್ಪಿತವಾಗಲಿ.

ಹೇವಿಲಂಬಿನಾಮ ಸಂವತ್ಸರ ಭಾದ್ರಪದ ಶುದ್ಧ ಪೌರ್ಣಿಮಾ

ಶ್ರೀಕೃಷ್ಣಾರ್ಪಣಮಸ್ತು.

ಅರ್ಜುನನು ದಿವ್ಯ ಚಕ್ಷುಸ್ಸಿನಿಂದ
ನೋಡಿದ ಎಲ್ಲಾ ಪ್ರಮೇಯವು ಸತ್ಯವೇ
ಆಗಬೇಕು. ಸುಳ್ಳನ್ನು ತೋರಿಸುವ
ಚಕ್ಷುಸ್ಸು ದಿವ್ಯವಾಗಲಾರದು. ಆ ದಿವ್ಯ
ಚಕ್ಷುಸ್ಸಿನಿಂದ ಸರ್ವ ಜಗತ್ತನ್ನು,
ಪರಮಾತ್ಮನ ಅನಂತಗುಣಗಳನ್ನು,
ಅನಂತ ರೂಪಗಳನ್ನು ಅರ್ಜುನನು
ನೋಡಿದ್ದಾನೆ. ಆದುದರಿಂದ ಈ ಜಗತ್ತು,
ಪರಮಾತ್ಮ, ಅವನ ಗುಣಗಳು ಎಲ್ಲವೂ
ಸತ್ಯವೆಂದೇ ನಿಶ್ಚಯವಾಗುತ್ತದೆ.

ಗೀತೆಯು ಜಗನ್ಮಿಥ್ಯಾತ್ವವನ್ನು, ನಿರ್ಗುಣ
ಬ್ರಹ್ಮನನ್ನು ಹೇಳಲಿಕ್ಕೆ ಸರ್ವಥಾ
ಹೊರಟಿಲ್ಲವೆಂಬುದನ್ನು ಇಲ್ಲಿ ಚೆನ್ನಾಗಿ
ತಿಳಿಯಬಹುದು.

-ಶ್ರೀ ಶ್ರೀವಿದ್ಯಾಮಾನ್ಯತೀರ್ಥ ಶ್ರೀಪಾದರು

